ಶ್ರೀಮದ್ವಿಶಿಷ್ಟಾದ್ವೈತ ಸಿದ್ಧಾಂತ ರತ್ನಮಾಲಾ
ದ್ವಿತೀಯ ರತ್ನವು—ಹನ್ನೊಂದನೆಯ ಸಂಚಿಕೆಯು

ಶ್ರೀಮನ್ನಿಗಮಾಂತ ಮಹಾದೇಶಿಕಪ್ರಣೀತ

# ಶ್ರೀಮದ್ರಹಸ್ಯತ್ರಯಸಾರದ

## ಗತಿಚಿಂತನಾಧಿಕಾರ ಏಕವಿಂಶಃ.

## ಪರಿಪೂರ್ಣ ಬ್ರಹ್ಮಾನುಭವಾಧಿಕಾರೋ ದ್ವಾವಿಂಶಃ.

---

ವಿದ್ಯಾಭ್ಯಾಸದ ಇಲಾಖಾ ರಿಟೈರ್ಡ್ ಸರ್ಕಲ್ ಇನ್ಸ್‌ಪೆಕ್ಟರು
ಸಿ. ಯಂ. ವಿಜಯರಾಘವಾಚಾರ್ಯರಿಂದ
ರಚಿಸಲ್ಪಟ್ಟ

**ಆಚಾರ್ಯಹೃದಯಾನ್ವೇಷಿಣೀ**

ಎಂಬ ಕನ್ನಡ ಅರ್ಥ ತಾತ್ಪರ್ಯಗಳೊಂದಿಗೆ ಮುದ್ರಿಸಲ್ಪಟ್ಟಿರುತ್ತದೆ.

---



ಬೆಂಗಳೂರು ಸಿಟಿ

೧೯೩೫

ಕ್ರಯ ೧೨ ಆಣೆಗಳು

ಶ್ರಿಯೈ ನಮಃ

ಶ್ರೀನಿವಾಸಾಯ ನಮಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ 

    

ಶ್ರೀಮನ್ನಿಗಮಾನ್ತ ಮಹಾದೇಶಿಕ ವಿರಚಿತ

ಶ್ರೀಮದ್ರಹಸ್ಯತ್ರಯಸಾರೇ 

# ಗತಿಚಿನ್ತನಾಧಿಕಾರಃ. ೨೧

**ಜ್ವಲನ ದಿವಸ ಜ್ಯೋತ್ಸ್ನಾ ಪಕ್ಷೋತ್ತರಾಯಣ ವತ್ಸರಾನ್ ।**
**ಪವನ ತಪನ ಪ್ರಾಲೇಯಾಂಶೂನಿರಮ್ಮದ ಚಿರದ್ಯುತೀನ್ ॥**

---

ಹಿಂದಿನ ಅಧಿಕಾರದಲ್ಲಿ ಪ್ರಪನ್ನನ ದಿವ್ಯ ವೈಕುಂಠಯಾತ್ರೆಗೆ ಉಪಕ್ರಮದಲ್ಲಿ ಮಾಡಿಕೊಳ್ಳುವ, ದೇಹದೊಳಗೇನೇ ಇರುವಾಗ ನಡೆಯುವ ಏರ್ಪಾಡುಗಳು ತಿಳಿಸಲ್ಪಟ್ಟವು. ಈ ಅಧಿಕಾರದಲ್ಲಿ ಆತನು ತನ್ನ ಸ್ಥೂಲದೇಹವನ್ನು ಬಿಟ್ಟು ಪರಮಪದಕ್ಕೆ ಹೋಗುವ ಮಾರ್ಗವು ಯಾವುದೆಂಬುದೂ, ಆ ಮಾರ್ಗವನ್ನು ತೋರಿಸತಕ್ಕವರು ಯಾರು, ಅವರುಗಳಿಂದ ಉಂಟಾಗುವ ಸತ್ಕಾರಗಳು ಯಾವುವು ಎಂಬುದು ಉಪದೇಶಿಸಲ್ಪಡುತ್ತವೆ. ಈ ಮಾರ್ಗಕ್ಕೆ ಅರ್ಚಿರಾದಿ ಮಾರ್ಗವೆಂದೂ ದೇವಯಾನವೆಂದೂ ಹೆಸರು. ಗೀತೆಯಲ್ಲಿ ಇದಕ್ಕೆ ಶುಕ್ಲಗತಿ ಎಂಬ ಹೆಸರು ಕೊಡಲ್ಪಟ್ಟಿರುತ್ತದೆ. ಈ ಮಾರ್ಗದಲ್ಲಿ ಅಗ್ನಿ ಅಹಸ್ಸು ಮೊದಲಾದ ಹನ್ನೆರಡು ಅಭಿಮಾನ ದೇವತೆಗಳು ಸರ್ವೇಶ್ವರನಿಂದ ನಿಯಮಿಸಲ್ಪಟ್ಟಿರುತ್ತಾರೆ. ಇವರುಗಳಿಗೆ ಆತಿವಾಹಿಕ ದೇವತೆಗಳೆಂದು ಹೆಸರು. ಪ್ರಪನ್ನನಾದವನು ತನಗೆ ಹೀಗೆ ಪ್ರಾಪ್ತವಾಗುವ ಸದ್ಗತಿಯನ್ನೂ, ಆತನು ಹೋಗುವ ಮಾರ್ಗದ ಅನುಸಂಧಾನದುಪಯೋಗವನ್ನೂ, ಈ

**ಜಲಧ (ಚ) ರಪತಿಂ ದೇವಾಧೀಶಂ ಪ್ರಜಾಪತಿ ಮಾಗತ ।**
**ಸ್ತರತಿ ವಿರಜಾಂ ದೂರೇವಾಚ ಸ್ತತಃ ಪರಮದ್ಭುತಂ ॥೪೬॥**

ಅಧಿಕಾರದಲ್ಲಿ ಹೇಳುವದರಿಂದ ಇದಕ್ಕೆ ಗತಿಚಿಂತನಾಧಿಕಾರವೆಂಬ ಹೆಸರು. ಆದರೆ ಸಾರಪ್ರಕಾಶಿಕಾ ವ್ಯಾಖ್ಯಾತೃಗಳಾದ ಭಾರದ್ವಾಜ ಶ್ರೀನಿವಾಸಾಚಾರ್ಯರು ಮಾತ್ರ ಗತಿವಿಶೇಷಾಧಿಕಾರವೆಂದು ಹೇಳಿರುತ್ತಾರೆ. ಇತರ ನಾಲ್ಕು ವ್ಯಾಖ್ಯಾನಗಳಿಂದ ಶ್ರೀ ಭಾಷ್ಯಂ ಶ್ರೀನಿವಾಸಾಚಾರ್ಯರ ಸಾರದೀಪಿಕೆಯಲ್ಲೂ, ಶ್ರೀಮದ್ಗೋಪಾಲ ಮಹಾದೇಶಿಕರ ಉತ್ತರ ಸಾರಾಸ್ವಾದಿನಿಯಲ್ಲೂ, ಶ್ರೀಶೈಲ ಶ್ರೀನಿವಾಸಾಚಾರ್ಯರ ಸಾರವಿವರಣೆಯಲ್ಲೂ, ಶ್ರೀ ಪರಕಾಲ ಸಂಯಮೀಂದ್ರರ ಸಾರಪ್ರಕಾಶಿಕೆಯಲ್ಲೂ ಗತಿಚಿಂತನಾಧಿಕಾರವೆಂಬ ಪ್ರಯೋಗವೇ ಇದೆ.

**ಅರ್ಥ** :— **ಜ್ವಲನ** - ಅಗ್ನಿ, **ದಿವಸ** - ಅಹಸ್ಸು, **ಜ್ಯೋತ್ಸ್ನಾ ಪಕ್ಷ** - ಬೆಳದಿಂಗಳಿರುವ ಪಕ್ಷ ಎಂದರೆ ಶುಕ್ಲಪಕ್ಷ, **ಉತ್ತರಾಯಣ**, **ವತ್ಸರಾನ್** - ಸಂವತ್ಸರಗಳನ್ನು, **ಪವನ** - ವಾಯು, **ತಪನ** - ಸೂರ್ಯನು, **ಪ್ರಾಲೇಯಾಂಶು** - ಹಿಮಾಂಶವು, ಚಂದ್ರನು, ಇವರುಗಳನ್ನು, **ಕ್ರಮಾತ್** - ಕ್ರಮವಾಗಿ, ಎಂದರೆ ಮೇಲೆ ಹೇಳಿದ ಕ್ರಮದಿಂದ ಎಂಬರ್ಥವು, **ಅಚಿರದ್ಯುತಿಮ್** - ಕ್ಷಣಕಾಲದ ತೇಜಸ್ಸು ಎಂಬುದರಿಂದ ವಿದ್ಯುತ್ತನ್ನು, **ಜಲಧರಪತಿಂ** - ಮೇಘಗಳಿಗೆ ಪತಿಯಾದ ವರುಣನನ್ನು, **ದೇವಾಧೀಶಮ್**-ದೇವತೆಗಳಿಗೆ ಸ್ವಾಮಿಯಾದ ಇಂದ್ರನನ್ನು, **ಪ್ರಜಾಪತಿಂ** - ಬ್ರಹ್ಮನನ್ನೂ ಕುರಿತು, **ಆಗತಃ** - ಬರಮಾಡಿಕೊಳ್ಳಲ್ಪಟ್ಟವನಾಗಿ, **ವಿರಜಾಂ** - ವಿರಜೆಯೆಂಬ ನದಿಯನ್ನು, **ತರತಿ** - ದಾಟುತ್ತಾನೆ, ದಾಟುವನು ಎಂಬರ್ಥವು, **ತತಃಪರಂ**-ಆ ವಿರಜೆಯ ಆಚೆಗೆ ಅಥವಾ ವಿರಜೆಯನ್ನು ಸ್ನಾನಮಾಡಿ ದಾಟಿದ ನಂತರ, **ಅದ್ಭುತಂ**-ಅತ್ಯಾಶ್ಚರ್ಯಕರವಾದುದು ದಿವ್ಯವೈಕುಂಠವು, **ವಾಚಃ** - ವಾಕ್ಕಿಗೆ, **ದೂರೇ** - ದೂರವಾಗಿರತಕ್ಕದ್ದು, ಭವತಿ ಎಂದು ಇಲ್ಲಿ ಕ್ರಿಯಾಪದವನ್ನಿಟ್ಟುಕೊಳ್ಳಬಹುದು. ಅದರ ಮಹಿಮೆಯನ್ನು ವರ್ಣಿಸಲು ವಾಕ್ಕಿಗೂ ಕೂಡ ಸಾಧ್ಯವಲ್ಲವು ಎಂಬರ್ಥವು. ಅಥವಾ **ವಾಚಃ ದೂರೇ** - ವಾಕ್ಕಿಗೂ ಕೂಡ ದೂರವಾಗುವ ಹಾಗೆ, **ಅದ್ಭುತಂ** - ಅತ್ಯಾಶ್ಚರ್ಯರೂಪ ಪದವಾದ ಪರಮಾತ್ಮನನ್ನು, ಇಲ್ಲಿಯೂ ತರತಿ ಎಂಬ ಕ್ರಿಯಾಪದವನ್ನು ಇಟ್ಟುಕೊಂಡು, ಹೊಂದುವನೆಂಬರ್ಥವನ್ನು ಮಾಡಬಹುದು ಇಲ್ಲಿ ಈ ಅಭಿಮಾನ ದೇವತೆಗಳಿಂದ ಮಾರ್ಗ ತೋರಿಸಲ್ಪಟ್ಟವನಾಗಿ ಮತ್ತು ಸತ್ಕರಿಸಲ್ಪಟ್ಟವನಾಗಿ, ವಿರಜೆಯನ್ನು ದಾಟಿ ಅತ್ಯದ್ಭುತವಾದ ವೈಕುಂಠವನ್ನು ಸೇರುವನು ಎಂಬರ್ಥವು.

ತಾತ್ಪರ್ಯ :—ಸುಷುಮ್ನಾ ನಾಡಿಯನ್ನು ಪ್ರವೇಶಿಸಿ ಸ್ಥೂಲ ದೇಹತ್ಯಾಗ ಮಾಡಿದ ನಂತರ ಈ ಪ್ರಪನ್ನನಿಗೆ ಪ್ರಾಪ್ತವಾಗುವ ಅರ್ಚಿರಾದಿ ಗತಿಯ ಮತ್ತು ಆ ಮಾರ್ಗದಲ್ಲಿ ನಿಯಮಿಸಲ್ಪಟ್ಟಿರುವ ಹನ್ನೆರಡು ಜನ ಆತಿವಾಹಿಕರಲ್ಲಿ ಪ್ರತಿಯೊಬ್ಬನೂ ಈತನನ್ನು ಬರಮಾಡಿಕೊಂಡು ಆತನನ್ನು ಸತ್ಕರಿಸಿ ತನ್ನ ಎಲ್ಲೆಯವರೆಗೂ ಕರೆದುಕೊಂಡು ಹೋಗಿ ಬಿಡುವ, ಪ್ರಕಾರವನ್ನು ತಿಳಿಸುತ್ತಾರೆ.

ಈ ಮೇಲಿನ ಮಾರ್ಗವು ಪ್ರಪನ್ನರಿಗೆ ಮಾತ್ರವೇ ವಿನಾ, ಪುನರ್ಜನ್ಮವನ್ನು ಹೊಂದುವವರಿಗಲ್ಲವು ಇವರುಗಳು ಮಿಕ್ಕ ನೂರು ನಾಡಿಗಳಲ್ಲಿ ಯಾವುದಾದರೂ ಒಂದನ್ನು ಸರ್ವೇಶ್ವರ ಸಂಕಲ್ಪಾನುಸಾರ ಪ್ರವೇಶಿಸಿ, ಧೂಮಾದಿ ಮಾರ್ಗವನ್ನು ಹೊಂದಿ ಪುನರ್ಜನ್ಮವನ್ನು ಎತ್ತುವರು ಇದರ ಕ್ರಮವು ಛಾಂದೋಗ್ಯಾದಿ ಶ್ರುತಿಗಳಲ್ಲಿ ಉಪಪಾದಿತವಾಗಿರುತ್ತದೆ ಇದು ಈಗ ಪ್ರಕೃತವಲ್ಲವು.

ಈ ಅರ್ಚಿರಾದಿ ಗತಿ ರೂಪವಾದ ಮಾರ್ಗವೇನು ಎಲ್ಲಾ ಪ್ರಪನ್ನರಿಗೂ ಒಂದೆಯೇ ಅಥವಾ ಅನೇಕವಿವೆಯೇ ಎಂಬ ಚರ್ಚೆಯಲ್ಲಿ, ಅರ್ಚಿರಾದಿನಾ ತತ್ಪ್ರಥಿತೇಃ ಎಂಬ ಸೂತ್ರದಲ್ಲಿ, ವ್ಯಾಸಮಹರ್ಷಿಯು, ಎಲ್ಲಾ ಪ್ರಪನ್ನರಿಗೂ ಅರ್ಚಿರಾದಿ ರೂಪ ರಾಜಮಾರ್ಗವು ಒಂದೇ ಎಂದು ಸಿದ್ಧಾಂತಿಸಿರುತ್ತಾರೆ ಪುರಾಣಾದಿಗಳಲ್ಲಿ ಬೇರೆ ಮಾರ್ಗಗಳು ಹೇಳಿರಬಹುದು ಸರ್ವ ಶ್ರುತಿಗಳೂ ಅರ್ಚಿರಾದಿ ಮಾರ್ಗವನ್ನೇ ಬೋಧಿಸುವದರಿಂದ ಪ್ರಪನ್ನರಿಗೆಲ್ಲಾ ಮಾರ್ಗ ಒಂದೇ ಎಂಬಭಿಪ್ರಾಯವು ಎರಡನೆಯ ವಿಷಯದಲ್ಲಿ ನಾವು ಗ್ರಹಿಸತಕ್ಕದ್ದೇನೆಂದರೆ :—ಈ ಹನ್ನೆರಡು ಅಭಿಮಾನಿ ದೇವತೆಗಳೇನು, ಅವರವರುಗಳ ಸ್ಥಳದಲ್ಲಿ ನಿಂತಿದ್ದು, ದೊಡ್ಡಮನುಷ್ಯನ ಮೋಟಾರ್ ಕಾರ್ ಬಂದಾಗ ಕೈ ತೋರಿಸಿ ಮಾರ್ಗ ತೋರಿಸುವ ಪೋಲೀಸಿನವರ ಹಾಗೆಯೇ ಎಂದರೆ, ಹಾಗಲ್ಲವು. ಈ ದಿವ್ಯ ವೈಕುಂಠ ಯಾತ್ರೆಯನ್ನು ಹೊಂದಲು ಶ್ರಿಯಃಪತಿಯಿಂದಾಜ್ಞಪ್ತರಾಗಿರುವದರಿಂದ, ಇಂತಹ ಪ್ರಪನ್ನರನ್ನು ಎದುರುಗೊಂಡು ಬಂದು ಸತ್ಕರಿಸಿ ತಮ್ಮ ಎಲ್ಲೆಯವರೆಗೂ ಕರೆದುಕೊಂಡುಹೋಗಿ ಬಿಟ್ಟು ಮುಂದಿನ ಆತಿವಾಹಿಕದೇವತೆಯಿಂದ ಬರಮಾಡಿಕೊಳ್ಳಲ್ಪಡುವರೆಂಬ ಭಾವವು. ಈ ಅಭಿಪ್ರಾಯವು "ಆತಿವಾಹಿಕಾಸ್ತಲ್ಲಿಙ್ಗಾತ್" ಎಂಬ ಸೂತ್ರದಲ್ಲಿ ಉಪಪಾದಿಸಲ್ಪಟ್ಟಿರುತ್ತದೆ "ಆತಿವಾಹಕ" ಶಬ್ದವೇ ಕರೆದುಕೊಂಡು ಹೋಗುವವರೆಂಬರ್ಥವನ್ನು ಸೂಚಿಸುತ್ತದೆ ಈ ಆತಿವಾಹಕರಲ್ಲಿ ವೈದ್ಯುತನನ್ನೇ ಶ್ರುತಿಯಲ್ಲಿ "ಸ ಏನಾನ್ ಬ್ರಹ್ಮಗಮಯತಿ" ಎಂದು ಹೇಳಿರುವದರಿಂದ ವೈದ್ಯುತ ನೆಂಬ ಅಮಾನವನು ಪರಬ್ರಹ್ಮನಲ್ಲಿಗೆ ಕರೆದುಕೊಂಡು ಹೋಗುವನು. ವೈದ್ಯುತನಾದಮೇಲೆ ಇರುವ ವರುಣ, ಇಂದ್ರ, ಪ್ರಜಾಪತಿಗಳಾದರೋ ಅನುಗ್ರಾಹಕರಾಗಿ ಅವರು ಆತಿವಾಹಕರಲ್ಲೇ ಸೇರಿದವರೆಂದು ತಿಳಿಯತಕ್ಕದ್ದು.

೩. ಮೂರನೆಯ ವಿಷಯವೇನೆಂದರೆ, ಈ ಅತಿವಾಹಿಕರು ಇರುವ ಕ್ರಮ ಹೇಗೆ ? ಯಾರಾದ ನಂತರ ಯಾರು ? ಎಂಬುದು

ಈ ಕ್ರಮವನ್ನು ಬೋಧಿಸುವ ಮುಖ್ಯ ಶ್ರುತಿಗಳು ಯಾವುವೆಂದರೆ :—

೧. ಛಾಂದೋಗ್ಯ (೪. ೧೫. ೫ ೬) **"ಅಥ ಯದು ಚಾಸ್ಮಿಂ ಚ್ಛವ್ಯಂ ಕುರ್ವನ್ತಿ, ಯದು ಚನ, ತೇರ್ಚಿ ಷಮೇವಾಭಿ ಸಮ್ಭವನ್ತಿ, ಅರ್ಚಿ ಷೋಽಹ ರಹ್ನ ಆಪೂರ್ಯಮಾಣ ಪಕ್ಷ, ಮಾಪೂರ್ಯಮಾಣ ಪಕ್ಷಾದ್ಯಾ ಷಡುದ ಙ್ಙೇತಿ ಮಾಸಾಂಸ್ತಾ, ಮಾಸೇಭ್ಯ ಸ್ಸಂವತ್ಸರಂ, ಸಂವತ್ಸರಾದಾದಿತ್ಯ, ಮಾದಿತ್ಯಾಚ್ಚ ನ್ದ್ರಮಸಂ, ಚನ್ದ್ರಮಸೋ ವಿದ್ಯುತಂ, ತತ್ಪುರುಷೋಽ ಮಾನವ, ಸ್ಸ ಏನಾ ಬ್ರಹ್ಮಗಮಯತ್ಯೇಷದೇವ ಪಥೋ ಬ್ರಹ್ಮಪಥಃ, ಏತೇನ ಪ್ರತಿಪದ್ಯಮಾನಾ ಇಮಂ ಮಾನವ ಮಾವರ್ತಂ ನಾವರ್ತನ್ತೇ ನಾವರ್ತನ್ತೇ"** ಇವರ ಅರ್ಥವೇನೆಂದರೆ:— "ಬ್ರಹ್ಮವಿತ್ತಿನ ವಿಷಯದಲ್ಲಿ ಪುತ್ರರು ಪ್ರೇತಕಾರ್ಯವನ್ನು ಮಾಡಿದರೂ ಸರಿಯೇ, ಬಿಟ್ಟರೂ ಸರಿಯೇ, ಅಂತವರು ಮೊದಲು ಅರ್ಚಿ ಎಂದರೆ ಅಗ್ನ್ಯಭಿಮಾನ ದೇವತೆಯಾದ ಅತಿ ವಾಹಕನನ್ನು ಹೊಂದುತ್ತಾರೆ ಆತನು ಬಂದು ಸನ್ಮಾನಿಸಿ ಈತನನ್ನು ಕರೆದು ಕೊಂಡು ಹೋಗುವನು ಅರ್ಚಿಸ್ಸಿನಿಂದ ಅಹಸ್ಸಿನಭಿಮಾನದೇವತೆಯನ್ನೂ, ಅಹಸ್ಸಿನಿಂದ ಶುಕ್ಲಪಕ್ಷಾಭಿಮಾನ ದೇವತೆಯನ್ನೂ, ಅಲ್ಲಿಂದ ಉತ್ತರಾಯಣಾಭಿ ಮಾನ ದೇವತೆಯನ್ನೂ, ಅಲ್ಲಿಂದ ಸಂವತ್ಸರಾಭಿಮಾನ ದೇವತೆಯನ್ನೂ, ಅಲ್ಲಿಂದ ಆದಿತ್ಯನನ್ನೂ, ಆದಿತ್ಯನಿಂದ ಚಂದ್ರನನ್ನೂ, ಚಂದ್ರನಿಂದ ವಿದ್ಯುತ್ತನ್ನೂ, ಹೀಗೆ ಈ ಅಭಿಮಾನ ದೇವತೆಗಳನ್ನು ಹೊಂದುವನು. ಇಂತಹ ಅಮಾನವನೆಂದು ಹೇಳಿಸಿಕೊಳ್ಳುವ ಅತಿವಾಹಕನು ಬ್ರಹ್ಮವಿತ್ತಿಗೆ ಮಾರ್ಗ ತೋರಿಸಿ ಪರಬ್ರಹ್ಮನ ಹತ್ತಿರಕ್ಕೆ ಕರೆದುಕೊಂಡು ಹೋಗುವನು. ಇದೇ ದೇವಯಾನವು. ಇದೇ ಅವ ರುಗಳು ತಮ್ಮ ತಮ್ಮ ಸರಹದ್ದಿನಲ್ಲಿ ಕರೆದುಕೊಂಡು ಹೋಗುವ ಮಾರ್ಗವು. ಈ ಮಾರ್ಗದಲ್ಲಿ ಬಂದವರು ಘಟೀ ಯಂತ್ರದ ಹಾಗೆ ಸುತ್ತುವ ಜನನ ಮರಣಾದಿ ಗಳಿಗೆ ಕಾರಣಭೂತವಾದ ಮನುಷ್ಯಾದಿ ಶರೀರರೂಪ ಸಂಸಾರಚಕ್ರವನ್ನು ಪುನಃ ಹೊಂದುವದಿಲ್ಲವು" ಇಲ್ಲಿ ಹನ್ನೆರಡರಲ್ಲಿ ಕೆಲವು ಕ್ರಮವಾಗಿ ಹೇಳಲ್ಪಟ್ಟು ಮಿಕ್ಕವು ಹೇಳಲ್ಪಡಲಿಲ್ಲವು.

೨. ಹಾಗೆಯೇ ಕೌಷೀತಕೀಯಲ್ಲಿ **"ಸ ಏತಂ ದೇವಯಾನಂ ಪನ್ಥಾನಮಾ ಪದ್ಯಾಗ್ನಿಲೋಕ ಮಾಗಚ್ಛತಿ, ಸವಾಯುಲೋಕಂ, ಸವರುಣಲೋಕಂ, ಸ ಆದಿತ್ಯಲೋಕಂ, ಸ ಇಂದ್ರಲೋಕಂ, ಸ ಪ್ರಜಾಪತಿಲೋಕಂ"** (೧.೩.) ಆ ಬ್ರಹ್ಮವಿತ್ತಾದವನು ಈ ದೇವಯಾನ ಮಾರ್ಗವನ್ನವಲಂಬಿಸಿ, ಅಗ್ನಿಲೋಕ, ಹಾಗೆಯೇ ವಾಯುಲೋಕ, ಆದಿತ್ಯಲೋಕ, ಇಂದ್ರಲೋಕ, ಚತುರ್ಮುಖ

ಲೋಕ, ಅನಂತರ ಪರಬ್ರಹ್ಮಲೋಕವಾದ ವೈಕುಂಠವನ್ನು ಹೊಂದುವನು ಎಂದು ಹೇಳಿರುತ್ತದೆ. ಇಲ್ಲಿ ಅರ್ಚಿಯನ್ನು ಹೇಳಿ, ಅಹಸ್ಸು, ಶುಕ್ಲಪಕ್ಷ, ಉತ್ತರಾಯಣಾದಿಗಳನ್ನು ಹೇಳದೆ, ಅನಂತರ ವಾಯು, ವರುಣ, ಆದಿತ್ಯ, ಇಂದ್ರ, ಚತುರ್ಮುಖ ಬ್ರಹ್ಮಲೋಕಗಳನ್ನು ಮಾತ್ರ ಹೇಳಿರುತ್ತದೆ. ಇಲ್ಲಿಂದ ಬದರಿಕಾಶ್ರಮಕ್ಕೆ ಮಾರ್ಗ ಹೇಗೆ ಎಂದರೆ ಮಧ್ಯೆ ಹನ್ನೆರಡು ಪಟ್ಟಣಗಳಿದ್ದರೆ, ಅವುಗಳಲ್ಲಿ ಕೆಲವನ್ನು ಹೇಳಿದಹಾಗೆ ಈ ಉಪನಿಷತ್ತು ತಿಳಿಸುತ್ತದೆ.

೩ ಹಾಗೆಯೇ ಬೃಹದಾರಣ್ಯಕದಲ್ಲಿ "**ಯ ಏವ ಮೇತ ದ್ವಿದುರ್ಯೇಚೇಮೇಽರಣ್ಯೇ ಶ್ರದ್ಧಾಂ ಸತ್ಯಮುಪಾಸತೇ, ತೇರ್ಚಿಷಮಭಿಸಂಭವನ್ತಿ, ಅರ್ಚಿಷೋಽಹ, ರಹ್ನ ಆಪೂರ್ಯಮಾಣ ಪಕ್ಷ, ಮಾಪೂರ್ಯಮಾಣ ಪಕ್ಷಾದ್ಯಾನ್ ಷಣ್ಮಾಸಾನುದಙ್ಙಾದಿತ್ಯ ಏತಿ ಮಾಸಾನ್, ಮಾಸೇಭ್ಯೋ ದೇವಲೋಕಂ, ದೇವಲೋಕಾದಾದಿತ್ಯ ಮಾದಿತ್ಯಾದ್ವೈದ್ಯುತಂ ವೈದ್ಯುತಾತ್ಪುರುಷೋಽಮಾನವ ಸ ಏತ್ಯ ಬ್ರಹ್ಮಲೋಕಾನ್ ಗಮಯತಿ**" (ಬೃ. ೮. ೨ ೧೫) ಇದು ಪಂಚಾಗ್ನಿ ವಿದ್ಯೆಯ ಪ್ರಕರಣವು. **ಯೇ** - ಯಾರು, **ಏವಂ** - ಈ ಪ್ರಕಾರವಾಗಿ ಎಂದರೆ ದ್ಯು, ಪರ್ಜನ್ಯ, ಏತಲ್ಲೋಕ, ಪುರುಷ, ಯೋಷಿತ್ ರೂಪದ ಪಂಚಾಗ್ನಿಗಳಲ್ಲಿ ಶ್ರದ್ಧಾ, ಸೋಮ, ವೃಷ್ಟಿ, ಅನ್ನ, ರೇತಸ್ಸು, ಸಂಬಂಧದಿಂದ ಸಂಚರಿಸುತ್ತಿರುವ ಜೀವಾತ್ಮನು ಪರಬ್ರಹ್ಮನನ್ನೇ ಆತ್ಮಾವಾಗಿ ಉಳ್ಳವನೆಂದು ಯಾವ ಪಂಚಾಗ್ನಿನಿಷ್ಠರು ತಿಳಿಯುವರೋ ಮತ್ತು ಯಾರು ಅರಣ್ಯದಲ್ಲಿರುವವರಾಗಿ ಶ್ರದ್ಧಾಪುರಸ್ಸರವಾಗಿ, ಸತ್ಯಶಬ್ದವಾಚ್ಯನಾದ ಪರಮಾತ್ಮನನ್ನು ಹೀಗೆಂದು ತಿಳಿದು ಉಪಾಸನೆ ಮಾಡುತ್ತಾರೋ, ಇವರಿಬ್ಬರೂ ಕೊನೆಗೆ ಅರ್ಚ್ಯಭಿಮಾನ ದೇವತೆಯನ್ನು ಹೊಂದುವರು, ಅಲ್ಲಿಂದ ಅಹಸ್ಸು, ಶುಕ್ಲಪಕ್ಷ, ಅಲ್ಲಿಂದ ಉತ್ತರಾಯಣ, ಅಲ್ಲಿಂದ ವಾಯುಲೋಕ, ಆದಿತ್ಯ, ಚಂದ್ರದ್ವಾರಾ ವೈದ್ಯುತ, ಹೀಗೆ ಅಮಾನವನಿಂದ ಪರಬ್ರಹ್ಮನನ್ನು ಹೊಂದುವನು" ಇಲ್ಲಿಯೂ ಕೆಲವು ಹೇಳಲ್ಪಟ್ಟು ಕೆಲವು ಹೇಳಲ್ಪಡಲಿಲ್ಲವು.

ಹೀಗಿರುವದರಿಂದ ಕ್ರಮವನ್ನು ನಿರ್ಧರಿಸುವದರಲ್ಲಿ ಅನೇಕ ಪೂರ್ವಪಕ್ಷಗಳುಂಟಾಗುತ್ತವೆ. ಅವುಗಳನ್ನೆಲ್ಲಾ ಖಂಡಿಸಿ, ಶ್ರೀ ಭಾಷ್ಯದ ನಾಲ್ಕನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಸ್ಥಾಪಿಸಲ್ಪಟ್ಟಿರುತ್ತದೆ ಅದನ್ನನುಸರಿಸಿ ಸ್ವಾಮಿ ನಿಗಮಾಂತ ದೇಶಿಕರವರು ಕ್ರಮವನ್ನು ಈ ಶ್ಲೋಕದಲ್ಲಿ ತೋರಿಸಿರುತ್ತಾರೆ ಈ ಶ್ಲೋಕವನ್ನು ಜ್ಞಾಪಕದಲ್ಲಿಟ್ಟರೆ ಗತಿಚಿಂತನ ಕ್ರಮವು ತೋರಿಬರುತ್ತದೆ. ಈ ಮಾರ್ಗಕ್ರಮವನ್ನೇ ಶ್ರೀ ವಾತ್ಸ್ಯವರದ ದೇಶಿಕರವರನುಗ್ರಹಿಸಿರುವ ಪರಮಾರ್ಥಸ್ತುತಿಯ ಶ್ಲೋಕದಿಂದಲೂ ತಿಳಿಯಬಹುದು. ಅದು ಯಾವುದೆಂದರೆ:-

**ಮುಕ್ತೋರರ್ಚಿರ್ದಿನ ಪೂರ್ವ ಪಕ್ಷ ಷಡುದಙ್ಮಾಸಾಬ್ದ ವಾತಾಂಶುಮದ್ ।**
**ಗ್ಲೌವಿದ್ಯುದ್ವರುಣೇಂದ್ರ ಧಾತೃ ಮಹಿತಸ್ಸೀಮಾಂತ ಸಿಂಧ್ವಾಪ್ಲುತಃ ॥**

ಮುಕ್ತನು ಹೋಗುವ ಮಾರ್ಗವು; ಅರ್ಚಿ, ದಿನ ಪೂರ್ವಪಕ್ಷ ಎಂದರೆ **ಶುಕ್ಲಪಕ್ಷ, ಷಡುದಙ್ಮಾಸವೆಂಬುದರಿಂದ ಉತ್ತರಾಯಣ,** ಅಬ್ದವೆಂಬುವದರಿಂದ **ಸಂವತ್ಸರ, ವಾತವೆಂದರೆ** ವಾಯು, ಅಂಶುಮತ್ ಸೂರ್ಯನು, ಗ್ಲೌ ಚಂದ್ರನು, ವಿದ್ಯುತ್, ವರುಣ, ಇಂದ್ರ, ಧಾತೃ ಎಂಬುದರಿಂದ ಬ್ರಹ್ಮ, ಹೀಗೆ **ಹನ್ನೆರಡು ಅತಿವಾಹಕರ** ಮೂಲಕ ಹೋಗುವನು ಎಂದೂ ಅಲ್ಲಿಂದ ವಿರಜೆಯಲ್ಲಿ **ಸ್ನಾನಮಾಡಿ,** ಮುಂದೆ,

**"ಶ್ರೀ ವೈಕುಂಠ ಮುಪೇತ್ಯ ನಿತ್ಯಮಜಡಂ ತಸ್ಮಿನ್ಪರಬ್ರಹ್ಮಣ ।**
**ಸ್ಸಾಯುಜ್ಯಂ ಸಮವಾಪ್ಯನನ್ದತಿ ಸಮಂ ತೇನೈವ ಧನ್ಯಃ ಪುಮಾನ್ ॥"**

ಎಂದು ಉತ್ತರಾರ್ಧವಿರುತ್ತದೆ. ಶ್ರೀ ವರದ ಮಿಶ್ರರ ಶ್ಲೋಕವಾದ,

**"ಅರ್ಚಿರಹಸ್ಸಿತ ಪಕ್ಷಾನುದಗಯನಾಬ್ದ ಮರುದರ್ಕೇನ್ದೂನ್ ।**
**ಅಪಿವೈದ್ಯುತ ವರುಣೇಂದ್ರ ಪ್ರಜಾಪತೀ ನಾತಿವಾಹಿಕಾನಾಹುಃ ॥"**

ಎಂಬುದೂ ಈ ಶ್ಲೋಕವನ್ನೇ ಸಮರ್ಥಿಸುತ್ತದೆ.

ಈ ಪ್ರಪನ್ನನು ಬ್ರಹ್ಮನಾಡಿಯನ್ನು ಪ್ರವೇಶಿಸುವಾಗಲೂ ಇಂದ್ರಿಯಗಳು, ಮನಸ್ಸು, ಪ್ರಾಣ, **ಭೂತಸೂಕ್ಷ್ಮ,** ಇವುಗಳೊಂದಿಗೆ ಸೂಕ್ಷ್ಮದೇಹದಲ್ಲಿ ಸ್ಥೂಲ ದೇಹವನ್ನು ಬಿಟ್ಟುಬರುವನೆಂದು ಹೇಳಲ್ಪಟ್ಟಿತು. ಈ ಸೂಕ್ಷ್ಮ ಪ್ರಕೃತಿ ದೇಹವನ್ನು ಎಲ್ಲಿ ಬಿಡುವನು ಎಂಬ ಪ್ರಶ್ನೆಗೆ ವಿರಜಾ ನದಿಯಲ್ಲಿ ಅವಗಾಹನೆಯಿಂದ ಈ **ಸೂಕ್ಷ್ಮದೇಹ** ಪರಿತ್ಯಾಗವೆಂದು ಮುಂದೆ ಅಧಿಕಾರೋಪಪಾದನೆಯಲ್ಲಿ ತಿಳಿಸುತ್ತಾರೆ.

## ಅರ್ಚಿರಾದಿಗತಿಯು—೧೨ ಅತಿವಾಹಿಕರು.

ಮುಂದೆ ಈ ದೇವಯಾನ ಅಥವಾ ಅರ್ಚಿರಾದಿ ಗತಿಯನ್ನು ಒಂದು ದೊಡ್ಡ ವಾಕ್ಯದ ಮೂಲಕ ತಿಳಿಸುತ್ತಾರೆ. ಮೊದಲು **ಪುರಪ್ಪಟ್ಟು** ಎಂಬ ಪದವರೆಗೂ ಹಿಂದಿನಧಿಕಾರಾರ್ಥವನ್ನು ಒಂದು ದೃಷ್ಟಾಂತ ಮೂಲಕ ಸಂಗ್ರಹಿಸಿ ತಿಳಿಸುತ್ತಾರೆ. **ಇಪ್ಪಡಿ** - ಹೀಗೆ ಎಂದರೆ ಹಿಂದಿನ ಅಧಿಕಾರದಲ್ಲಿ ತಿಳಿಸಿದ ಹಾಗೆ, **ಮೂರ್ಧನ್ಯ ನಾಡಿಯಿಲೆ** - ಹೃದಯದ ಮಧ್ಯದಲ್ಲಿರುವ ೧೦೧ನೆಯ ನಾಡಿಯಲ್ಲಿ, **ಪ್ರವೇಶಿತನಾನ** - ಪ್ರವೇಶಿಸಲ್ಪಟ್ಟವನಾದ, **ಮುಮುಕ್ಷುವೈ** - ಮೋಕ್ಷಾರ್ಥಿಯನ್ನು ಇಲ್ಲಿ ಪ್ರಪನ್ನನನ್ನು ಎಂಬರ್ಥವು, **ಸ್ಥೂಲ ಶರೀರಮಾಗಿರ** - ಸ್ಥೂಲಶರೀರವೆಂದೆನಿಸುವ, **ಬ್ರಹ್ಮಪುರತ್ತಿಲ್ ನಿನ್ರು** - ವೇದದಲ್ಲಿ ಬ್ರಹ್ಮಪುರವೆಂದು ಹೇಳಿಸಿಕೊಳ್ಳುವ

## ಅರ್ಚಿರಾದಿ ಗತಿಃ, ಆತಿವಾಹಿಕ ನಿರೂಪಣಂಚ.

**(೧) ಇಪ್ಪಡಿ ಮೂರ್ಧನ್ಯನಾಡಿಯಿಲೆ ಪ್ರವೇಶಿತನಾನ ಮುಮುಕ್ಷುವೈ ಸ್ಥೂಲಶರೀರಮಾಗಿರ ಬ್ರಹ್ಮಪುರತ್ತಿಲ್ ನಿನ್ರುಮ್ ಬ್ರಹ್ಮನಾಡಿಯಾಗಿರ ತಲೈವಾಶಲಾಲೇ ವತ್ಸಲನಾನ ಹಾರ್ದ್ದ, ವಾರ್ತ್ತೈ ಶೊಲ್ಲಕ್ಕರ್ರ್ಕಿರ ಮುಖ ವಶ್ಯನಾನ (ಮುಗ್ಧನಾನ) ರಾಜಕುಮಾರನೈ ರಾಜಾ ಎಡುತ್ತುಕ್ಕೊಣ್ಡು ಉಲಾವುಮಾಪ್ಪೋಲೆ ಕೊಂಡು ಪುರಪ್ಪಟ್ಟು,**

---

ಆತನ ದೇಹದಿಂದ **ಬ್ರಹ್ಮನಾಡಿಯಾಗಿರ** - ಬ್ರಹ್ಮನಾಡಿ ಎಂದೆನಿಸುವ, **ತಲೈವಾಶಲಾಲೇ**-ಮುಖ್ಯವಾದ ಬಾಗಲು ಮೂಲಕವಾಗಿ, **ವತ್ಸಲನಾನ ಹಾರ್ದ್ದ**- ಅಂತಹ ಪ್ರಪನ್ನನಲ್ಲಿ ವಿಶೇಷ ವಾತ್ಸಲ್ಯವನ್ನು ಹೊಂದಿರುವ ಹೃದಯಗುಹೆಯಲ್ಲಿರುವ ಸರ್ವೇಶ್ವರನು, ಇದು ಮುಂದೆ ಬರುವ ಅನೇಕ ಕ್ರಿಯಾಪದಗಳಿಗೆಲ್ಲಾ ಕರ್ತೃಪದವು, ಇಷ್ಟು ದಿವಸವೂ ತನ್ನನ್ನಗಲಿ ಇದ್ದು, ಈಗ ತನ್ನಲ್ಲಿ ಶರಣಾಗತನಾಗಿ ಪುನಃ ಬಂದು ಸೇರಿದವನಾದುದರಿಂದ ಆತನಲ್ಲಿ ತುಂಬಾ ವಾತ್ಸಲ್ಯವನ್ನು ತೋರಿ ಏನೇನು ಉಪಕಾರಗಳನ್ನು ಮಾಡುತ್ತಾನೆ ಅಥವಾ ಮಾಡಿಸುತ್ತಾನೆಂಬುದನ್ನು ಈ ಕ್ರಿಯಾಪದಗಳ ಮೂಲಕ ಉಪದೇಶಿಸುತ್ತಾರೆ; ಆದುದರಿಂದ **ಈ ಹಾರ್ದ್ದ** ಎಂಬುವದು, (೧) ಪುರಪ್ಪಟ್ಟು, (೨) ಪಗಸ್ಸಡುತ್ತಿ, (೩) ನಡತ್ತಿ, (೪) ಅನುಭವಿಪ್ಪಿತ್ತು, (೫) **ಪೋಗವಿಡುವಿತ್ತು**, (೬) ಅಕ್ಕರೈಪಡುತ್ತಿ, (೭) **ಕೊಡುತ್ತು**, (೮) ಶೇರ್ತ್ತು, (೯) ಕಿಟ್ಟುವಿತ್ತು, (೧೦) ಎದಿರ್ಕೊಳ್ವಿತ್ತು, (೧೧) ಅಲಂಕರಿಪ್ಪಿತ್ತು, (೧೨) ಪ್ರವೇಶಿಪ್ಪಿತ್ತು, (೧೩) ಕುಡುಕುವಿತ್ತು, (೧೪) ಕಿಟ್ಟುವಿತ್ತು, (೧೫) **ಪಣ್ಣಿ**ವಿತ್ತು, (೧೬) ಪ್ರಕಾಶಿಪ್ಪಿಟ್ಟು, (೧೭) ಕಾಟ್ಟಿ, (೧೮) **ಕೊಂಡ**, (೧೯) ಇರುತ್ತಿ, (೨೦) ಯಿರುಕ್ಕುಮ್, ಎಂಬ ಇವುಗಳಿಗೆಲ್ಲಾ ಕರ್ತೃಪದವು; **ವಾರ್ತ್ತೈ ಶೊಲ್ಲಕ್ಕರ್ರ್ಕಿರ** - ಈಗತಾನೇ ಮಾತುಗಳನ್ನು ಕಲಿಯುತ್ತಾ ಮುದ್ದು ಮಾತುಗಳನ್ನಾಡುವ, **ಮುಖವಶ್ಯನಾನ** - ಸರ್ವಲಾವಣ್ಯಯುಕ್ತ ಮುಖದಿಂದ ತಂದೆಯಾದ ರಾಜನನ್ನೂ ಮತ್ತು ಇತರರನ್ನೂ ವಶಪಡಿಸಿಕೊಳ್ಳುವ ಯೋಗ್ಯತೆಯುಳ್ಳ **ರಾಜಕುಮಾರನೈ** - ರಾಜಕುಮಾರನನ್ನು, **ರಾಜಾ** - ತಂದೆಯಾದ ರಾಜನು, **ಎಡುತ್ತುಕ್ಕೊಂಡು** ಎತ್ತಿಕೊಂಡು, **ಉಲಾವುಮಾಪ್ಪೋಲ್** - ಹೇಗೆ ಪ್ರೀತಿಯಿಂದ ಸುತ್ತುತ್ತಾ ಆಡಿಸುವನೋ, **ಕೊಂಡು ಪುರಪ್ಪಟ್ಟು**- ಹಾಗೆ ಆತನನ್ನು ಕರೆದುಕೊಂಡು ಹೊರಟು ಬಂದು; ಈ ವಾಕ್ಯದಲ್ಲಿ ಮೂರ್ಧನ್ಯ

ನಾಡಿಯೇ ಬೇರೆ, ಬ್ರಹ್ಮನಾಡಿಯೇ ಬೇರೆ, ಎಂದು ಭಾವಿಸತಕ್ಕದ್ದಲ್ಲವು; ಈ ನಾಡಿಗೆ ಮೂರ್ಧನ್ಯ ನಾಡಿ ಎಂಬ ಹೆಸರು ಏತಕ್ಕೆಂಬುದರುಪಪಾದನವಾಗಿ, ಈ ದೇಹವೇ ಬ್ರಹ್ಮಪುರವೆಂದೂ, ಪರಬ್ರಹ್ಮನ ಹತ್ತಿರಕ್ಕೆ ಕರೆದುಕೊಂಡುಹೋಗುವ ಹೆಬ್ಬಾಗಿಲಾಗಿ ಭಾವಿಸತಕ್ಕದ್ದೆಂದೂ ಹೇಳಿರುತ್ತಾರೆ. ಪರಮಭಾಗವತನಾಗಿ, ತನ್ನ ಪಾದ ಕಮಲವನ್ನಾಶ್ರಯಿಸಿದವನಾಗಿರುವ ಚೇತನನು ಇದುವರೆಗೂ ಬರದೆ ಈಗ ಪ್ರಥಮತಃ ತನ್ನ ಪಟ್ಟಣವಾದ ದಿವ್ಯ ವೈಕುಂಠವನ್ನು ಕುರಿತು ಬಂದರೆ ಆತನಿಗೆ ಸುಸ್ವಾಗತವನ್ನು ಕೊಟ್ಟು ಕರೆದುಕೊಂಡು ತನ್ನ ಅರಮನೆಗೆ ಬರಮಾಡಿಕೊಳ್ಳುವದು ಯುಕ್ತವಾದ ಮರ್ಯಾದೆಯಾದುದರಿಂದ ಅದರ ಹೆಬ್ಬಾಗಲಾದ ಬ್ರಹ್ಮನಾಡಿಯಲ್ಲಿದ್ದು ಆತನನ್ನು ತನ್ನ ವೈಕುಂಠಕ್ಕೆ ಕರೆದುಕೊಂಡುಹೋಗುವ ತನ್ನ ಕಡೆಯವರಾದ ಅತಿವಾಹಕರಿಗೆ ಆಜ್ಞಾಪಿಸಿ ಕರೆದುಕೊಂಡುಹೋಗುವನೆಂದು ಭಾವಿಸಬಹುದು. ಅಥವಾ ಈತನ ಸ್ಥೂಲಶರೀರದ ದಹರಕುಹರವಲ್ಲಿದ್ದನು. ಇನ್ನು ಆ ಸ್ಥೂಲಶರೀರವು ಪ್ರೇತವಾಗುವದರಿಂದ ಇನ್ನು ಅಲ್ಲಿ ಹಾರ್ದನಾಗಿರುವ ಆವಶ್ಯಕತೆಯಿಲ್ಲದುದರಿಂದ ಆತನೊಂದಿಗೆ ತಾನೂ ಹೊರಟು, ತನ್ನ ಪ್ರಿಯನಾಗಿ ಜೊತೆಯಲ್ಲಿಯೇ ಇದ್ದ ಈ ಪ್ರಿಯಮಿತ್ರನಿಗೆ ಮಾರ್ಗ ತೋರಿಸುವವನಾಗಿ ಈ ಬ್ರಹ್ಮನಾಡಿ ಎಂಬ ಹೆಬ್ಬಾಗಲನ್ನು ತೋಜೋಮಯವಾಗಿ ಮಾಡಿ ಪ್ರವೇಶಿಸುವ ಹಾಗೆ ಮಾಡುವನೆಂದಾಗಲಿ ತಲ್ವೈವಾಶಲ್ ಎಂದು ಹೇಳಲ್ಪಟ್ಟಿತೆಂದು ಭಾವಿಸಬಹುದು ; ಅಥವಾ ಅರ್ಚಿರಾದಿನಾ ತತ್ಪ್ರಥಿತೇಃ ಎಂಬ ಸೂತ್ರದಲ್ಲಿ ಹೇಳಿರುವ ಹಾಗೆ ಪ್ರಪನ್ನರಿಗೆಲ್ಲಾ ಅರ್ಚಿರಾದಿ ಗತಿಯು ಒಂದೇ ಎಂದೂ ಬೋಧಿಸುವದಕ್ಕಾಗಿಯಾಗಲಿ, ಆ ರಾಜಮಾರ್ಗಪ್ರವೇಶಕ್ಕಾಗಿ ಇದೊಂದೇ ಮುಖ್ಯವಾದ ಬಾಗಲೆಂದು ತಲ್ವೈವಾಶಲೆಂದು ಹೇಳಲ್ಪಟ್ಟಿತು ಇಲ್ಲಿ ಸ್ಥೂಲಶರೀರವನ್ನು ಬ್ರಹ್ಮಪುರವೆಂದು ಹೇಳಿರುವದು ಏತಕ್ಕೆಂದರೆ, ದಹರವಿದ್ಯೋಪಕ್ರಮದಲ್ಲಿ ಶ್ರುತಿಯು, "ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ" ಎಂದು ಹೇಳಿರುವದರಿಂದ ತತ್ಜ್ಞಾಪಕಾರ್ಥವಾಗಿ ಎಂದು ತಿಳಿಯತಕ್ಕದ್ದು. ಅಷ್ಟಗುಣ ವಿಭವೈಶ್ವರ್ಯಾದಿಗಳಿಂದ ಪರತ್ವಮಹತ್ವಗಳನ್ನು ಹೊಂದಿದವನು, ಇಷ್ಟುದಿನವೂ ನಿಕೃಷ್ಟದೆಶೆಯಲ್ಲಿ ಬಿದ್ದವನನ್ನು ಹೀಗೆ ತಾನೇ ಸತ್ಕರಿಸಿ ಕರೆದುಕೊಂಡುಹೋಗುವನೋ ಎಂಬ ಸಂಶಯನಿವೃತ್ತಿಗಾಗಿ ವತ್ಸಲನಾನ ಹಾರ್ದ್ದ ಎಂಬ ಪ್ರಯೋಗವು ದೋಷಯುಕ್ತವಾದ ಶರೀರವನ್ನು ಹೊಂದಿರುವ ವತ್ಸ ಎಂದರೆ ಕರುವಿನಲ್ಲೂ ಕೂಡ ಧೇನುವಿಗೆ ಹೇಗೆ ವಿಶೇಷ ಮಮತೆಯೋ ಹಾಗೆ. ತನ್ನನ್ನಾಶ್ರಯಿಸಿದ ನಂತರ ಆತನಲ್ಲಿ ದೋಷಗಳನ್ನು ಪರಿಗಣಿಸದೆ ಪ್ರೀತಿ ತೋರಿಸಿ ರಕ್ಷಿಸುವ ಗುಣವುಳ್ಳವನು. "ಯಥೈವ ಧೇನುಸ್ಸ್ರವತಿ ಸ್ನೇಹಾದ್ವತ್ಸಸ್ಯ ವತ್ಸಲಾ"

(೨) ೧. "ಮುನ್ನಮ್ ಕಡುಮ್ ಕತಿರೋನ್ಮಣ್ಡಲತ್ತಿ ನನ್ನಿಡುವುಳ್ ಅನ್ನದೋರಿಲ್ಲಿಯಿನೂಡು ಪೋಯ್" ಎನ್ರುಮ್, ೨. "ತೇರಾರ್ ನಿರೈ

---

ಕರುವಿನಲ್ಲಿರುವ ಪ್ರೀತಿಯಿಂದ ಧೇನುವು ತನ್ನ ಕರುವಿನಲ್ಲಿ ವಾತ್ಸಲ್ಯವುಳ್ಳದ್ದಾಗಿ ಹೇಗೆ ಹಾಲನ್ನು ಸ್ರವಿಸುತ್ತದೋ, ಹಾಗೆಯೇ ಸರ್ವೇಶ್ವರನು ತನ್ನ ಕುಮಾರನಾದ ಈ ಚೇತನನಲ್ಲಿರುವ ಪರಮವಾತ್ಸಲ್ಯದಿಂದ ಈ ಮುಂದೆ ಹೇಳಿರುವ ೧೯ ವಿಧವಾದ ಉಪಕಾರಗಳನ್ನೆಲ್ಲಾ ಸುರಿಸುವನು. ಧೇನುವು ಹಾಲನ್ನು ಸುರಿಸುವ ಹಾಗೆ ನಮಗೆ ಅಮೃತವನ್ನು ವರ್ಷಿಸುವನು ಎಂಬರ್ಥವು.

ಹೀಗೆ ವಾತ್ಸಲ್ಯವನ್ನು ಪ್ರದರ್ಶಿಸುವದಕ್ಕಾಗಿ, ಹಿಂದೆ ಉಪೋದ್ಘಾತದಲ್ಲಿ ಉಪಪಾದಿಸಲ್ಪಟ್ಟ ನಿದರ್ಶನವನ್ನೇ ಇಲ್ಲಿಯೂ ಉಪಪಾದಿಸುತ್ತಾರೆ. ಅಲ್ಲಿ ರಾಜಕುಮಾರನು ರಾಜನ ವಿಹಾರ ಕಾಲದಲ್ಲಿ ರಾಜನನ್ನು ಇನ್ನು ಮಾತು ಬರುವದಕ್ಕೆ ಮುಂಚೆಯೇ ಬಿಟ್ಟಗಲಿದ್ದನೆಂದು ಹೇಳಲ್ಪಟ್ಟಿತು. ಈಗ ಆ ತನ್ನ ಬಾಲನೇ ಸ್ವಲ್ಪ ಮಾತು ಕಲಿಯುವ ದೆಶೆಯಲ್ಲಿ ದೈವವಶಾತ್ ತನ್ನಲ್ಲಿಗೆ ಪರಮಗುರು ಕೃಪಾ ಪ್ರಭಾವದಿಂದ ಬಂದಿರುತ್ತಾನೆ. ಹಿಂದೆ ಸರ್ವಾತ್ಮನಾ ಜ್ಞಾನವಿಲ್ಲದ ದೆಶೆಯು ಹೇಳಲ್ಪಟ್ಟಿತು. ಈಗ ಗುರುಗಳು ದಾದಿಮಾರುಗಳ ಹಾಗೆ ಸ್ವಲ್ಪ ಜ್ಞಾನಕೊಟ್ಟು ಒಂದೆರಡು ಮಾತನ್ನು ಕಲಿಸಿರುತ್ತಾರೆ. ಅಂತಹ ಸರ್ವಲಾವಣ್ಯಯುಕ್ತ ಮುಗ್ಧ ಬಾಲನಾಗಿಯೂ ತನ್ನ ಹಾಗೆಯೇ ಗುಣಾಷ್ಟಕಗಳಿಂದ ಕಂಗೊಳಿಸುತ್ತಲೂ ಇರುವ ರಾಜಕುಮಾರನನ್ನು ಕಂಡರೆ ರಾಜನು ಮೋಹಗೊಂಡು ಎತ್ತಿ ಲಾಲಿಸುವ ತೆರದಿ, ಸರ್ವೇಶ್ವರನೂ ಈ ಚೇತನನನ್ನು ತಾನೂ ಸತ್ಕರಿಸಿ, ತನ್ನ ಕಡೆಯುವರನ್ನೂ ಸತ್ಕರಿಸಿ ಕರೆದುಕೊಂಡು ಹೋಗುವ ಹಾಗೆ ಆಜ್ಞಾಪಿಸಿ, ತನ್ನ ಅರಮನೆಯಲ್ಲೇ ಅನಂತರ ಸರ್ವಾನಂದವನ್ನು ನಿರಂತರವಾಗಿ ಅನುಭವಿಸುವ ಹಾಗೆ ಮಾಡುವನೆಂಬ ತಾತ್ಪರ್ಯವು.

ಅಲ್ಲಿಂದ ಮುಂದಕ್ಕೆ ಅರ್ಚಿರಾದಿ ಗತಿಯನ್ನು ಹೊಂದುವನೆಂದು ಹೇಳಲು ಹೊರಟು, ಆ ಗತಿಯ ವಿಷಯದಲ್ಲಿ ಆಳ್ವಾರುಗಳ ದಿವ್ಯಸೂಕ್ತಿಗಳನ್ನು ಉದಾಹರಿಸುತ್ತಾರೆ:—"**ಮುನ್ನಮ್** - ಬಹುಕಾಲ ಸ್ಥಾಯಿಯಾಗಿ, **ಕಡು** - ತೀಕ್ಷ್ಣವಾದ, **ಗದಿರೋನ್** - ಕಿರಣಗಳುಳ್ಳ ಸೂರ್ಯನ, **ಮಣ್ಡಲತ್ತಿನ್** - ಮಂಡಲದ, **ನನ್ನಡುವುಳ್** - ಒಳ್ಳೇ ಮಧ್ಯದಲ್ಲಿ ಎಂದರೆ ಸರಿಯಾದ ಮಧ್ಯದಲ್ಲಿ, **ಅನ್ನದು** - ಪ್ರಸಿದ್ಧವಾದ, ಶ್ರೇಷ್ಠವಾದ, **ಓರ್** - ಅದ್ವಿತೀಯವಾದ, **ಇಲ್ಲಿಯಿನ್** - ರಂಧ್ರದ,

---

(೧) ಪೆರಿಯ ತಿರುಮಡಲ್ ೧೬. (೨) ಶಿರಿಯ ತಿರುಮಡಲ್ ೭.

**ಕದಿರೋನ್ ಮಂಡಲತ್ತೈ ಕೀಣ್ಡು ಪುಕ್ಕು" ಎನ್ರುವರ್, ೩ "ಶಣ್ಡ ಮಣ್ಡ ಲತ್ತಿನೂಡು ಶೆನ್ರು" ಎನ್ರುವರ್, ೪ "ಇರಳ ಎತ್ತು ನೆರಿ ಕದಿರೋನ್**

**ಊಡು** - ಮಧ್ಯದಲ್ಲಿ, **ಪೋಯ್** - ಹೋಗಿ," **ಎನ್ರುವರ್**-ಎಂಬದಾಗಿಯೂ, ಇದರಿಂದ ಅರ್ಚಿರಾದಿ ಗತಿಯಲ್ಲಿ ಹೋಗುವವನು ಸೂರ್ಯಮಂಡಲವನ್ನು ಹೊಂದಿ ಅಲ್ಲಿ **ಸೂರ್ಯಾ**ಭಿಮಾನ ದೇವತೆಯಿಂದ ಸತ್ಕರಿಸಲ್ಪಟ್ಟು, ಆತನಿಂದ ತೋರಿಸ ಲ್ಪಟ್ಟ ಒಂದು ರಂಧ್ರದ ಮೂಲಕ ತೆರಳುವನೆಂಬ ಭಾವವು. **"ಸ ಆದಿತ್ಯಮಾ ಗಚ್ಛತಿ, ತಸ್ಮೈ ಸ ತತ್ರ ವಿಜಿಹೀತೇ ಯಥಾಡಂಬರಸ್ಯಖಂ, ತೇನ ಸ ಊರ್ಧ್ವಮಾಕ್ರಮತೇ"** ಎನ್ನುವ ಬೃಹದಾರಣ್ಯಕ ಶ್ರುತ್ಯರ್ಥವು ಇಲ್ಲಿ ಹೇಳ ಲ್ಪಟ್ಟಿತು, (ಬೃ ೭ ೧೦. ೧) ಈ ಬ್ರಹ್ಮವಿತ್ತು ವಾಯುಲೋಕವನ್ನು ಬಿಟ್ಟು ಆದಿತ್ಯಲೋಕವನ್ನು ಹೊಂದುವನು, ಆಗ ಬ್ರಹ್ಮವಿತ್ತಿಗೆ ಈ ಆದಿತ್ಯನು, ಆಡಂಬರ ವೆಂಬ ವಾದ್ಯವಿಶೇಷದಲ್ಲಿರುವ ರಂಧ್ರದಷ್ಟು ಇರುವ ದ್ವಾರವನ್ನು ಮಾಡಿಕೊಡು ವನು" ಎಂಬುದು ಇವರರ್ಥವು (೨) **"ತೇರ್** - ರಥದಲ್ಲಿ, **ಆರ್** - ಪರಿ **ಪೂರ್ಣ**ನಾದ, **ನಿರೈ** ಎಂದರೆ **ನಿರೈನ್ದ** - ತುಂಬಿರುವ, ದಶದಿಕ್ಕುಗಳನ್ನೂ ವ್ಯಾಪಿ ಸುವ, **ಕದಿರೋನ್** - ಕಿರಣಗಳುಳ್ಳ ಸೂರ್ಯನ, **ಮಣ್ಡಲತ್ತೈ ಕೀಣ್ಡುಪುಕ್ಕು**- ಮಂಡಲವನ್ನು ಭೇದಿಸಿ ಪ್ರವೇಶ ಮಾಡಿ, **"ಏಷನೋ ಮಂಡಲಂ ಭಿತ್ವಾ"** ಎಂದೂ, **"ಆದಿತ್ಯಂ ಭಿನತ್ತಿ"** ಎಂದೂ ಹೇಳಿರುವ ಹಾಗೆ ಅರ್ಚಿರಾದಿ ಮಾರ್ಗ ದಲ್ಲಿ ಹೋಗುವವನು ಸೂರ್ಯಮಂಡಲವನ್ನು ಹೊಂದಿ ಅದನ್ನು ಬೇಧಿಸಿ ಮುಂದ ಕ್ಕೆ ಹೋಗುವನೆಂದು ಹೇಳಿರುತ್ತದೆ ಬೇಧಿಸಿ ಎಂದರೆ ಆದಿತ್ಯನು ತೋರಿಸುವ ಒಂದು ರಂಧ್ರದ್ವಾರಾ ಹೋಗುವನೆಂಬ ಭಾವವು; (೩) **ಶಂಡ ಮಂಡಲತ್ತಿನ**- **ಚಂಡ**ವಾದ ಎಂದರೆ ಕ್ರೂರವಾದ ರಶ್ಮಿಗಳುಳ್ಳ ಸೂರ್ಯಮಂಡಲದ, ಅಥವಾ ಪ್ರಪನ್ನರಲ್ಲದ ಇತರರಿಂದ ಹೊಂದಲಸಾಧ್ಯವಾದ, **ಊಡುಶೆನ್ರು** - ಮಧ್ಯ ಪ್ರದೇಶವನ್ನು ಸೇರಿ," **ಎನ್ರುವರ್** - ಎಂದೂ, **"ಇರುಳ್** - ಅಂಧಕಾರವನ್ನು, **ಅಗುತ್ತುಮ್** - ನಾಶಮಾಡುವದಾಗಿರುವ, **ಎರಿಕದಿರೋನ್** - ಉರಿಯುವ ಕಿರಣಗಳುಳ್ಳ **ಸೂರ್ಯನ, ಮಂಡಲತ್ತಿನೋಡು** - ಮಂಡಲದ ಮಧ್ಯಪ್ರದೇಶ **ಮೂಲಕ, ಏತ್ತಿ** - ದಿವ್ಯ ವೈಕುಂಠವನ್ನು ಹತ್ತುವ ಎಂದರೆ ಸೇರುವ ಹಾಗೆ **ಮಾಡಿ, ವೈತ್ತು** - ಅಲ್ಲಿ ಸ್ಥಾಪಿಸಿ, **ಏಣಿವಾಙ್ಗಿ** - ಅಲ್ಲಿಂದ ಪುನಸ್ಸಂಸಾರಕ್ಕಾಗಿ **ಅವತರ**ರೂಪ ಏಣಿಯನ್ನು ತೆಗೆದುಹಾಕಿ, ಎಂದರೆ **ನಚ ಪುನರಾವರ್ತತೇ** ಎಂದು

(೩) ತಿರುಚ್ಚಂದವಿರುತ್ತಂ ೬೭. (೪) ಪೆರಿಯ ತಿರುಮೊಳಿ ೪. ೯. ೩.

**ಮಣ್ಡಲತ್ತಾಡೇತ್ತಿ ವೈತ್ತೇಣಿಪಾಙ್ಗ" ಎನ್ರುಮ್, ಶೊಲ್ಲುಗಿರ ದೇವ ಯಾನ ಮಾರ್ಗತ್ತಿಲೆ ವಳಿಪ್ಪಡುತ್ತಿ (೩) "ಅಮರರೋಡುಯರ್ ವಿರ್ ಚೆನ್ರುರುವರ್ ತಮ್ಪಿರವಿಯಙ್ಗೈಯೇ" ಎಙ್ಗರಪಡಿಯೇ ಅರ್ಚ್ಚಿಸ್**

ಸೇರುವ ಹಾಗೆ, ಆತನು ಹಿಂತಿರುಗಬಾರದ ಹಾಗೆ ಮಾಡಿ,'' ಎಂಬರ್ಥವು. (ಉತ್ತರಕೃತ್ಯಾಧಿಕಾರದಲ್ಲಿ ನೆಯ ಪುಟ ನೋಡಿ) **ಎನ್ರುಮ್** - ಎಂದೂ, **ಶೊಲ್ಲುಗಿರ** - ಹೇಳುವ, **ದೇವಯಾನ ಮಾರ್ಗತ್ತಿಲೆ** - ಅರ್ಚಿರಾದಿ ಮಾರ್ಗವೆಂದೂ, ದೇವಪಥವೆಂದೂ, ಬ್ರಹ್ಮಪಥವೆಂದೂ, ದೇವಯಾನವೆಂದೂ, ಶುಕ್ಲಗತಿಯೆಂದೂ, ಹೇಗೆಲ್ಲಾ ಹೇಳುವ **ಮಾರ್ಗದಲ್ಲಿ, ವಳಿಪ್ಪಡುತ್ತಿ** - ಮಾರ್ಗವನ್ನು ಸೇರುವ ಹಾಗೆ ಮಾಡಿ ; (೫) **ಅಮರರೋಡು** – ಅತಿವಾಹಿಕರೊಂದಿಗೆ, **ಉಯರ್ವಿಲ್ ಶೆನ್ರು** – ವಿರಜಾ ನದಿಯನ್ನು ಸೇರಿ, **ತಮ್ ಪಿರವಿ** - ತನ್ನ ಜನ್ಮವೆಂಬುವ, **ಯಙ್ಗೈ** - ಕ್ರೂರ ಕಾರಾಗೃಹವನ್ನು, **ಅರುಪ್ಪರ್**-ಛೇದಿಸುವರು ; ಎಂದರೆ ಸೂಕ್ಷ್ಮಶರೀರವನ್ನು ತ್ಯಜಿಸುವರೆಂಬ ಭಾವವು. ಇದು ನಾಲ್ಕನೆಯ ಪಾದವು. ಮೊದಲು ಮೂರು ಪಾದಗಳು :—

**ಅಮರರ್‌ಗಳ್ ತೊಳುತೆಳ ವಲೈಕಡಲ್ ಕಡೈನ್ದವನ್ರನ್ನೈ ।**
**ಅಮರ್ ಪೊಳಿಲ್ ವಳಙ್ಕುರುಗೂರ್ ಚ್ಚಡಗೋಪರ್ ಕುತ್ತೇವಲ್‌ಗಳ್**
**ಅಮರ ಶುವೈ ಯಾಯಿರತ್ತು ವತ್ತಿನುಳಿವೈ ಪತ್ತುಮ್ ವಲ್ಲಾರ್ ॥**

"ಬ್ರಹ್ಮಾದಿ ದೇವತೆಗಳು ಆಶ್ರಯಿಸಿ ಕ್ಷೇಮವನ್ನು ಹೊಂದುವ ಹಾಗೆ ಅಲೆಗಳುಳ್ಳ ಕ್ಷೀರಸಮುದ್ರವನ್ನು ಕಡೆದ ಶ್ರಿಯಃಪತಿಯನ್ನು ಕುರಿತು, ಗುಂಪಾಗಿರುವ ತೋಟಸಮೃದ್ಧಿಯುಳ್ಳ ಕುರುಕಾಪುರಿಗೆ ಸ್ವಾಮಿಯಾದ ನಮ್ಮಾಳ್ವಾರ್‌ರವರ ವಾಚಿಕ ಕೈಂಕರ್ಯವಾದ ಶಬ್ದಾರ್ಥ ರಸಗಳು ತುಂಬಿರುವ ಸಾವಿರ ಪಾಶುರಗಳಲ್ಲಿ **ಈ ಹತ್ತು** ಪಾಶುರಗಳನ್ನು ಅಭ್ಯಾಸ ಮಾಡಿರುವವರು ಅತಿವಾಹಿಕರಿಂದ ಸತ್ಕರಿಸಲ್ಪಟ್ಟು, ವಿರಜೆಯಲ್ಲಿ ಜನ್ಮಬಂಧವಾದ ಸೂಕ್ಷ್ಮಶರೀರವನ್ನು ತ್ಯಜಿಸಿ, ಕಾರಾಗೃಹ ಬಂಧವನ್ನು ಛೇದಿಸಿಕೊಳ್ಳುವರು," ಎಂಬುದು ಈ ಪಾಶುರ ತಾತ್ಪರ್ಯವು, **ಎಙ್ಗರಪಡಿಯೇ** - ಎಂದು ಹೇಳಿರುವ ಹಾಗೆ, **ಅರ್ಚ್ಚಿಸ್ಸೆನ್ರುಮ್** - (೧) **ಅರ್ಚ್ಚಿಸ್ಸು** ಅಥವಾ **ಅಗ್ನಿ**ಯೆಂದೂ, (೨) ಅಹಸ್ಸೆಂದೂ, (೩) **ಪೂರ್ವಪಕ್ಷ** ವೆಂದರೆ ಶುಕ್ಲಪಕ್ಷವೆಂದೂ, (೪) **ಉತ್ತರಾಯಣ** ವೆಂದೂ, (೫) **ಸಂವತ್ಸರ** ವೆಂದೂ, (೬) **ವಾಯು**ವೆಂದೂ, (೭ **ಆದಿತ್ಯ**ನೆಂದರೆ **ಸೂರ್ಯ**ನೆಂದೂ, (೮) **ಚಂದ್ರ**ನೆಂದೂ,

(೩) **ತಿರುವಾಯ್‌ಮೊಳಿ** ೧. ೩ ೧೧.

**ನ್ರುವನ್, ಅಹಸ್ಸೆನ್ರುವನ್ ಪೂರ್ವಪಕ್ಷಮೆನ್ರುವನ್, ಉತ್ತರಾಯಣಮೆನ್ರುವನ್ ಸಂವತ್ಸರಮೆನ್ರುವನ್, ವಾಯುವೆನ್ರುವನ್, ಆದಿತ್ಯನೆನ್ರುವನ್, ಚಂದ್ರನೆನ್ರುವನ್, ವೈದ್ಯುತನೆನ್ರುವನ್, ಅಮಾನವ ಸಂಜ್ಞನಾನ ಇವನುಕ್ಕು ಸಹಕಾರಿಗಳಾನ ವರುಣೇಂದ್ರ ಪ್ರಜಾಪತಿಗಳೆನ್ರುವನ್, ಶೊಲ್ಲಪ್ಪಡುಗಿರ ವಳಿನಡತ್ತುವಾರ್ ಮುದಲಿಗಳೈ ಇಟ್ಟು (೨) "ಅಹಂಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂಗತಿಂ" ಎಙ್ಗರಪಡಿಯೇ ತಾನೇ ಪ್ರಧಾನನಾಯ್ ನಡತ್ತಿ (೪) ಅವ್ವೋ ಎಲ್ಲೈಗಳಿಲ್ ಭಗವಚ್ಛಾಸ್ತ್ರತ್ತಿಲೇ ಪರಕ್ಕಪ್ಪೇಶಿನ ಭೋಗಙ್ಗಳೈಯುಮನುಭವಿಪ್ಪಿತ್ತು,**

---

(೯) **ವೈದ್ಯುತನೆಂದೂ, ಅಮಾನವ ಸಂಜ್ಞನಾನ ಇವನುಕ್ಕು** – ಅಮಾನವನೆಂದು ಕರೆಯಲ್ಪಡುವ ಈ ವೈದ್ಯುತನಿಗೆ, **ಸಹಕಾರಿಗಳಾನ**-ಸಹಾಯ ಮಾಡುವ, (೧೦) ವರುಣ (೧೧) ಇಂದ್ರ (೧೨) **ಪ್ರಜಾಪತಿಗಳೆನ್ರು** – ಚತುರ್ಮುಖ ಬ್ರಹ್ಮನೆಂದೂ, **ಶೊಲ್ಲಪ್ಪಡುಗಿರ** – ಹೇಳಲ್ಪಟ್ಟಿರುವ, **ವಳಿನಡತ್ತುವಾರ್ ಮುದಲಿಗಳೈಯಿಟ್ಟು** – ಮಾರ್ಗ ನಡೆಸುವ ಎಂದರೆ ಜೊತೆಯಲ್ಲಿ ಕರೆದುಕೊಂಡುಹೋಗುವ ಪ್ರಾಜ್ಞರಾದ ಆತಿವಾಹಿಕರ ಮೂಲಕವಾಗಿ "ನಾನು ನನ್ನ ಭಕ್ತನನ್ನು ದೇಹವಿಯೋಗ ಕಾಲದಲ್ಲಿ ಸ್ಮರಿಸುವಂತೆ ಮಾಡುವನಾಗಿ, ಆತನಿಗೆ ಸರ್ವ ಶ್ರೇಷ್ಠವಾದ ಗತಿಯನ್ನು ಹೊಂದಿಸುವೆನು," **ಎಙ್ಗರಪಡಿಯೇ** – ಎಂಬ ಶ್ರೀ ವರಾಹಪುರಾಣ ವಾಕ್ಯದ ಹಾಗೆ, **ತಾನೇ ಪ್ರಧಾನನಾಯ್ ನಡತ್ತಿ** – ತಾನೇ ಮುಖ್ಯವಾಗಿ ನಿಂತು ನಡೆಸಿ, (೪) **ಅವ್ವೋ ಎಲ್ಲೈಗಳಿಲ್** – ಈ ೧೨ ದೇವತೆಗಳ ಎಲ್ಲೆಯಲ್ಲೂ, **ಭಗವಚ್ಛಾಸ್ತ್ರತ್ತಿಲೆ** – ಶ್ರೀ ಪಾಂಚರಾತ್ರಾದಿ ಭಗವಚ್ಛಾಸ್ತ್ರಗಳಲ್ಲಿ, **ಪರಕ್ಕಪ್ಪೇಶಿನ** - ವಿಸ್ತರವಾಗಿ ಹೇಳಿರುವ, **ಭೋಗಙ್ಗಳೈಯುಮನುಭವಿಪ್ಪಿತ್ತು** – ಭೋಗಗಳನ್ನೆಲ್ಲಾ ಈ ಪ್ರಪನ್ನನು ಅನುಭವಿಸುವ ಹಾಗೆ ಮಾಡಿ; ಈ ವಾಕ್ಯದಲ್ಲಿ (೧) ಆತಿವಾಹಿಕರು ೧೨ ಮಂದಿ ಎಂದೂ, (೨) ಅವರುಗಳು ಈ ಬಂದ ಪ್ರಪನ್ನನನ್ನು ಒಬ್ಬೊಬ್ಬರು ಕ್ರಮವಾಗಿ ತಮ್ಮ ಗಡಿಯು ಇರುವವರೆಗೂ ಕರೆದುಕೊಂಡು ಹೋಗುವ ಕ್ರಮವು ಯಾವುದು ಎಂಬುದನ್ನೂ, (೩) ಈ ಅರ್ಚಿಸ್ಸು, ಅಹಸ್ಸು, ಶುಕ್ಲಪಕ್ಷಗಳಿಂದ ಬೋಧಿತರಾದವರು, **ವಳಿನಡತ್ತುವಾರ್ ಮುದಲಿಗಳ್** – ಎದರುಗೊಂಡು ಮಾರ್ಗ ತೋರಿಸಿ ಕರೆದುಕೊಂಡು ಹೋಗುವ ದೇವತೆಗಳೆಂದೂ ಮತ್ತು ಅವರುಗಳು ತತ್ತದಭಿಮಾನ ದೇವತೆಗಳೆಂದೂ, (೪) ಇದರಲ್ಲಿ ಕಡೆಗೆ ಪರಬ್ರಹ್ಮನ ಹತ್ತಿರ ಕರೆದುಕೊಂಡುಹೋಗುವವನು **ವೈದ್ಯುತನು** ಎಂದೂ,

"ವೈದ್ಯುತೇನೈವ ತತಸ್ತಚ್ಛ್ರುತೇಃ" ಎಂದು ಸೂತ್ರದಲ್ಲಿ ಹೇಳಿರುವ ಹಾಗೆ, "ಸ ಏನಾನ್ ಬ್ರಹ್ಮ ಗಮಯತಿ" ಎಂಬ ಪ್ರಮಾಣವೆಂದೂ, (೫) ಹಾಗಾದರೆ ವರುಣ, ಇಂದ್ರ, ಪ್ರಜಾಪತಿಗಳ ಕೆಲಸವೇನೆಂದರೆ, ಅವರೂ ಅವರವರ ಎಲ್ಲೆಗಳಲ್ಲಿ ವೈದ್ಯುತನ ಜೊತೆಯಲ್ಲಿದ್ದು ಸತ್ಕರಿಸುವದರಿಂದ ಅವರುಗಳು ಈ ವೈದ್ಯುತನಿಗೆ ಸಹಕಾರಿ ಎಂದೂ, (೬) ಹೀಗೆ ವೈದ್ಯುತನು, ಈ ಮೇಲೆ ಹೇಳಿದ ಇತರ ದೇವತೆಗಳಿಗೆಲ್ಲಾ ಸ್ವಲ್ಪ ವಿಲಕ್ಷಣವಾಗಿ ಪರಬ್ರಹ್ಮನವರೆಗೂ ಕರೆದುಕೊಂಡು ಹೋಗುವದರಿಂದ ಆತನು ನಿತ್ಯಸೂರಿಗಳಲ್ಲೊಬ್ಬನೆಂದೂ, (೭) ಈ ಆತಿವಾಹಿಕರು ಬರೀ ಮಾರ್ಗ ತೋರಿಸುವರೇಯಾಗಲಿ ಮಾರ್ಗ ನಡಿಸುವವರೇಯಾಗಿ ಇಲ್ಲವು, ಇವರುಗಳು ಆ ಬಂದ ಪ್ರಪನ್ನರನ್ನು ಸತ್ಕರಿಸಿ ಆದರಿಸುವವರೆಂದೂ, ಈ ಪ್ರಪನ್ನರಿಗೆ ಮಾರ್ಗದಲ್ಲಿ ಉಪಭೋಗಾನುಭವಗಳುಂಟೆಂದೂ, (೮) ಇವಷ್ಟು ಏರ್ಪಾಡುಗಳನ್ನೆಲ್ಲಾ ಇಟ್ಟು ನಡಿಸುವವನು, ಪ್ರಧಾನನಾಗಿ ಸರ್ವೇಶ್ವರನೇ ಎಂದೂ, ಉಪದೇಶಿಸಲ್ಪಟ್ಟಿತು. ಮಾರ್ಗದಲ್ಲಿ ಹೀಗೆ ಸತ್ಕಾರವೂ ಭೋಗಾನುಭವವೂ ಉಂಟೆಂಬುದು ಭಗವಚ್ಛಾಸ್ತ್ರಪ್ರಮಾಣಗಳಿಂದ ವ್ಯಕ್ತವೆಂಬ ನಿದರ್ಶನಕ್ಕಾಗಿ ವ್ಯಾಖ್ಯಾತೃಗಳು,

"ಅಥೈನ ಮಮರಾಸ್ತತ್ರ ಸಹ ದಿವ್ಯಾಪ್ಸರೋಗಣೈಃ ।
ಸೋಪಹಾರಾಃ ಪ್ರಹರ್ಷೇಣ ಪ್ರತ್ಯುದ್ಗಚ್ಛಂತ್ಯುಪಾಗತಂ ॥
ಅರ್ಚಿರಾದಿ ಕಯಾ ಗತ್ಯಾ ತತ್ರತತ್ರಾರ್ಚಿತ ಸ್ಸುರೈಃ ।
ಅತೀತ್ಯಲೋಕಾ ನಭ್ಯೇತಿ ವೈಕುಂಠಂ ವೀತಕಲ್ಮಷಃ ॥

ಈ ಮೇಲಿನ ಶ್ಲೋಕಗಳನ್ನು ಉದಾಹರಿಸಿರುತ್ತಾರೆ. "ಈ ವೈಕುಂಠವನ್ನು ಕುರಿತು ಬಂದ ಪ್ರಪನ್ನನನ್ನು ಅರ್ಚಿರಾದಿಗಳ ಅಭಿಮಾನ ದೇವತೆಗಳು ಮಾರ್ಗದಲ್ಲಿ ದಿವ್ಯಾಪ್ಸರಸ್ಸಮೂಹದಿಂದ ಸೇರಿದವರಾಗಿ, ಉಪಹಾರಾದಿಗಳೊಂದಿಗೆ ಬಹು ಸಂತೋಷದಿಂದ ಎದುರುಗೊಂಡು ಸ್ವಾಗತವನ್ನು ಹೇಳಿ, ಹೀಗೆ ಅರ್ಚಿರಾದಿ ಗತಿಯಿಂದ ಅಲ್ಲಲ್ಲಿ ಅಭಿಮಾನ ದೇವತೆಗಳಿಂದ ಪೂಜಿಸಲ್ಪಟ್ಟವನಾಗಿ ಅವರವರುಗಳ ಲೋಕಗಳನ್ನೆಲ್ಲಾ ದಾಟಿ, ಕಲ್ಮಷಗಳಿಂದ ಬಿಡಲ್ಪಟ್ಟವನಾಗಿ ಮಹಾ ಪರಿಶುದ್ಧನಾಗಿ ವೈಕುಂಠಾಭಿಮುಖನಾಗಿ ತೆರಳುವನು" ಎಂದು ಇಲ್ಲಿ ಹೇಳಿರುತ್ತದೆ

ಶಾಕಟಾಯನ ಸಂಹಿತೆಯಲ್ಲಿ ಅಹಸ್ಸಿಗೂ ಶುಕ್ಲಪಕ್ಷಕ್ಕೂ ಮಧ್ಯೆ ಕೌಮುದೀ ಎಂಬ ಅಭಿಮಾನದೇವತೆಯುಂಟೆಂದು ಹೇಳಲ್ಪಟ್ಟಿರುತ್ತದೆ. ಆದರೆ ಶ್ರುತಿಗಳಲ್ಲಿ ಹೇಳಲ್ಪಟ್ಟಿರುವದು ಮುಖ್ಯವೆಂದು ಭಾವಿಸಿ ಹನ್ನೆರಡು ಆತಿವಾಹಕರು ಮಾತ್ರ ಇಲ್ಲಿ ಹೇಳಲ್ಪಟ್ಟರು. ಧೂಮಾದಿ ಮಾರ್ಗದಲ್ಲೂ ಪ್ರಪನ್ನನಲ್ಲದೇ ಇರುವವರಿಗೂ ಚಂದ್ರಪ್ರಾಪ್ತಿಯು ಹೇಳಲ್ಪಟ್ಟಿರುತ್ತದೆ. ಚಂದ್ರಾಭಿಮಾನ ದೇವತೆಯು ಅವರಿಗೆ

## ಸೂಕ್ಷ್ಮ ಶರೀರ ಪರಿತ್ಯಾಗಃ

(೫) "ಲೋಕಂ ವೈಕುಂಠನಾಮಾನಂ ದಿವ್ಯಂ ಷಾಡ್ಗುಣ್ಯ ಸಂಯುತಂ । ಅವೈಷ್ಣವಾನಾಮ ಪ್ರಾಪ್ಯಂ ಗುಣತ್ರಯ ವಿವರ್ಜಿತಂ । ನಿತ್ಯಸಿದ್ಧೈ

ಅರ್ಚಿರಾದಿ ಗತಿಯನ್ನು ತೋರಿಸದೆ ಸ್ವರ್ಗಕ್ಕೆ ಹೋಗುವ ಮಾರ್ಗವನ್ನು ತೋರಿಸುವನೆಂದು ಭಾವಿಸತಕ್ಕದ್ದು. ಪ್ರಪನ್ನನು ದಕ್ಷಿಣಾಯನದಲ್ಲಿ ಮೃತನಾದರೆ ಚಂದ್ರಸಾಯುಜ್ಯವನ್ನು ಹೊಂದಿ, ಅಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು ಮುಂದೆ ಹೋಗುವನೆಂದು ತೈತ್ತಿರೀಯದಲ್ಲಿ ಹೇಳಲ್ಪಟ್ಟಿರುತ್ತದೆ. ಸೂರ್ಯನು ತೋರಿಸಿದ ಆಡಂಬರವೆಂಬ ವಾದ್ಯವಿಶೇಷದ ರಂಧ್ರದಷ್ಟು ತನ್ನಲ್ಲಿರುವ ರಂಧ್ರದಲ್ಲಿ ಪ್ರವೇಶ ಮಾಡಿಸಿದ ಒಡನೆಯೇ, ಚಂದ್ರದೇವತೆಯು ಬಂದು ಎದುರುಗೊಂಡು ಕರೆದುಕೊಂಡು ಹೋಗುವನು; ಸತ್ಕಾರವಾದ ನಂತರ ದುಂದುಭಿ ವಾದ್ಯರಂಧ್ರದ ಹಾಗಿರುವ ರಂಧ್ರದಲ್ಲಿ ಪ್ರವೇಶ ಮಾಡಿಸಿ ಕಳುಹಿಸುವನು. ಒಡನೆಯೇ ವೈದ್ಯುತನು ಬಂದು ಎದುರುಗೊಂಡು ಕರೆದುಕೊಂಡು ಹೋಗುವನು ಇವನಿಗೆ ಅಮಾನವನೆಂದು ಹೆಸರು ಈತನು ಆ ಪ್ರಪನ್ನನನ್ನು ವರುಣಲೋಕ, ಇಂದ್ರಲೋಕ, ಚತುರ್ಮುಖ ಲೋಕಗಳ ಮಾರ್ಗವಾಗಿ ಪರಬ್ರಹ್ಮನ ಹತ್ತಿರಕ್ಕೆ ಕರೆದುಕೊಂಡು ಹೋಗುವನೆಂದು ಹೇಳಲ್ಪಟ್ಟಿತು; ಆದುದರಿಂದ ಈ ವರುಣ, ಇಂದ್ರ, ಪ್ರಜಾಪತಿಗಳು ತಮ್ಮ ತಮ್ಮ ಎಲ್ಲೆಗಳಲ್ಲಿ ಮಾತ್ರ ಸತ್ಕರಿಸಿ ಮಾರ್ಗ ತೋರಿಸುವರಾದ ಅನುಗ್ರಾಹಕರೆಂದು ನಿರ್ಧರಿಸಲ್ಪಟ್ಟಿರುತ್ತದೆ. ಈ ಅಮಾನವನಿಗೆ ಶ್ರುತ್ಯಂತರಗಳಲ್ಲಿ ಮಾನಸನೆಂದು ಹೆಸರುಂಟು. ಇವರು ಬೇರೆ ಬೇರೆ ಎಂದು ಕೆಲವರಭಿಪ್ರಾಯಪಟ್ಟು ಬೇರೆ ಬೇರೆ ನಿರ್ವಾಹವನ್ನು ಹೇಳುತ್ತಾರೆ. ಇದು ನಮಗೀಗ ಪ್ರಕೃತವಲ್ಲವು. ಸರ್ವೇಶ್ವರನು ಅನೇಕ ಅಂಡಗಳಿಗೆ ಈಶನಲ್ಲಾ, ಅಲ್ಲೆಲ್ಲಾ ಹೇಗೆ ಎಂದರೆ, ಪ್ರತಿಯೊಂದು ಅಂಡದಲ್ಲೂ ಅರ್ಚಿರಾದಿಗತಿಗಳುಂಟೆಂದು ಭಾವಿಸತಕ್ಕದ್ದು. ಈ ವಿಷಯಗಳೆಲ್ಲಾ ಬಹು ವಿಸ್ತರವಾಗಿ ಶ್ರೀ ದೇಶಿಕರವರನುಗ್ರಹಿಸಿರುವ ಪರಮಪದ ಸೋಪಾನದ ಅರ್ಚಿರಾದಿ ಪರ್ವದಲ್ಲಿ ಉಪಪಾದಿತವಾಗಿವೆ.

## ಸೂಕ್ಷ್ಮ ಶರೀರದ ಪರಿತ್ಯಾಗವು.

"ದಿವ್ಯಂ - ಅಪ್ರಾಕೃತವಾದ, ಷಾಡ್ಗುಣ್ಯ ಸಂಯುತಂ - ಜ್ಞಾನ, ಬಲ, ಐಶ್ವರ್ಯ, ವೀರ್ಯ, ತೇಜಸ್ಸು, ಶಕ್ತಿ ಎಂಬ ಆರು ಗುಣಗಳಿಂದ ಕೂಡಿದ,

(೫) ಬ್ರಹ್ಮತೀಯ ಚೆತನ್ಯಾ ೧೫, ೨೧

**ಶಿನ್ರುವಾರೇ, ಕರ್ಮಫಲವಿಶೇಷಭೋಗಾರ್ಥವಾಗವುನ್ರಿಕ್ಕೇ, ವಿದ್ಯೈಯಾಲೆ ಸ್ಥಾಪಿತವಾಯ್ ಗತಿಮಾತ್ರಾರ್ಥವಾಗ ಅನುವೃತ್ತವಾನ ಸೂಕ್ಷ್ಮಶರೀರತ್ತೈ ಅರುಕಡಕ್ಕೈಕ್ಕು ಪ್ಪತ್ತಿನ ತೆಪ್ಪಮ್ ಪೋಗವಿಡುಮಾಪ್ಪೋಲೆ ಪೋಗವಿಡುವಿತ್ತು ; (೬) ವಿರಜೈಕ್ಕಕ್ಕರೈಪ್ಪಡುತ್ತಿ; (೭) ಅಪ್ರಾಕೃತ**

---

ಫಲಾನುಭವಕ್ಕಾಗಿಯಲ್ಲದೆ, **ವಿದ್ಯೈಯಾಲೆ ಸ್ಥಾಪಿತವಾಯ್** - ಬ್ರಹ್ಮವಿದ್ಯೆ ನ್ಯಾಸವಿದ್ಯೆಯಿಂದ ಸ್ಥಿರಪಡಿಸಲ್ಪಟ್ಟ, **ಗತಿಮಾತ್ರಾರ್ಥವಾಗ** - ಅರ್ಚಿರಾದಿಗತಿಯಲ್ಲಿಸಂಚಾರ ಮಾತ್ರಕ್ಕಾಗಿ, **ಅನುವೃತ್ತವಾನ ಸೂಕ್ಷ್ಮಶರೀರತ್ತೈ** - ಭಗವತ್ಕೃಪೆಯಿಂದ ಅನುಸರಿಸಿ ಬಂದ ಸೂಕ್ಷ್ಮಶರೀರವನ್ನು, **ಅರುಕಡಕ್ಕೈಕ್ಕು** - ನದಿಯ ಆಚೆ ದಡವನ್ನು ದಾಟುವದಕ್ಕಾಗಿ, **ಪತ್ತಿನ ತೆಪ್ಪಂ** - ಹತ್ತಿದ ತೆಪ್ಪವನ್ನು, **ಪೋಗವಿಡುಮಾಪ್ಪೋಲೆ**- ಅದು ಹಿಂತಿರುಗಿ ಹೋಗುವದಕ್ಕಾಗಿ ಬಿಟ್ಟುಬಿಡುವ ಹಾಗೆ, **ಪೋಗವಿಡವಿತ್ತು** - ಹಿಂತಿರುಗುವ ಹಾಗೆ ತ್ಯಜಿಸಿ; (೫) **ವಿರಜೈಕ್ಕು** - ವಿರಜಾ ನದಿಗೆ, **ಅಕ್ಕರೈಪ್ಪಡುತ್ತಿ** - ಆಚೆಯ ದಡವನ್ನು ತಲಪುವ ಹಾಗೆ ಮಾಡಿ ; ಈ ೪, ೫ನೆಯ ವಾಕ್ಯಖಂಡಗಳಿಂದ ಸೂಕ್ಷ್ಮಶರೀರಪರಿತ್ಯಾಗವೂ ಮತ್ತು ವಿರಜಾತರಣವೂ ಬೋಧಿಸಲ್ಪಟ್ಟಿರು ವೈದ್ಯುತ ಅಮಾನವನು ಈತನನ್ನು ಪ್ರಕೃತಿ ಮಂಡಲವನ್ನು ದಾಟಿ, ದಿವ್ಯ ವೈಕುಂಠದ ಎಲ್ಲೆಗೆ ಕರೆದುಕೊಂಡು ಹೋಗುವನು. ಆ ದಿವ್ಯ ವೈಕುಂಠವು ಎಷ್ಟು ನಿರತಿಶಯವಾದುದೆಂಬುದು ದ್ವಿತೀಯ ಜಿನನ್ತಾ ಸ್ತೋತ್ರಗಳ ಮೂಲಕ ವರ್ಣಿಸಲ್ಪಟ್ಟಿತು ಈ ಎರಡು ಎಲ್ಲೆಗಳ ಮಧ್ಯೆ ವಿರಜಾನದಿ ಇರುತ್ತದೆಂದು ಹೇಳಲ್ಪಟ್ಟಿತು. ಈತನಿಗೆ ಸೂಕ್ಷ್ಮ ಪ್ರಾಕೃತ ಶರೀರ ಪರಿತ್ಯಾಗವೆಲ್ಲಿ ಎಂಬ ಚರ್ಚೆಯಲ್ಲಿ, ಪ್ರಥಮತಃ ಸ್ಥೂಲಶರೀರ ತ್ಯಾಗಾನಂತರ ಸೂಕ್ಷ್ಮಶರೀರ ಪ್ರಾಪ್ತಿ ಏತಕ್ಕೆಂಬುವದನ್ನು ಗ್ರಹಿಸತಕ್ಕದ್ದೆಂದು ಭಾವಿಸಿ ಈ ಸೂಕ್ಷ್ಮಶರೀರವು ಕರ್ಮಫಲ ಭೋಗಕ್ಕಾಗಿಯಲ್ಲವೆಂದು ತಿಳಿಸುತ್ತಾರೆ. ಆದರೆ **"ತಸ್ಯ ಪುತ್ರಾದಾಯ ಮುಪಯಂತಿ, ಸುಹೃದಸ್ಸಾಧು ಕೃತ್ಯಾಂ, ದ್ವಿಷಂತಃ ಪಾಪಕೃತ್ಯಾಂ"** ಎಂಬ ಶ್ರುತಿ ಪ್ರಕಾರ, ಉತ್ಕ್ರಾಂತಿ ಕಾಲದಲ್ಲೇ ಪುಣ್ಯಪಾಪಗಳೆಲ್ಲಾ ಸುಹೃತ್ತು ಮತ್ತು ಶತ್ರುಗಳಲ್ಲೂ ಹೋಗಿ ಸೇರಿಬಿಡುವದರಿಂದ ಕರ್ಮಫಲಗಳೂ ಇಲ್ಲವು, ಅವುಗಳ ಫಲಾನುಭವವೂ ಇಲ್ಲವು ಆತಿವಾಹಿಕರ ಸತ್ಕಾರದ ಉಪಭೋಗಕ್ಕಾಗಿ ಸೂಕ್ಷ್ಮಶರೀರ ಪ್ರಾಪ್ತಿಯೆಂದರೆ, ನಿತ್ಯವಿಭೂತಿಯಲ್ಲೂ ಸಹ ಅದೇ ಶರೀರದಿಂದಲೇ ಭೋಗ ಏಕೆ ಕೂಡದೆಂಬ ಆಕ್ಷೇಪಣೆ ಉಂಟಾಗುತ್ತದೆ. ಹೀಗೆ ಈ ಸೂಕ್ಷ್ಮಶರೀರವು ಕರ್ಮಫಲೋಪಭೋಗಕ್ಕಾಗಿ ಅಲ್ಲದಿದ್ದರೆ,

ಆದರ ಪ್ರಯೋಜನವೇನೆಂದರೆ :—ಸೂಕ್ಷ್ಮಶರೀರವು ನ್ಯಾಸವಿದ್ಯಾಪ್ರವೃತ್ತಿಯಿಂದ ಸಿದ್ಧನಾದುದಾಗಿ ಅರ್ಚಿರಾದಿ ಗತಿಯಲ್ಲಿ ಪರಮಪದವನ್ನು ಕುರಿತು ಹೋಗಬೇಕಾದುದು ಇರುವದರಿಂದ, ಅದಕ್ಕಾಗಿ ಮಾತ್ರವೇ ಈ ಸೂಕ್ಷ್ಮಶರೀರವೆಂದು ಹೇಳಿರುತ್ತಾರೆ. ಅರ್ಚಿರಾದಿ ಗತಿಯು ಪ್ರಕೃತಿ ಮಂಡಲಕ್ಕೆ ಸೇರಿದ ಭಾಗದಲ್ಲಿ ಗಮನಕ್ಕಾಗಿ ಎಂದು ನಿರ್ಧರಿಸಿದ ನಂತರ, ಪ್ರಕೃತಿ ಮಂಡಲವನ್ನು ದಾಟಿ ವಿರಜೆಯನ್ನು ಸೇರಿದ ಒಡನೆಯೇ ಶೂಕ್ಷ್ಮಶರೀರವಿಚ್ಛೇದವೆಂಬದಾಗಿ ತೋರಿಬರುತ್ತದೆ. ಅದು ವಿರಜೆಯೆಂಬ ಅಮೃತ ನದಿಯ ಈಚೆಯ ದಡದಲ್ಲೇ ಪ್ರಾಪ್ತವಾಗುತ್ತದೆಂದು ಭಾವಿಸತಕ್ಕದ್ದಾಗಿರುತ್ತದೆ ಆದುದರಿಂದಲೇ **"ಒರು ದೇಶವಿಶೇಷತ್ತಿಲೆ ಶೆನ್ನವಾರೇ"** ಎಂಬ ಪ್ರಯೋಗವು. ಈ ನದಿಯು ಎಲ್ಲಿ ಇದೆ ಎಂದರೆ :—ಕೌಷೀತಕೀ ಬ್ರಾಹ್ಮಣವನ್ನನುಸರಿಸಿ ಹೇಳಿದ **"ವೈಕುಂಠಸೀಮ್ನಿ ವಿರಜಾಂ ಸ್ಯಂದಮಾನಾಂ ಮಹಾನದೀಂ"** ಎಂಬ **"ಗತ್ವಾಯೋ ವಿರಜಾಂ ವಿಮುಂಚತಿ ತನುಂ ಸೂಕ್ಷ್ಮಾಂ"** ಎಂಬ ಉಕ್ತಿಗಳಿಂದ ಲೀಲಾವಿಭೂತಿ ನಿತ್ಯವಿಭೂತಿಗಳ ಎಲ್ಲೆಯನ್ನು ನಿರ್ಧರಿಸುವಂಥಾದ್ದೆಂದು ಭಾವಿಸಲ್ಪಟ್ಟಿರುತ್ತದೆ. ನದಿಯನ್ನು ದಾಟುವದಕ್ಕೇ ಒಂದು ತೆಪ್ಪದ ಆವಶ್ಯಕತೆಯು, ಅದು ದಾಟಿದ ನಂತರ ಆ ತೆಪ್ಪದ ಆವಶ್ಯಕತೆ ಹೇಗೆ ಇಲ್ಲವೋ ಹಾಗೆಯೇ ಈ ಅರ್ಚಿರಾದಿ ಮಾರ್ಗವನ್ನು ದಾಟುವದಕ್ಕಾಗಿ ಈ ಸೂಕ್ಷ್ಮಶರೀರವು. ಅದು ದಾಟಿದ ನಂತರ ಇನ್ನು ಈ ಸೂಕ್ಷ್ಮಶರೀರದ ಆವಶ್ಯಕತೆಯು ಇಲ್ಲದುದರಿಂದ, ಅದು ಪ್ರಕೃತಿ ಮಂಡಲಕ್ಕೆ ಹಿಂತಿರುಗಿ ಹೋಗಿ ಸೇರಿಕೊಳ್ಳುತ್ತದೆಂದು ಹೇಳಿರುತ್ತಾರೆ. ಈ ಸೂಕ್ಷ್ಮಶರೀರವೂ ಕೂಡ ಪ್ರಕೃತಿಯ ಕಾರ್ಯರೂಪವಾದುದರಿಂದ ಇದಕ್ಕೆ ನಾಶವಿಲ್ಲವಾಗಿ ಪ್ರಕೃತಿಯನ್ನೇ ಹೋಗಿ ಸೇರುತ್ತದೆಂದು ಭಾವಿಸತಕ್ಕದ್ದು. ಆದುದರಿಂದ **"ಪೋಗವಿಡುವಿತ್ತು"** ಎಂಬ ಪ್ರಯೋಗವು. ಪ್ರಕೃತಿಗೆ ನಾಶವಿಲ್ಲವೆಂದು ಶ್ರುತಿಯೇ **"ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ"** ಎಂದು ಹೇಳಿರುವದರಿಂದ ಯಾವುದಕ್ಕೆ ಉತ್ಪತ್ತಿ ಇಲ್ಲವೋ ಅದಕ್ಕೆ ನಾಶವೂ ಇಲ್ಲವು ಎಂದು ಗ್ರಹಿಸತಕ್ಕದ್ದು. ಹೀಗೆ ಪ್ರಮಾಣವಿದ್ದರೂ ಕೂಡ ಮಿಥ್ಯಾವಾದವು ಹೇಗೆ ಕೂಡುತ್ತದೋ ತಿಳಿಯದು.

ಹೀಗೆ ವಿರಜೆಯ ಈಚೆಯ ದಡದಲ್ಲೇ ಸೂಕ್ಷ್ಮಶರೀರ ಪರಿತ್ಯಾಗವಾದರೆ, ವಿರಜೆಯನ್ನು ದಾಟುವದಕ್ಕೆ ಶರೀರ ಬೇಡವೋ ಎಂದರೆ ಕೌಷೀತಕೀ ಬ್ರಾಹ್ಮಣದಲ್ಲಿ **"ಸ ಆಗಚ್ಛತಿ ವಿರಜಾಂ ನದೀಂ, ತಾಮ್ಮನಸ್ಯೈವಾತ್ಯೇತಿ"** ಎಂದು ಹೇಳಿರುವ ಪ್ರಕಾರ, ಶರೀರವಿಲ್ಲದೇನೇ ಸಂಕಲ್ಪಮಾತ್ರದಿಂದಲೇ ದಾಟುವ ಶಕ್ತಿಯನ್ನು ಈತನು ಪಡೆಯುವನೆಂಬ ಭಾವವು. ಆದುದರಿಂದಲೇ **ವಿರಜೈಕ್ಕಕ್ಕರೆ ಪಡುತ್ತಿ** ಎಂಬುದರಿಂದ ಸರ್ವೇಶ್ವರನೇ ವಿರಜಾವತರಣವನ್ನು ನಡಿಸಿಕೊಡುವ

**ಶರೀರತ್ತೈಕ್ಕೊಡುತ್ತು, (೮) ಐರಂ ಮದೀಯ ಮೆಜ್ಞ್ಗರ ಸರಸ್ಸಿನಳ ವುಮ್ ಶೇರ್ತ್ತು, ಸೋಮಸವನ ಮೆಜ್ಞ್ಗರ ಅಶ್ವತ್ಥತ್ತೈಕ್ಕಿಟ್ಟುವಿತ್ತು,**

ನೆಂದು ಹೇಳಲ್ಪಟ್ಟಿರುತ್ತದೆ. ಪರಮಪದಸೋಪಾನದ ದಿವ್ಯದೇಶಪ್ರಾಪ್ತಿ ಪರ್ವದಲ್ಲಿ "ವಿಮಲ ಮಧುರ ಸುರಭಿ ಶೀತಳವಾನ ವಿರಜಾ ಪ್ರವಾಹತ್ತೈ ಅವಗಾಹಿತ್ತು ಅಳಕ್ಕು ॥ ಪವಿತ್ರಪಾಣಿಯಾನ ಮಾನವನುಡೈಯ ಕರಸ್ಪರ್ಶತ್ತಾಲೆ ವಾಸನಾ ವಿಶೇಷಙ್ಗಳಿಂದರ್ ದಿವ್ಯದೇಶ ಪ್ರಾಪ್ತಿಯಾಲೆ ಸಲೋಕನಾಯ್, ಅಪ್ರಾಕೃತಾಪ್ರಾಕೃತಮಾಯ ವಿಲಕ್ಷಣ ವಿಗ್ರಹಯೋಗತ್ತಾಲೆ ಸರೂಪನಾಯ್" ಎಂದು ಹೇಳುವುದರಿಂದ ಅಮಾನವ ಕರಸ್ಪರ್ಶವೂ ದಿವ್ಯಮಂಗಳ ವಿಗ್ರಹ ಪ್ರಾಪ್ತಿಯೂ ಉಂಟಾಗುತ್ತವೆಯೆಂದು ಹೇಳುವುದರಿಂದ ಸಾಲೋಕ್ಯವೂ ಸಾರೂಪ್ಯವೂ ಪ್ರಾಪ್ತವಾಗುತ್ತವೆಂದು ತಿಳಿಸಿದಂತಾಯಿತು. ಮುಂದೆ ಸಾಯುಜ್ಯವೂ ಉಂಟಾಗುತ್ತದೆಂದು ಹೇಳಲ್ಪಡುತ್ತದೆ

ಇಲ್ಲಿ ಮಾತ್ರ ಅಮಾನವ ಕರಸ್ಪರ್ಶವು ಹೇಳಲ್ಪಡಲಿಲ್ಲವು. ಆದರೆ **ಅಪ್ರಾಕೃತ ಶರೀರತ್ತೈ ಕೊಡುತ್ತು** ಎಂದರೆ ಶುದ್ಧ ಸತ್ತ್ವಮಯವಾದ ದಿವ್ಯಮಂಗಳ ವಿಗ್ರಹವನ್ನು ಕೊಟ್ಟು ಎಂದು ಹೇಳಲ್ಪಟ್ಟಿರುತ್ತದೆ. ಆ ಶರೀರವು ಸರ್ವೇಶ್ವರನ ರೂಪಕ್ಕೆ ಸಮಾನವಾದುದು, ಚತುರ್ಭುಜ ಮುಕ್ತರಾಗಿ ಶಂಖಚಕ್ರಧರರಾಗಿರುವ ರೂಪವು.

ಅಲ್ಲಿಂದ ಮುಂದಕ್ಕೆ ಹೋಗುವ ಮಾರ್ಗದಲ್ಲಿ ಏನೇನು ಇರುತ್ತದೆಂಬುದು ಕೌಷೀತಕೀ ಬ್ರಾಹ್ಮಣದಲ್ಲಿ ಹೇಳಲ್ಪಟ್ಟಿರುತ್ತದೆ ಅವನ್ನು ವಿಸ್ತರಿಸುತ್ತಾರೆ.

(೮) ಮತ್ತು (೯) **ಐರಂ ಮದೀಯ ಮೆಜ್ಞ್ಗರ ಸರಸ್ಸಿನಳವುಮ್ ಶೇರ್ತ್ತು** - ಐರಂ ಮದೀಯವೆಂಬ ಹೆಸರುಳ್ಳ ಸರಸ್ಸಿರುವವರೆಗೂ ಸೇರಿಸಿ; **"ತದ್ವೈರಂ ಮದೀಯಂ ಸರಸ್ತದಶ್ವತ್ಥ ಸ್ಸೋಮಸವನ ಸ್ತದಪರಾಜಿತಾ ಪೂರ್ಬ್ರಹ್ಮಣಃ ಪ್ರಭುವಿಮಿತಗ್ ಹಿರಣ್ಮಯಂ"** ಎಂದು (ಛಾಂ. ೮. ೫. ೩) ಶ್ರುತಿಯಲ್ಲಿ ಹೇಳಿರುವ ಐರಂಮದೀಯವೆಂಬ ಹೆಸರುಳ್ಳ ಸರಸ್ಸನ್ನೂ, **ಸೋಮಸವನವೆಜ್ಞ್ಗರ ಅಶ್ವತ್ಥತ್ತೈ ಕಿಟ್ಟುವಿತ್ತು** - ಸೋಮಸವನವೆಂಬ ಅಶ್ವತ್ಥವೃಕ್ಷವನ್ನು ಸೇರುವ ಹಾಗೆ ಮಾಡಿ; ಇವುಗಳು ವಿರಜಾ ನದಿಯನ್ನು ದಾಟಿದನಂತರ ಶ್ರಿಯಃಪತಿಯ ಸಭಾಮಂಟಪಕ್ಕೆ ಹೋಗುವ ಮಾರ್ಗದಲ್ಲಿ ಸಿಕ್ಕುತ್ತವೆಂಬ ಭಾವವು. ಇವು ನಿತ್ಯವಿಭೂತಿಗೆ ಸೇರಿದವು. **ಐರಂಮದೀಯ** ವೆಂದರೆ, **ಇರಯಾ ಮಾದ್ಯನ್ತಿ ಯಸ್ಮಿನ್ ತತ್** ಎಂಬ ವ್ಯುತ್ಪತ್ತಿಯಿಂದ ಅಮೃತಮಯವಾದು

(೧೦) ಮಾಲಾಂಜನ ಚೂರ್ಣವಾಸೋ ಭೂಷಣ ಹಸ್ತ್ಯೈಗಳಾನ ಐನ್ನೂರು ದಿವ್ಯಾಪ್ಸರಸ್ಸುಕ್ಕಳ್ ಇಟ್ಟ್ ಎದಿರ್ ಕೊಳ್ಳವಿತ್ತು (೧೧) ಬ್ರಹ್ಮಾಲಂಕಾರತ್ತಾಲೆ ಅಲಂಕರಪ್ಪಿತ್ತು (೧೨) ಬ್ರಹ್ಮಗಂಧ ರಸ ತೇಜಸ್ಸುಕ್ಕಳ್

---

ದೆಂಬ ಭಾವವು; **ಸೋಮಸವನನೆಂದು** ಈ ಅಶ್ವತ್ಥಕ್ಕೆ ಏಕೆ ಹೆಸರೆಂದರೆ, ಚಂದ್ರನ ಹಾಗೆ ತುಂಬಾ ಆಹ್ಲಾದಕರವಾದುದರಿಂದ; ಅಲ್ಲಿಂದ ಮುಂದಕ್ಕೆ ಶ್ರುತಿಯು **ಪ್ರಭು ವಿಮಿತಂ** - ಸರ್ವೇಶ್ವರನ ದಿವ್ಯಮಂಗಳ ವಿಗ್ರಹ ವಿಶಿಷ್ಟವಾದ, **ಹಿರಣ್ಮಯಂ** - ಬಹು ಪ್ರಕಾಶವಾದ ಸಭಾಮಂಟಪವಿದೆ ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ ಛಾಂದೋಗ್ಯವು ಬ್ರಹ್ಮಚರ್ಯದಲ್ಲಿದ್ದ ಮಹಾಭಾಗವತನು ಸರ್ವೇಶ್ವರನ ಸಭೆಯನ್ನು ಕುರಿತು ಹೋಗುವನೆಂದು ಹೇಳಿ, ಆ ಮಾರ್ಗದಲ್ಲಿ ಈ ಸರಸ್ಸೂ ಅಶ್ವತ್ಥವೂ ಸಹ ಸಿಕ್ಕುತ್ತವೆಂದು ಬೋಧಿಸುತ್ತದೆ ಛಾಂದೋಗ್ಯದಲ್ಲಿ ಮೂರು ಸರಸ್ಸುಗಳು ಸಿಕ್ಕುತ್ತವೆಂದು ಹೇಳಲ್ಪಟ್ಟಿದೆ:—(೧) ಅರವೆಂದೂ, (೨) ಅರಣ್ಯವೆಂದೂ, ಇವೆರಡನ್ನೂ ಅರ್ಣವಗಳೆಂದು ಹೇಳಿರುತ್ತದೆ, (೩) ಐರಂಮದೀಯಂ- ಶ್ರೀ ದೇಶಿಕರವರು ಇಲ್ಲಿ ಮೂರನೆಯದೊಂದನ್ನು ಮಾತ್ರವೇ ತಿಳಿಸಿರುತ್ತಾರೆ. ಇದು ಮಿಕ್ಕ ಎರಡಕ್ಕೂ ಉಪಲಕ್ಷಣವು, ಮಾರ್ಗದಲ್ಲಿರುವವೆಲ್ಲವನ್ನೂ ಹೇಳದೆ ಮುಖ್ಯವಾದುದನ್ನು ಮಾತ್ರ ಹೇಳುವ ಪದ್ಧತಿಯೂ ಉಂಟು

(೧೦) ಅಲ್ಲಿಂದ ಮುಂದಕ್ಕೆ ಈತನಿಗುಂಟಾಗುವ ಸತ್ಕಾರವನ್ನು ಕೌಷೀತಕೀ ಬ್ರಾಹ್ಮಣದಲ್ಲಿ ಹೇಳಿರುವ ಪ್ರಕಾರ ಉಪದೇಶಿಸುತ್ತಾರೆ.—**ಮಾಲಾಂಜನ ಚೂರ್ಣವಾಸೋ ಭೂಷಣ ಹಸ್ತ್ಯೈಗಳಾನ ದಿವ್ಯಾಪ್ಸರಸ್ಸುಗಳ್ ಇಟ್ಟ್** - ಪುಷ್ಪ ಹಾರ, ಧೂಪ, ಗಂಧವ ಸುವಾಸನೆಯ ಹುಡಿ, ಪೀತಾಂಬರ, ದಿವ್ಯಾಭರಣಗಳನ್ನು ಕೈಗಳಲ್ಲಿ ಧರಿಸಿದ ದಿವ್ಯರಾದ ಅಪ್ಸರಸ್ಸುಗಳ ಮೂಲಕ, **ಎದಿರ್ ಕೊಳ್ಳವಿತ್ತು** - ಎದುರುಗೊಳ್ಳುವ ಹಾಗೆ ಮಾಡಿಸಿ, ಅವರುಗಳ ಮೂಲಕವಾಗಿಯೇ, **(೧೧) ಬ್ರಹ್ಮಾಲಂಕಾರತ್ತಾಲೇ ಅಲಂಕರಪ್ಪಿತ್ತು** - ಪರಬ್ರಹ್ಮನನ್ನು ಹೋಗಿ ಸೇರುವದಕ್ಕೆ ಯೋಗ್ಯವಾದ ಪರವಾಸುದೇವನಿಗೆ ಸಮನಾದ ಅಲಂಕಾರದಿಂದ ಅಲಂಕರಿಸಲ್ಪಡುವ ಹಾಗೆ ಮಾಡಿ ಎಂಬರ್ಥವು. ಕೌಷೀತಕಿಯು ಹೇಳಿರುವದೇನೆಂದರೆ:—"**ತಂ ಪಞ್ಚ ಶತಾನ್ಯಪ್ಸರಸಾಂ ಪ್ರಧಾವಂತಿ ಶತಂ ಮಾಲಾಹಸ್ತಾಶ್ಶತಮಂಜನ ಹಸ್ತಾಶ್ಶತಂ ಚೂರ್ಣಹಸ್ತಾಶ್ಶತಂ ವಾಸೋಹಸ್ತಾಶ್ಶತಂ ಭೂಷಣಹಸ್ತಾಸ್ತಂ ಬ್ರಹ್ಮಾಲಂಕಾರೇಣಾಲಂಕುರ್ವಂತಿ,**" ಐನೂರು ಅಪ್ಸರಸ್ಸುಗಳು ಓಡಿಬಂದು ಸುಖಾಗಮನವನ್ನು ಹೇಳುವರು. ಅವರಲ್ಲಿ ನೂರು

**ಪ್ರವೇಶಿಪ್ಪಿತ್ತು, (೧೩) "ಕುಡಿಯುಡಿಯಾರಿವರ್ ಗೋವಿಂದನ್ರನಕ್ಕೆನ್ರು।**

ಮಂದಿಯು ಕೈಯಲ್ಲಿ ಹಾರವನ್ನು ಹಿಡಿದಿರುವವರಾಗಿಯೂ, ಇನ್ನು ನೂರು ಮಂದಿಯು ಗಂಧದ ಹುಡಿಯನ್ನೂ, ಇನ್ನು ನೂರು ಮಂದಿಯು ಒಳ್ಳೇ ಒಳ್ಳೇ ಬಟ್ಟೆಗಳನ್ನು ಕೈಯಲ್ಲಿ ಹಿಡಿದವರಾಗಿಯೂ, ಬಾಕಿ ನೂರು ಮಂದಿಯು ಆಭರಣ ಗಳನ್ನು ಕೈಯಲ್ಲಿ ಹಿಡಿದವರಾಗಿಯೂ ಬಂದು ಎದುರುಗೊಳ್ಳುವರು. ಇದೆಲ್ಲಾ ಏತಕ್ಕೆಂದರೆ, ಅಲಂಕಾರಮಾಡಿ ಶ್ರಿಯಃಪತಿಯ ಸಭಾಮಂಟಪ ಪ್ರವೇಶಕ್ಕೆ ಯೋಗ್ಯವಾದ, ಆತನಿಗೆ ಸಮವಾದ ಉಡುಪು ಆಭರಣಗಳಿಂದ ಅಲಂಕರಿಸುವದ ಕ್ಕಾಗಿ ಎಂದು ಹೇಳಲ್ಪಟ್ಟಿರುತ್ತದೆ.

(೧೨) ಬ್ರಹ್ಮಗಂಧ ರಸ ತೇಜಸ್ಸುಕ್ಕಳ್ಳೆ ಪ್ರವೇಶಿಪ್ಪಿತ್ತು - **ಸ ಆಗಚ್ಛತಿ ತಿಲ್ಯಂ ವೃಕ್ಷಂ, ತಂ ಬ್ರಹ್ಮಗಂಧಃ ಪ್ರವಿಶತಿ, ಸ ಆಗಚ್ಛತಿ ಸಾಲಜ್ಜಂ ಸ್ಥಾನಂತಂ ಬ್ರಹ್ಮರಸಃ ಪ್ರವಿಶತಿ, ಸ ಆಗಚ್ಛತಿ ಅಪರಾಜಿತೆ ಮಾಯತನಂ, ತಂ ಬ್ರಹ್ಮತೇಜಃ ಪ್ರವೇಶತಿ,** ಎಂದು ಕೌಷೀತಕಿಯಲ್ಲಿ ಹೇಳಿರುವ ಹಾಗೆ, ಸರ್ವೇಶ್ವರನ ಸಭೆಯನ್ನಲಂಕರಿಸುವದಕ್ಕೆ ಯೋಗ್ಯವಾದ ಗಂಧ ರಸ ತೇಜಸ್ಸುಗಳನ್ನು ಈತನು ಹೊಂದಿರಬೇಕಾಗಿರುವದರಿಂದ, ಬ್ರಹ್ಮಗಂಧವೂ, ಬ್ರಹ್ಮ ರಸವೂ, ಬ್ರಹ್ಮತೇಜಸ್ಸೂ ಸಹ ಈತನನ್ನು ಪ್ರವೇಶಿಸುತ್ತವೆ ಎಂದು ಇಲ್ಲಿ ಹೇಳ ಲ್ಪಟ್ಟಿರುತ್ತದೆ.

(೧೩) ಮುಂದೆ ಸರ್ವೇಶ್ವರನ ಗೋಪುರ ಬಾಗಲಲ್ಲಾಗುವ ಸತ್ಕಾರವನ್ನು ವರ್ಣಿಸುವರಾಗಿ, ನಮ್ಮಾಳ್ವಾರ್ರವರ ದಿವ್ಯಸೂಕ್ತಿಯಿಂದಲೇ ಆ ಸತ್ಕಾರ ಪ್ರಕಾರ ವನ್ನುಪದೇಶಿಸುತ್ತಾರೆ :— ಇವರ್ - ಈಗ ವೈಕುಂಠವನ್ನು ಕುರಿತು ಬಂದಿರುವ ಭಾಗವತಾಗ್ರೇಸರರು **ಗೋವಿಂದರ್ ತನಕ್ಕು** - ಎಂದರೆ ಸರ್ವೇಶ್ವರನಿಗೆ, **"ಗಾಂ ವಿಂದತೇ"** ಎಂಬ ವ್ಯುತ್ಪತ್ತಿಯಿಂದ ಭೂಮಿಯನ್ನು ಹೊಂದಿದವನು ಎಂದರೆ ತನ್ನ ಸ್ವಾಧೀನವಾಗಿ ವುಳ್ಳವನು, ಅಥವಾ ಅವತಾರ ದೆಶೆಯಲ್ಲಿ ಆಕಳನ್ನು ಹೊಂದಿದವನು ಎಂಬರ್ಥವಾಗುತ್ತದೆ, **ಕುಡಿಯುಡಿಯಾರ್** - ಕುಲಕ್ರಮವಾಗಿ ಬಂದ ದಾಸಭೂತರು, ಅಥವಾ ಶ್ರಿಯಃಪತಿಯು ಹೇಗೆ ಕುಲದೈವತೆಯೋ, ಆದುದ ರಿಂದ ಹಾಗೆ ಇವರು ಕುಲದಾಸರೆಂಬ ಭಾವವು, ಯಾವಾಗ ದಾಸಭೂತರೆಂಬುದು ಆ ಎದುರುಗೊಂಡ ನಿತ್ಯಸೂರಿಗಳಿಗೆ ವೇದ್ಯವಾಯಿತೋ ಆಗ ಅವರುಗಳು ಹೀಗೆ ಶ್ಲಾಘಿಸಿ, ಸತ್ಕರಿಸಿ, ಎದುರುಗೊಳ್ಳಲು ಕಾರಣವು ಎನ್ರು - ಹೀಗೆ ಶ್ಲಾಘಿಸಿ,

(೧೩) ತಿರುವಾಯ್ಮೊಳಿ ೧೦. ೯. ೮.

**ಮುಡಿಯುಡೈ ವಾನವರ್ ಮುಱೈ ಮುಱೈ ಯೆದಿರ್‌ಗೊಳ್ಳಕ್ಕೊಡಿಯಣಿ ನೆಡುಮತಿಟ್ಕೋಪುರಙ್ಕುರುಕವಿತ್ತು" (೧೪) ಇಂದ್ರಪ್ರಜಾಪತಿಗಳೆನ್ರು**

---

**ಮುಡಿಯುಡೈವಾನವರ್**-ಅಭಿಷಿಕ್ತರಾದ ಅಥವಾ ಮುಕುಟ ಧರಿಸಿದ ನಿತ್ಯಸೂರಿಗಳೂ, ಮುಕ್ತರೂ, ಸರ್ವೇಶ್ವರನೀಗ ಸಾಮ್ರಾಜ್ಯಪದವಿಯಲ್ಲಿ **ಅಭಿಷಿಕ್ತನಾದ ಚಕ್ರ** ವರ್ತಿಯು, ಹೀಗಿರುವಾಗ ಇವರುಗಳು ಹೇಗೆ ಅಭಿಷಿಕ್ತರು ಎಂದರೆ ಕೈಂಕರ್ಯ ಸಾಮ್ರಾಜ್ಯ ಪದವಿಯ ಮಾಹಾತ್ಮ್ಯೆಯನ್ನರಿತು **"ಅಹಂ ಸರ್ವಂ ಕರಿಷ್ಯಾಮಿ"** ಎಂದು ಹೇಳಿದ ಮಹನೀಯರಾದುದರಿಂದ ಇವರೂ ಅಭಿಷಿಕ್ತರೆಂದು ಹೇಳಲ್ಪಟ್ಟಿತು, ಇವರುಗಳು ಈ ವೈಕುಂಠವನ್ನು ಸೇರಲು ಬಂದವನನ್ನು, **ಮುಱೈ ಮುಱೈ ಎದಿರ್‌ಗೊಳ್ಳ** - ಪ್ರತ್ಯೇಕ ಪ್ರತ್ಯೇಕವಾಗಿ ಬಂದು ಎದುರುಗೊಂಡು ಬರಮಾಡಿಕೊಂಡು, **ಕೊಡಿಯಣಿ** - ಧ್ವಜದಿಂದಲಂಕೃತವಾದ, **ನೆಡುಮದಿಳ್ ಗೋಪುರಂ** - ಎತ್ತರವಾದ ಪ್ರಾಕಾರಗಳುಳ್ಳ ಗೋಪುರವನ್ನು, **ಕುರಕವಿತ್ತು** - ಸಮೀಪಿಸುವ ಹಾಗೆ ಮಾಡಿ ಎಂಬರ್ಥವು. ಇಲ್ಲಿ ಮೂರು ಪಾದ ಮಾತ್ರ ಉದಾಹರಿಸಲ್ಪಟ್ಟಿತು. ನಾಲ್ಕನೇ ಪಾದವು, **"ಕುರುಗಿನರ್ । ವಡಿವುಡೈ ಮಾತವನ್ ವೈಗುಂದಮ್ ಪುಗವೇ"** ಏತಕ್ಕೆ ಗೋಪುರಸಮೀಪಕ್ಕೆ ಹೋಗಿದ್ದುದು, ಎಂದರೆ ಆಳ್ವಾರ್ರು ಹೇಳುತ್ತಾರೆ. **ಅಡಿವುಡೈ** - ಯಾವಾಗಲೂ **ಸಾಕ್ಷಾನ್ಮನ್ಮಥ ಮನ್ಮಥಃ** ಎಂದು ಹೇಳಿರುವ ಹಾಗೆ ಸರ್ವಾಯುಧ ಸರ್ವಭೂಷಣಯುಕ್ತನಾಗಿ ಸರ್ವಲಾವಣ್ಯಮಹೋದಧಿಯಾಗಿರುವ, **ಮಾಧವನ್,** ದ್ವಯದ ಉತ್ತರಖಂಡದ **ಶ್ರೀ**ಮಚ್ಛಬ್ದದಲ್ಲಿ ತೋರುವ, ಮತ್ತು **ವೈಕುಂಠೇತು ಪರೇಲೋಕೇ ಶ್ರಿಯಾ ಸಾರ್ಧಂ** ಎಂಬಲ್ಲಿಯೂ ವ್ಯಕ್ತಪಡುವ ಪ್ರಾಪ್ಯನಾದ ಶ್ರಿಯಃಪತಿಯ, **ವೈಗುನ್ದಂ ಪುಗವೇ** - ವೈಕುಂಠವನ್ನು ಪ್ರವೇಶಿಸುವದಕ್ಕಾಗಿ, ಗೋಪುರ ಬಾಗಿಲ ಸಮೀಪವನ್ನು ಸೇರುವ ಹಾಗೆ ಸತ್ಕರಿಸಿ ಕರೆದುಕೊಂಡು ಹೋಗುವರೆಂದು ಹೇಳಲ್ಪಟ್ಟಿತು. ನಿತ್ಯಸೂರಿಗಳು ಧ್ವಜದಿಂದಲಂಕರಿಸಲ್ಪಟ್ಟ ಪ್ರಾಕಾರಗಳುಳ್ಳ ಗೋಪುರದ ಈಚಿಗೇನೇ ಬಂದು ಎದುರುಗೊಂಡು, ಸುಖಾಗಮನವನ್ನು ಬಯಸಿ, ಲೀಲಾವಿಭೂತಿಯಲ್ಲಿ ಅವರು ಮಾಡಿದ ಭಗವದ್ಭಾಗವತ ಕೈಂಕರ್ಯಗಳನ್ನು ಕೊಂಡಾಡಿ, ತಾವು ಯಾರ್ಯಾರೆಂಬುದನ್ನು ಒಬ್ಬೊಬ್ಬರಾಗಿ ತಿಳಿಸಿ, ಅವರನ್ನು ಗೋಪುರದ ಬಾಗಿಲವರೆಗೂ ಕರೆದುಕೊಂಡುಹೋಗಿ ಬಿಟ್ಟು ಎಂಬ ಭಾವವು.

(೧೪) **ಇಂದ್ರ ಪ್ರಜಾಪತಿಗಳೆನ್ರು ಪೇರುಡೈಯ**-ಇಂದ್ರನೆಂದೂ ಪ್ರಜಾಪತಿ ಎಂದೂ ಹೆಸರು ಹೊಂದಿರುವ, **ದ್ವಾರಗೋಪರ್ಕ್ಕೆ**-ದ್ವಾರಪಾಲಕರನ್ನು **ಕಿಟ್ಟ**

ಪೇರುಡೈಯ ದ್ವಾರಗೋಪರ್ಕ್ಕೆ ಕಿಟ್ಟನಿತ್ತು, (೧೫) "ವೈಗುನ್ದಮ್ ಪುಗುತ

ನಿತ್ತು–ಹೊಂದುವ ಹಾಗೆ ಮಾಡಿ, ದೇವೇಂದ್ರನೂ ಚತುರ್ಮುಖನೂ ದ್ವಾರಪಾಲಕರಲ್ಲವು. ಆದುದರಿಂದ, ಈ ಇಂದ್ರಪ್ರಜಾಪತಿಗಳು. ಪೇರುಡೈಯ ಎಂದು ಹೇಳಿರುವದರಿಂದ ಬೇರೆ ಎಂದು ಭಾವಿಸತಕ್ಕದ್ದು. "ಸ ಆಗಚ್ಛತೀಂದ್ರ ಪ್ರಜಾಪತೀ ದ್ವಾರಗೋಪೌ ತಾವಸ್ಮಾದಪಾದ್ರವತ" ಇತಿ ಎಂಬ ಕೌಷೀತಕೀ ವಾಕ್ಯಾನುಸಾರ ಈ ದ್ವಾರಪಾಲಕರನ್ನು ಹೊಂದುವನೆಂದು ಹೇಳಲ್ಪಟ್ಟಿರುತ್ತದೆ.

ಮುಂದೆ ವಿಲಕ್ಷಣಗಳಾದ ರಾಜೋಪಚಾರಗಳು ಈತನಿಗೆ ನಡೆಯುತ್ತವೆ ಎಂಬುದನ್ನು ನಮ್ಮಾಳ್ವಾರ್ರವರ ಪಾಶುರಗಳ ಮೂಲಕ ತಿಳಿಯಪಡಿಸುತ್ತಾರೆ "ವೈಗುನ್ದಮ್" ಎಂಬ ಪಾಶುರವು ಯಾವುದೆಂದರೆ :—

ವೈಕುನ್ದಮ್ಪುಕುತಲುಮ್ ವಾಶಲಿಲ್ ವಾನವರ್
ವೈಕುನ್ದನ್ನಮರೆನುರೆ ಮತಿಡಮ್ಪುಕುದೆನ್ರು
ವೈಕುನ್ದತ್ತಮರರು ಮುನಿವರುಮ್ ವಿಯನ್ದನರ್
ವೈಕುನ್ದಮ್ಪುಗುವದು ಮಣ್ಣವರ್ ವಿದಿಯೇ ॥

ವೈಕುನ್ದಮ್ ಪುಗುತಲುಮ್–ವೈಕುಂಠವನ್ನು ಪ್ರವೇಶಿಸಿದ ಒಡನೆಯೇ, ವಾಶಲಿಲ್ ವಾನವರ್ - ಬಾಗಲಲ್ಲಿರುವ ನಿತ್ಯಸೂರಿಗಳು, ವೈಕುನ್ದನ್ನಮರ್– ಶ್ರೀ ವೈಕುಂಠನಾಥನಿಗೆ ಆದರಣೀಯರಾದವರು ಎಂದರೆ ಅಂತಹ ನೀವು, ಎಮರ್ - ನಮಗೆ ತುಂಬಾ ಬೇಕಾದವರು, ಎಮತಿಡುಮ್ ಪುಕುದು ಎನ್ರು - ನಮ್ಮ ಸ್ಥಾನದಲ್ಲಿ, ಪುಕುದು - ನೀವು ಪ್ರವೇಶಿಸತಕ್ಕದ್ದು, ಎಂದರೆ ನಾವು ಅನುಭವಿಸುವ ಕೈಂಕರ್ಯ ಸಂಪತ್ತನ್ನು ತಾವೂ ನೂ ಅನುಭವಿಸತಕ್ಕದ್ದು, ಎನ್ರು - ಎಂಬದಾಗಿ, ವಿಯಂದನರ್ - ಆಶ್ಚರ್ಯಪಟ್ಟರು. ವೈಕುಂದತ್ತು - ಶ್ರೀ ವೈಕುಂಠದಲ್ಲಿರುವ, ಅಮರರುಮ್ ಮುನಿವರುಮ್ - ಗುಣನಿಷ್ಠರೂ ಕೈಂಕರ್ಯಪರರೂ, ಮಣ್ಣವರ್ - ಈ ಭೂಮಂಡಲಕ್ಕೆ ಸೇರಿ ಪ್ರಕೃತಿಬದ್ಧರಾಗಿ ಇಂದ್ರಿಯಗಳಿಗೆ ವಶವಾಗಿರುವವರು, ವೈಗುನ್ದಮ್ ಪುಗುವದು - ವೈಕುಂಠವನ್ನು ಬಂದು ಪ್ರವೇಶಿಸುವದು, ವಿದಿಯೇ - ಒಂದು ಪರಮಭಾಗ್ಯವಲ್ಲವೇ ಎಂದು, ವಿಯನ್ದನರ್ - ಸಂತೋಷಪಟ್ಟರು ಅಥವಾ ಆಶ್ಚರ್ಯಪಟ್ಟರು ಈ ನಿತ್ಯಸೂರಿಗಳು ಬಂದು ಗೋಪುರದ್ವಾರದಲ್ಲಿ ಎದುರುಗೊಂಡು ಸತ್ಕರಿಸಿ, ಪ್ರಕೃತಿಯಿಂದ ಕಟ್ಟಲ್ಪಟ್ಟು ಇಂದ್ರಿಯಗಳಿಗೆ ವಶವಾಗಿರುವ ಈ ಭೂಮಂಡಲದವರು ಪರಮಪದಕ್ಕೆ

(೧೫) ತಿರುವಾಯ್ಮೊಳಿ ೧೦ ೯. ೯.

ಬರುವದೆಂಬುದು ತುಂಬಾ ಭಾಗ್ಯವಾದ ವಿಷಯವೇ ಎಂದು ಕೊಂಡಾಡಿ, ನಾವು ಅನುಭವಿಸುವ ಕೈಂಕರ್ಯ ಸಾಮ್ರಾಜ್ಯವನ್ನು ನೀವೂ ಅನುಭವಿಸತಕ್ಕದ್ದೆಂದು ಸಂತೋಷಗೊಂಡರೆಂಬಭಿಪ್ರಾಯವು. ಇದರ ಮುಂದಿನ ಪಾಶುರವು : —

ವಿದಿವಗೈ ಪುಗುನ್ದನರೆನ್ರು ನಲ್ ವೇದಿಯರ್ ।
ಪದಿಯಿನಿಲ್ ಪಾಙ್ಗಿನಿಲ್ ಪಾದಙ್ಗಳ್ ಕಳುವಿನರ್ ।
ನಿದಿಯುಂನರ್ಚುಣ್ಣಮುಂನಿರೈ ಕುಡವಿಳಕ್ಕಮುಂ ।
ಮದಿಮುಕ ಮಡನ್ದೈಯರೇನ್ದಿನರ್ ವನ್ದೇ ॥

ಇವರರ್ಥವು :— ವಿದಿವಗೈ - ನಮ್ಮ ಭಾಗ್ಯರೂಪವಾದ ಈಶ್ವರಾಜ್ಞೆಯ ಪ್ರಕಾರ, ಪುಗನ್ದನರ್ - ಬಂದು ಈ ವೈಕುಂಠ ಲೋಕವನ್ನು ಪ್ರವೇಶಿಸಿದರು, ಎನ್ರು - ಎಂದು ಸಂತುಷ್ಟಚಿತ್ತರಾಗಿ, ನಲ್‌ವೇದಿಯರ್ - ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸ ಸ್ಸಮಿನ್ಧತೇ ಎಂದರೆ ಮೇಧಾವಿಗಳಾಗಿಯೂ ಭಗವದ್ವಿಷಯ ಸ್ತುತಿಪರರಾಗಿಯೂ, ಭಗವದನುಭವೈಕಾಗ್ರೇಸರರಾಗಿಯೂ ಇರುವ ನಿತ್ಯಸೂರಿಗಳು ಪ್ರಕಾಶಿಸುತ್ತಿದ್ದಾರೆ ಎಂಬಿವೇ ಮೊದಲಾದ ಪ್ರಮಾಣಗಳಲ್ಲಿ ಚನ್ನಾಗಿ ಶ್ರುತಿಪ್ರತಿಪಾದ್ಯರಾದ ನಿತ್ಯಸೂರಿಗಳು ಪದಿಯಿನಿಲ್ - ತಮ್ಮ ತಮ್ಮ ಸ್ಥಳಗಳಲ್ಲಿ, ಪಾಙ್ಗಿನಿಲ್ - ನೋಪಚಾರವಾಗಿ, ಪಾದಙ್ಗಳ್ ಕಳುವಿನರ್ - ಪಾದ್ಯವನ್ನು ಸಮರ್ಪಿಸಿದರು, ಪಾದಗಳನ್ನು ತೊಳೆದರು. ನಿಧಿಯುಮ್ - "ಧನಂ ಮದೀಯಂ ತವ ಪಾದ ಪಙ್ಕಜಂ" ಎಂದು ಹೇಳಿರುವ ಹಾಗೆ ಆಶ್ರಿತರಿಗೆ ನಿಧಿರೂಪವಾದ ಶ್ರೀ ಶಠಗೋಪನನ್ನೂ, ನರ್ಚುಣ್ಣಮುಮ್ ಒಳ್ಳೇ ಶ್ರೀ ಚೂರ್ಣವನ್ನೂ, ನಿರೈಕುಡ - ಪೂರ್ಣಕುಂಭವನ್ನೂ, ವಿಳಕ್ಕುಮು - ದೀಪವನ್ನೂ ಸಹ, ಮದಿಮುಕಮ್ - ಚಂದ್ರನ ಹಾಗೆ ಮುಖವುಳ್ಳ, ಮಡನ್ದೈಯರ್ - ಸ್ತ್ರೀಯರುಗಳು ಅಪ್ಸರಸ್ತ್ರೀಯರು, ವನ್ದು ಏನ್ದಿನರೇ - ಎದುರುಗೊಂಡು ಬಂದು ಧರಿಸಿದರಲ್ಲವೇ ? ಎಂದರೆ ವೇದಪ್ರತಿಪಾದ್ಯರಾದ ನಿತ್ಯಸೂರಿಗಳು ಎಮಗೆ ಬಂದು ತಾವುಗಳು ಲೀಲಾವಿಭೂತಿಯನ್ನು ಬಿಟ್ಟು ಇಲ್ಲಿಗೆ ನಮ್ಮೊಂದಿಗೆ ಇರಲು ಬಂದಿದ್ದು ತಮ್ಮ ಭಾಗ್ಯೋದಯವೆಂದು ಶ್ಲಾಘಿಸಿ, ತಾವು ಅಸ್ಪೃಷ್ಟ ಸಂಸಾರ ಗಂಧರ್, ಇವರುಗಳಾದರೋ ಬಹ ಕಾಲಕ್ಕೀಗ ಮುಕ್ತಬಂಧರು ಎಂಬ ಅಹಂಕಾರ ಒಂದೂ ಇಲ್ಲದೆ ಅವರ ತಿರುವಡಿಗಳನ್ನು ತೊಳೆದು ಅವರಿಗೆ ಮರ್ಯಾದಾರ್ಥವಾಗಿ ಪದ್ಧತಿ ಪ್ರಕಾರ ಅತಿ ಸುಂದರರಾದ ಹೆಂಗಸರಿಂದ ತರಲ್ಪಟ್ಟ, ಶ್ರೀ ಚೂರ್ಣ, ಪೂರ್ಣಕುಂಭ, ದೀಪಗಳ ಮೂಲಕ ಶ್ರೀಶಠಾರಿಯನ್ನು ಸಮರ್ಪಿಸಿ ಇದೀಗ ನಮ್ಮ ಮುಖ್ಯ ಧನವೆಂದು ನಿರೂಪಿಸಿದರೆಂಬ ಭಾವವು. ಈಗಲೂ ಮಹನೀಯರುಗಳು ದೇವಾಲಯಕ್ಕೆ ಬಂದರೆ ಈ ಮರ್ಯಾದೆಗಳು ನಡೆಯುತ್ತವೆ.

**ಲುವ್" ಎನ್ರು ತುಡಙ್ಗಿ ಮೇಲ್‌ಮೂನ್ರು ಪಾಟ್ಟಿಲುಮ್ ಶೊಲ್ಲುಗಿರ ಪಡಿಯೇ ಅಪ್ರಾಕೃತಙ್ಗಳಾನ ರಾಜೋಪಚಾರಙ್ಗಳೈಯ್ಯೈಪ್ಪಣ್ಣಿವಿತ್ತು (೧೬) ಅನಂದಮಯಮಾನ ಮಣ್ಡಪತ್ತಿಲ್ ಅಳಗೋಲಕ್ಕತ್ತಿಲೆ ಪುಕು**

---

**ವನ್ದವರೆದಿರ್ ಕೊಳ್ಳಮಾ ಮಣಿಪಣ್ಡಪತ್ತು ।**
**ಅನ್ದಮಿಲ್ ಪೇರಿನ್ಬತ್ತಡಿಯರೋಡಿರುನ್ದಮೈ ।**
**ಕೊನ್ದಲರ್ ಪೊಳಿಲ್ ಕುರುಗೂಡಚ್ಚಡ ಗೋಪರ್ ಶೊ ।**
**ಲ್ಪನ್ದಙ್ಗಳಾಯಿರ ತಿವ್ವೈ ವಲ್ಲಾರ್ ಮುನಿವರೇ ॥**

ಈ ಪಾಶುರದ ಪೂರ್ವಾರ್ಧದಿಂದ, ಈತನು ಸರ್ವೇಶ್ವರ ಸಭಾಮಂಟಪಕ್ಕೆ ಕರೆದುಕೊಂಡು ಹೋದ ಒಡನೆಯೇ, ತನಗೆ ಪರಮಪ್ರಿಯನಾಗಿದ್ದ, ಇದುವರೆಗೂ ಮಾರ್ಗ ತಪ್ಪಿಹೋದವನು ಪುನಃ ಸರಿಯಾದ ಮಾರ್ಗಕ್ಕೆ ಬಂದು ಸೇರಿದನೇ ಎಂಬ ಪ್ರೀತ್ಯತಿಶಯದಿಂದ ಸಂತುಷ್ಟನಾದ ಸರ್ವೇಶ್ವರನೇ ಬಂದು ಎದುರುಗೊಂಡು ಹೋಗಿ ಪರಮಾನಂದವನ್ನು ಹೊಂದುವನು ಎಂದು ಹೇಳಿ ಉತ್ತರಾರ್ಧದಿಂದ ಈ ಹತ್ತು ಪಾಶುರಗಳನ್ನು ಪಠನಾದಿಗಳಿಂದ ತಿಳಿದವರು ಭಗವದ್ಗುಣ ಮನನ ಶೀಲರಾಗುವರೆಂದು ಹೇಳುತ್ತಾರೆ.

ಹೀಗೆ **ಈ ಮೂನ್ರು ಪಾಟ್ಟಿಲುಮ್ ಶೊಲ್ಲುಗಿರ ಪಡಿಯೇ** - ಹೀಗೆ ಮೂರು ಪಾಶುರಗಳಿಂದಲೂ ಶ್ರೀ ನಮ್ಮಾಳ್ವಾರ್ರವರು ಉಪದೇಶಿಸಿರುವ ಹಾಗೆ, **ಅಪ್ರಾಕೃತಙ್ಗಳಾನ ರಾಜೋಪಚಾರಙ್ಗಳೈ ಪ್ಪಣ್ಣಿವಿತ್ತು** - ನಿರುಪಾಧಿಕಗಳಾದ ರಾಜೋಪಚಾರಗಳು ಈತನಿಗೆ ಉಂಟಾಗುವ ಹಾಗೆ ಮಾಡಿ, ಪ್ರಾಕೃತ ರಾಜಭೋಗಗಳು ಅನಿತ್ಯಗಳು ಮತ್ತು ಭಯಯುಕ್ತವಾದವು, ಹಾಗಲ್ಲದೆ ನಿರುಪಾಧಿಕಗಳಾದವು ಎಂಬ ಭಾವವು ; ಅದೂ ಅಲ್ಲದೆ ಪ್ರಾಕೃತ ರಾಜೋಪಚಾರಗಳು ಭಯಾನುಸಾರ ನಡೆಯತಕ್ಕವು ಮಾತ್ರವೇ ವಿನಾ ನಿರ್ಹೇತುಕ ಪ್ರೀತಿಪುರಸ್ಸರವಾದವಲ್ಲವು; ಹಾಗಲ್ಲದೆ ಇವು ನಿರ್ಹೇತುಕ ಪ್ರೀತಿಪುರಸ್ಸರವಾದವಾದುದರಿಂದ ಅಪ್ರಾಕೃತಗಳೆಂದು ಹೇಳಲ್ಪಟ್ಟವು. ಅಥವಾ, ಇಲ್ಲಿನ ಉಪಚಾರ ದ್ರವ್ಯಗಳಲ್ಲಿ ತ್ರಿಗುಣಾತ್ಮಕವಾದ ಪ್ರಕೃತಿ ಸಂಬಂಧವೇ ಇಲ್ಲದಿರುವದರಿಂದಾಗಲಿ ಅಪ್ರಾಕೃತವಾದವೆಂದು ಹೇಳಲ್ಪಟ್ಟಿತು.

(೧೬) **ಆನಂದ ಮಯಮಾನ** - ನಿರುಪಾಧಿಕ ನಿರತಿಶಯ ಆನಂದದ ಪ್ರಾಚುರ್ಯವುಳ್ಳ, **ಮಣ್ಡಪತ್ತಿಲ್**-ಮಂಟಪದಲ್ಲಿ, **ಅಳಗೋಲಕ್ಕತ್ತಿಲೆ** - ದಿವ್ಯ ಸುಂದರವಾದ ಶ್ರಿಯಃಪತಿಯ ಒಡ್ಡೋಲಗದಲ್ಲಿ, **ಪುಕುರವಿಟ್ಟು** - ಪ್ರವೇಶ

(ರ) ತ ವಿಟ್ಟು (೧೭) "ಅನಯಾಹಂ ವಶೀಭೂತಃ ಕಾಲಮೇತನ್ನ ಬುದ್ಧವಾನ್। ಉಚ್ಚಮಧ್ಯಮ ನೀಚಾನಾಂ ತಾಮಹಂ ಕಥಮಾವಸೇ। ಅಪೇತ್ಯಾಹಮಿಮಾಂಹಿ(ಭಿ)ತ್ವಾ ಸಂಶ್ರಯಿಷ್ಯೇನಿರಾಮಯಂ। ಅನೇನಸಾಮ್ಯಂ ಯಾಸ್ಯಾಮಿ ನಾನಯಾಹ ಮಚೇತಸಾ। ಕ್ಷಮಂ ಮಮ ಸಹಾನೇನ

---

ಉಂಟಾಗುವ ಹಾಗೆ ಮಾಡಿ; ಸರ್ವೇಶ್ವರನೇ ಹೀಗೆಲ್ಲಾ ಮಾಡುವನೆಂಬಭಿಪ್ರಾಯವು.

(೧೭) **ಅಹಂ** – ನಾನು, **ಅನಯಾ** - ಈ ಪ್ರಕೃತಿಯಿಂದ, **ವಶೀಭೂತಃ** - ವಶ ಮಾಡಿಕೊಳ್ಳಲ್ಪಟ್ಟವನಾಗಿ, ಎಂದರೆ ಪ್ರಕೃತಿಗೆ ವಶನಾಗಿ, **ಏತತ್ ಕಾಲಂ** - ಇಷ್ಟು ಕಾಲದವರೆಗೂ, **ನ ಬುದ್ಧವಾನ್** - ನಾನು ತಿಳಿಯದೆ ಹೋದೆನು, ನನಗೆ ಬುದ್ಧಿ ಬರಲಿಲ್ಲವು ಎನ್ನುವದರಿಂದ ಇಷ್ಟು ಕಾಲವೂ ಬುದ್ಧಿಯಿಲ್ಲದೆ ವ್ಯರ್ಥವಾಗಿ ಕಳೆದೆನು ಎಂಬ ತಾತ್ಪರ್ಯವು. **ಉಚ್ಚ ಮಧ್ಯಮ ನೀಚಾನಾಂ, ಉಚ್ಚ** - ಉತ್ಕೃಷ್ಟವಾದ ದೇವಶರೀರವೇನು, **ಮಧ್ಯಮ** - ಉತ್ಕೃಷ್ಟವೂ ನೀಚವೂ ಅಲ್ಲದ ಮನುಷ್ಯ ಶರೀರವೇನು, **ನೀಚಾನಾಂ** - ಇವೆರಡೂ ಅಲ್ಲದೆ ಮಿಕ್ಕ ಎಲ್ಲಾ ಪಶು ಪಕ್ಷಿ ಸರೀಸೃಪಾದಿ ನೀಚಶರೀರಗಳೇ ಕೊನೆಯಾಗಿ ವುಳ್ಳ, **ತಾಂ** - ಆ ಪ್ರಕೃತಿಯನ್ನು, **ಕಥಂ** - ಹೇಗೆ, **ಆವಸೇ** – ಪ್ರವೇಶಿಸಿ ವಸಿಸುವೆನು? **ಅಹಂ** - ನಾನು, **ಇಮಾಂ** – ಈ ಪ್ರಕೃತಿಯನ್ನು, **ಹಿತ್ವಾ** - ತ್ಯಜಿಸಿ, **ಅಪೇತ್ಯ** - ದೂರವಾಗಿ ಬಂದು, **ನಿರಾಮಯಂ** - ದೋಷಗಂಧವಿಲ್ಲದೆ ಆನಂದಮಯನಾದ ಸರ್ವೇಶ್ವರನನ್ನು, **ಸಂಶ್ರಯಿಷ್ಯೇ** - ಚನ್ನಾಗಿ ಆಶ್ರಯಿಸುವೆನು, **ಅನೇನ** - ಈ ಆನಂದಮಯನಾದ ಪರಬ್ರಹ್ಮನೊಂದಿಗೆ, **ಸಾಮ್ಯಂ** - "**ನಿರಂಜನಃ ಪರಮಂ ಸಾಮ್ಯಮುಪೈತಿ**" ಎಂಬ ಶ್ರುತಿಯಲ್ಲಿ ಹೇಳಿರುವ ಹಾಗೆ ಸಾಮ್ಯವನ್ನು, **ಯಾಸ್ಯಾಮಿ** - ಹೊಂದುವೆನು, **ಅಹಂ**-ನಾನು, **ಅಚೇತಸಾ** - ಜ್ಞಾನಶೂನ್ಯವಾಗಿ ಜಡವಾದ, **ಅನಯಾ** – ಈ ಪ್ರಕೃತಿಯೊಂದಿಗೆ, **ಸಾಮ್ಯಂ** - ಸಾಮ್ಯವನ್ನು, **ನ ಯಾಸ್ಯಾಮಿ** - ಹೊಂದುವದಿಲ್ಲವು, **ಮಮ** - ನನಗೆ, **ಅನೇನ ಸಹ** – ಈ ಪರಮಾತ್ಮನೊಂದಿಗೆ, **ಏಕತ್ವಂ** – ಸೇರಿ ಒಂದಾಗಿ ಒಟ್ಟಿಗಿರುವದು, **ಕ್ಷಮಂ** - ಯೋಗ್ಯವಾದುದು, **ಅನಯಾ ಸಹ** - ಈ ಪ್ರಕೃತಿಯೊಂದಿಗೆ, **ಮಮ** - ನನಗೆ, **ಏಕತ್ವಂ** - ಒಟ್ಟಿಗೆ ಒಂದಾಗಿರುವದು, **ನಕ್ಷಮಂ**- ಯೋಗ್ಯವಾದುದಲ್ಲವು. ಪ್ರಕೃತಿಗೆ ವಶನಾಗಿ, ದೇಹದೊಂದಿಗೆ ಏಕೀಕರಿಸಿ,

---

(೧೭) **ಭಾರತ, ಶಾಂತಿ ೩೧೨. ೩೦, ೩೮, ೩೯.**

**ನ್ನೈಕತ್ವ ಮನಯಾ ಸಹ" (೧) "ಕ್ರೀಡಂತಂ ರಮಯಾ ಸಾರ್ಧಂ ಲೀಲಾ ಭೂಮಿಷು ಕೇಶವಂ । ಮೇಘಶ್ಯಾಮಂ ವಿಶಾಲಾಕ್ಷಂ ಕದಾ ದ್ರಕ್ಷ್ಯಾಮಿ**

---

ಭ್ರಮಯುಕ್ತನಾಗಿರುವದು ತನಗೆ ಉಚಿತವಾದುದಲ್ಲವು. ಇಷ್ಟು ದಿನಗಳೂ ಇದು ತಿಳಿಯದೆ ಅಜ್ಞಾನದಿಂದ ದೇಹವೇ ಆತ್ಮಾ ಎಂದು ಭ್ರಮಿಸಿ ವ್ಯರ್ಥವಾಗಿ ಕಾಲಗಳನ್ನು ಕಳೆದ ಬಿಟ್ಟೆನು. ಆದುದರಿಂದ ದೇಹಕ್ಕಿಂತ ನಾನು ವಿಲಕ್ಷಣನೆಂಬ ಜ್ಞಾನ ಉಂಟಾಗಿರುವದರಿಂದ ಅದನ್ನು ತ್ಯಜಿಸಿ ಸರ್ವೇಶ್ವರನನ್ನೇ ಆಶ್ರಯಿಸಿರುತ್ತೇನೆ. ಇದರಿಂದ ನಾನು ಕಾಲಾನಂತರ ಪರಬ್ರಹ್ಮನೊಂದಿಗೆ ಸಾಮ್ಯವನ್ನು ಮುಕ್ತಿದೆಸೆಯಲ್ಲಿ ಹೊಂದುವೆನು. ಈ ಅಚೇತನವಾದ ಪ್ರಕೃತಿಯೊಂದಿಗೆ ಏಕೀಭವಿಸಿ ಸಾಮ್ಯವನ್ನು ಹೊಂದಿರುವದು ನನಗೆ ಸುತರಾಂ ಸ್ವರೂಪವಲ್ಲವೆಂಬಭಿಪ್ರಾಯವು. ಇದು ವಸಿಷ್ಠಕರಾಳಜನಕ ಸಂವಾದದಲ್ಲಿ ವಸಿಷ್ಠರ ಉಕ್ತಿಯು. **"ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ ಬಹ್ವೀಂ ಪ್ರಜಾಂ ಜನಯಂತ್ರೀಂ ಸರೂಪಾಂ । ಅಜೋಹ್ಯೇಕೋ ಜುಷಮಾಣೋನುಶೇತೇ ಜಹಾತ್ಯೇ ನಾಂ ಭುಕ್ತಭೋಗಾ ಮಜೋನ್ಯಃ"** ಎಂಬ ತೈತ್ತಿರೀಯ**ವು** ಅನುಸಂಧೇಯವು "**ರಮಯಾಸಾರ್ಧಂ** - ಲಕ್ಷ್ಮಿಯೊಂದಿಗೆ, **ಲೀಲಾಭೂಮಿಷು - ಲೀಲೋ**ದ್ಯಾನಗಳಲ್ಲಿ, **ಕ್ರೀಡಂತಂ** - ವಿಹರಿಸುತ್ತಿರುವ, **ಕೇಶವಂ** - ಬ್ರಹ್ಮರುದ್ರಾದಿಗಳಿಗೂ ಸ್ವಾಮಿಯಾದ ಭಗವಂತನನ್ನು, **ಕದಾ**-ಯಾವಾಗ, **ಮೇಘಶ್ಯಾಮಂ ವಿಶಾಲಾಕ್ಷಂ** - ಮೇಘದ ಹಾಗೆ ಕಪ್ಪಗಿರುವ, ವಿಶಾಲಗಳಾದ ಕಣ್ಣುಗಳುಳ್ಳ, ಇದರಿಂದ ಸ್ವಾಮಿಯನ್ನು ನೋಡುವ ಮಾತ್ರದಿಂದಲೇ ಉಂಟಾಗುವ ದುಃಖಸಂಬಂಧವಿಲ್ಲದ ಆನಂದತ್ವವೂ, ಕೃಪಾಪರಿಪೂರ್ಣತೆಯೂ ಬೋಧಿಸಲ್ಪಟ್ಟವು, **ಚಕ್ಷುಷಾ**-ಅಪ್ರಾಕೃತವಾದ ದಿವ್ಯ ಚಕ್ಷುಸ್ಸಿನಿಂದ, **ದ್ರಕ್ಷ್ಯಾಮಿ**-ನೋಡುವೆನೋ, ಈ ಶ್ಲೋಕದಿಂದ ಪರಿಪೂರ್ಣ ಬ್ರಹ್ಮಾನುಭವದಲ್ಲಿರುವ ಉತ್ಕಟೇಚ್ಛೆಯು ಪ್ರದರ್ಶಿಸಲ್ಪಟ್ಟಿತು. ಭರತನನ್ನು ಹಿಂಬಾಲಿಸಿ ಬಂದ ನಾಗರಿಕರಿಗೆ ಹೇಗೆ ಶ್ರೀರಾಮನನ್ನು ನೋಡಬೇಕೆಂಬ ಉತ್ಕಟ ಮನೋರಥವಿತ್ತೋ ಹಾಗೆಯೇ ವೈಕುಂಠವನ್ನು ಕುರಿತು ಹೋಗುವ ಪ್ರಪನ್ನನಿಗೂ ಉಂಟೆಂದು ತೋರ್ಪಡಿಸುತ್ತಾರೆ:—**ಮೇಘಶ್ಯಾಮಂ** ಎಂಬುವದರಿಂದ ದರ್ಶನ ಮಾತ್ರದಿಂದಲೇ ಸರ್ವ ಸಂತಾಪವನ್ನೂ ಹೋಗಲಾಡಿಸುವವನು ಎಂಬರ್ಥವು, **ಮಹಾಬಾಹುಂ** - ಆಜಾನುವಾಗಿಯೂ ದುಂಡಗೂ ಸುಂದರವಾಗಿಯೂ ಇರುವ ತೋಳುಗಳುಳ್ಳವನಾದುದರಿಂದ ಆಶ್ರಿತನಿ

---

(೧) ದ್ವಿತೀಯ ಜಿತನ್ತಾ. ೨೧.

ಚಕ್ಷುಷಾ" (೨) "ಮೇಘಶ್ಯಾಮಂ ಮಹಾಬಾಹುಂ ಸ್ಥಿರಸತ್ವಂ ದೃಢವ್ರತಮ್ । ಕದಾದ್ರಕ್ಷ್ಯಾಮಹೇರಾಮಂ ಜಗತಶ್ಶೋಕನಾಶನಂ । ದೃಷ್ಟ ಏವಹಿ ನಶ್ಶೋಕ ಮಪನೇಷ್ಯತಿ ರಾಘವಃ । ತಮಸ್ಸರ್ವಸ್ಯ ಲೋಕಸ್ಯ ಸಮುದ್ಯನ್ನಿವ ಭಾಸ್ಕರಃ" ಇತ್ಯಾದಿಗಳಿಲ್ ಕಟ್ಟಳೈಯಿಲೇ ಇವರ್ ಮನೋರಥಿತ್ತಪಡಿಯೇ ಇಳನ್ದ ವಿಳವೆಲ್ಲಾಮ್ ತೀರ ನಿರತಿಶಯಭೋಗ್ಯನಾನ

---

ಗಿರುವ ಸರ್ವ ವಿಧ ಆಪತ್ತುಗಳನ್ನು ಪರಿಹರಿಸುವ, ಸ್ಥಿರಸತ್ವಂ ಆಶ್ರಿತ ಸಂರಕ್ಷಣೆಯಲ್ಲಿ ಸ್ಥಿರವಾದ ವ್ಯವಸಾಯಗಳುಳ್ಳ, ದೃಢವ್ರತಂ-ಸುಗ್ರೀವಾದಿ ಅಂತರಂಗರಾದವರಿಂದಲೂ ಕೂಡ ವಿಭೀಷಣನಂತಹ ಶರಣಾಗತನನ್ನು ರಕ್ಷಿಸುವೆನೆಂಬ ವ್ರತದಿಂದ ಕದಲಿಸಲಾಗದಷ್ಟು ಸ್ಥಿರಪ್ರತಿಜ್ಞೆಯುಳ್ಳ, ಜಗತಶ್ಶೋಕನಾಶನಂ - ಜಗತ್ತಿನ ಶೋಕಗಳನ್ನು ನಾಶಮಾಡುವ, ಶ್ರೀರಾಮನನ್ನು, ಕದಾ - ಯಾವಾಗ, ದ್ರಕ್ಷ್ಯಾಮಹೇ - ನೋಡುವೆವೋ ? ದೃಷ್ಟ ಏವಹಿ - ನಮಗೆ ಆತನು ಕಣ್ಣಿಗೆ ಬಿದ್ದರೆ, ಎಂದರೆ ನಾವು ಆತನನ್ನು ಆಶ್ರಯಿಸಿ ಆತನು ನಮ್ಮನ್ನು ಕೃಪಾಕಟಾಕ್ಷದಿಂದ ನೋಡಿದರೆ, ಆತನನ್ನು ನಾವು ನೋಡಿದರೇನೇ ಆತನು ನಮ್ಮನ್ನು ನೋಡುವನು ಎಂಬ ಭಾವವು, ಸಃ ರಾಘವಃ - ಅಂತಹ ಶ್ಲಾಘ್ಯಗುಣಗಳುಳ್ಳ ಶ್ರೀರಾಮನು, ನಃ - ನಮ್ಮಗಳ, ಶೋಕಂ - ಶೋಕ ಸಮುದಾಯವನ್ನು, ಅಪನೇಷ್ಯತಿ – ಹೋಗಲಾಡಿಸುವನು. ಹೇಗೆಂದರೆ:—ಸಮುದ್ಯನ್ ಭಾಸ್ಕರಃ-ಉದಯಿಸುವ ಸೂರ್ಯನು, ಸರ್ವಸ್ಯ ಲೋಕಸ್ಯ - ಸಮಸ್ತ ಲೋಕದ, ತಮ ಇವ-ಅಂಧಕಾರವನ್ನು ಹೇಗೆ ಹೋಗಲಾಡಿಸುವನೋ ಹಾಗೆ, ಎಂಬ ಭಾವವು. ಈ ಶ್ಲೋಕಗಳಲ್ಲಿ ದ್ರಕ್ಷ್ಯಾಮಿ, ದ್ರಕ್ಷ್ಯಾಮಹೇ ಎಂಬುದರಿಂದ ಬರೀ ನೋಡುವದರಲ್ಲಿ ಮಾತ್ರವೇ ತಾತ್ಪರ್ಯವಲ್ಲವು, ತತ್ಫಲವಾದ ಕೈಂಕರ್ಯಪ್ರಾಪ್ತಿಯಲ್ಲಿ ಅಭಿಪ್ರಾಯವು ಎಂದು ಭಾವಿಸತಕ್ಕದ್ದು; ಇತ್ಯಾದಿಗಳಿಲ್ - ಇವೇ ಮೊದಲಾದ ಅವತಾರ ಸಂದರ್ಭಗಳಲ್ಲಿ ತೋರಿಬರುವ, ಕಟ್ಟಳೈಯಿಲೆ - ರೀತಿಯಲ್ಲಿ, ಇವರ್ ಮನೋರಥಿತ್ತಪಡಿಯೇ - ಈತನು ತುಂಬಾ ಆಶೆಪಟ್ಟುದಕ್ಕೆ ಸರಿಯಾಗಿ, ಇಳನ್ದ ಇಳವೆಲ್ಲಾಮ್ - ಇದುವರೆಗೂ ಅನುಭವಿಸಲಿಲ್ಲವೇ ಎಂಬ ಕೊರತೆಯೆಲ್ಲಾ, ತೀರ – ಹೋಗುವ ಹಾಗೆ, ನಿರತಿಶಯ ಭೋಗ್ಯನಾನ - ನಿತ್ಯಮುಕ್ತರಿಗೆ ಪರಮ ಭೋಗ್ಯನಾದ, ತನ್ನೈ ತಾನ್ ಕಾಟ್ಟಿ - ತನ್ನನ್ನು ಪರಮಪದವಾಸಿಯಾಗಿ ಶ್ರಿಯಃಪತಿಯಾಗಿರುವ, ಹಾರ್ದನಾದ ತಾನೇ ತೋರಿಸಿದವನಾಗಿ, (೧೮) ತನ್ನೈ -

---

(೨) ರಾಮಾ. ಅಯೋಧ್ಯಾ. ೮೩. ೮-೯.

**ತನ್ನೈತ್ತಾನ್ ಕಾಟ್ಟಿ, (೧೮) ತನ್ನೈ ಪೆರುತ್ತಿತ್ತನ್ ತಾಳಿಣೈಕ್ಕೀಳ್ ಕ್ಕೊಣ್ಡು (೧೯) ತೆನ್ನೋಡು ಸಮಾನಭೋಗತ್ವ ಲಕ್ಷಣಮಾನ ಸಾಯುಜ್ಯತ್ತಾಲೆ**

---

**ಸ್ವರೂಪವನ್ನು, ಪೆರುತ್ತಿ** - ಉಂಟುಮಾಡಿ, ಎಂದರೆ **ಸ್ವೇನರೂಪೇಣಾಭಿ ನಿಷ್ಪದ್ಯತೇ** ಎಂದು ಹೇಳಿರುವ ಹಾಗೆ ಸ್ವಸ್ವರೂಪಾವಿರ್ಭಾವವನ್ನುಂಟುಮಾಡಿ ಮತ್ತು **"ಅಪಹತ ಪಾಪ್ಮಾವಿಜರೋ ವಿಮೃತ್ಯು ರ್ವಿಶೋಕೋ ವಿಜಿಘತ್ಸೋಽಪಿ ಪಾಸಸ್ಸತ್ಯಕಾಮ ಸ್ಸತ್ಯಸಂಕಲ್ಪಃ"** ಎಂದು ಹೇಳಿರುವ ಗುಣಾಷ್ಟಕಗಳನ್ನುಂಟು ಮಾಡಿ, **ತನ್ ತಾಳಿಣೈಕ್ಕೀಳ್ ಕೊಂಡು**-ತನ್ನ ಪಾದಾರವಿಂದದ ಕೆಳಗೆ ಸ್ವೀಕರಿಸಿ, ಎಂದರೆ ತನ್ನ ಪಾದಕಮಲಗಳಿಗೆ ಒಂದು ದಿಂಬಾಗಿ ಮಾಡಿಕೊಂಡು ಎಂದು ಸಾರಾಸ್ವಾದಿನಿ ಸಾರವಿವರಣೆಯುವರು ವ್ಯಾಖ್ಯಾನ ಮಾಡಿರುತ್ತಾರೆ; ಸಾರಪ್ರಕಾಶಿಕಾಯುವರು ಚರಣಾರವಿಂದದ ಕಿಂಕರನಾಗಿ ಮಾಡಿಕೊಂಡು ಎಂದು ವ್ಯಾಖ್ಯಾನ ಮಾಡಿರುತ್ತಾರೆ. (೧೯) **ತನ್ನೋಡು** - ತನ್ನೊಂದಿಗೆ, **ಸಮಾನ ಭೋಗತ್ವ ಲಕ್ಷಣಮಾನ**-ಸಮಾನಭೋಗತ್ವವೇ ಲಕ್ಷಣವಾಗಿಯುಳ್ಳ, **ಸಾಯುಜ್ಯತ್ತಾಲೆ**-ಸಾಯುಜ್ಯದಿಂದ, ನಾವುಗಳು ಪರಮಾತ್ಮನೊಂದಿಗೆ ಸೇರಿದರೂ ಪ್ರತ್ಯೇಕವಾಗಿರುವ ಸ್ಥಿತಿಗೇನೇ ಸಾಯುಜ್ಯವೆಂದು ಹೆಸರು, **ಇವನುಕ್ಕು**- ಈ ಹೊಸದಾಗಿ ವೈಕುಂಠಕ್ಕೆ ಬಂದಿರುವ ಪ್ರಪನ್ನನಿಗೆ, **ಸಜಾತೀಯರಾನ - ತನ್ನ** ಜಾತೀಯರಾದ, **ಅನ್ದಮಿಲ್ ಪೇರ್** - ಅಂತವಿಲ್ಲದೇ ಇರುವ ಕಾಲಸ್ವರೂಪಗಳ ಪರಿಚ್ಛೇದವಿಲ್ಲದ, **ಇನ್ಬತ್ತು** - ಆನಂದವನ್ನು ಹೊಂದಿರುವ, **ಅಡಿಯರೋಡು** - ದಾಸಭೂತರಾದ ನಿತ್ಯಸೂರಿಗಳೊಂದಿಗೆ, **ಇರುತ್ತಿ**-ನಿಲ್ಲಿಸಿ; ಭೋಗತ್ವವು ಸರ್ವೇಶ್ವರನಿಗೂ ತನಗೂ ನಿತ್ಯಸೂರಿಗಳಿಗೂ ಎಲ್ಲರಿಗೂ ಸಮಾನವಾದುದರಿಂದ, ಸಮಾನಭೋಗತ್ವ ಲಕ್ಷಣ ಉಳ್ಳದ್ದೆಂದು ಹೇಳಲ್ಪಟ್ಟಿರುತ್ತದೆ. **ಪರಮಂ ಸಾಮ್ಯಮುಪೈತಿ** ಎಂಬ ಶ್ರುತಿಯು ಇಲ್ಲಿ ಉಪಪಾದಿಸಲ್ಪಟ್ಟಿತು. ಈ ಅಭಿಪ್ರಾಯವೇ, **"ಭೋಗ ಮಾತ್ರ ಸಾಮ್ಯ ಲಿಂಗಾಚ್ಚ"** (೪ ೪. ೨೧) ಎಂಬ **ಸೂತ್ರ**ದಲ್ಲೂ ಭೋಗದಲ್ಲಿ ಮಾತ್ರ ಸಾಮ್ಯವೇ ವಿನಾ, ಜಗದ್ವ್ಯಾಪಾರಗಳಾದ ಸೃಷ್ಟಿ ಸ್ಥಿತಿ ಪಾಲನ ಲಯಗಳಲ್ಲಿಲ್ಲವೆಂದು ಉಪದೇಶಿಸಲ್ಪಟ್ಟಿರುತ್ತದೆ. ಹಾಲು ತನ್ನಲ್ಲಿಗೆ ಬಂದ ನೀರಿಗೆ ತನ್ನ ಸರ್ವಸ್ವವನ್ನೂ ಕೊಟ್ಟು, **"ಕ್ಷೀರೇಣಾತ್ಮಗತೋದಕಾಯಹಿಗುಣಾ ದತ್ತಾಃ ಪುರಾತೇಖಿಲಾಃ"** ಎಂದು ಕವಿಯು ಹೇಳಿರುವ ಹಾಗೆ, ಸಮ ಮಾಡಿಕೊಳ್ಳುವ ಶಕ್ತಿಯಿರುವಾಗ ಗುಣಾಷ್ಟಕಾವಿರ್ಭಾವ ಮೂಲಕವಾಗಿ ತನಗೆ ಸಮನಾಗಿ ಮಾಡಿಕೊಂಡು, ಪಿತಾವಾದವನು ತನ್ನ ಊಟ ವಸನಾದಿ ಭೋಗಗಳನ್ನೇ ಮಗನಿಗೂ ಉಂಟು

**ಇವನುಕ್ಕು ಸಜಾತೀಯರಾನ ಅನ್ವಮಿಲ್ ಪೇರಿ ನ್ಬತ್ತಡಿಯರೋಡಿರುತ್ತಿ (೨೦) ಇಪ್ಪಡಿ ಸಮಸ್ತ ಪ್ರತಿಬಂಧಕ ನಿವೃತ್ತಿ ಪೂರ್ವಕಮಾಗವುಮ್,**

---

ಮಾಡುವ ತೆರದಿ, ಲೋಕಪಿತಾವಾದ ಸರ್ವೇಶ್ವರನೂ ಇಷ್ಟು ಕಾಲ ಮಾರ್ಗ ತಪ್ಪಿ ಹೋಗಿದ್ದು ಬಂದ ಪುತ್ರನಿಗೆ ತನಗೆ ಸಮವಾದ ಆನಂದವನ್ನುಂಟುಮಾಡುವನು ಎಂಬುವದರಲ್ಲಿ ಏಕೆ ಕೆಲವರು ಸಂದೇಹಪಡುವರೋ ತಿಳಿಯದು. "**ಸೋಽಶ್ನುತೇ ಸರ್ವಾನ್ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ**" ಎಂಬ ಶ್ರುತಿಯಲ್ಲಿ ಮೋಕ್ಷದೆಶೆಯಲ್ಲಿ ಈತನು ಆ ಪರಬ್ರಹ್ಮನ ಕಲ್ಯಾಣಗುಣಗಳನ್ನು ಪರಬ್ರಹ್ಮನೊಂದಿಗೆ ಅನುಭವಿಸುವನು ಎಂದರೆ ಆ ಪರಬ್ರಹ್ಮನ ಕಲ್ಯಾಣಗುಣಗಳ ಅನುಭವವು ಯಾವಾಗ ಆಯಿತೋ, ತನ್ಮೂಲಕ ಪರಬ್ರಹ್ಮಾನುಭವವು ಈತನಿಗೆ ಉಂಟಾಗುತ್ತದೆಂದು ಹೇಳಿರುವದರಿಂದ, **ಸಃ, ಬ್ರಹ್ಮಣಾ ಸಹ** ಎಂದು ಪೃಥಕ್ಕಾಗಿ ಶ್ರುತಿಯು ಹೇಳಿರುವದರಿಂದ ಅಭೇದಾರ್ಥವು ಇಲ್ಲಿ **ಸಾಮ್ಯ** ಪದಕ್ಕೆ ಎಂದಿಗೂ ಸರಿಹೋಗುವದಿಲ್ಲವೆಂದು ಗ್ರಹಿಸತಕ್ಕದ್ದಾಗಿರುತ್ತದೆ. ಆದುದರಿಂದಲೇ ಮಹಾನುಭಾವರು **ಸಮಾನಭೋಗತ್ವ ಲಕ್ಷಣಮಾನ ಸಾಯುಜ್ಯಮ್** ಎಂದು ಪ್ರಯೋಗಿಸಿರುತ್ತಾರೆ. ಸ್ವರೂಪೈಕ್ಯಕ್ಕೆ ಸಮಾನತ್ವವೆಲ್ಲಿಯದು ? **ಸಮಾನಭೋಗತ್ವ**ವನ್ನು ಶ್ರುತಿಯು ಬೋಧಿಸಿದರೆ ಆನಂದ ತಾರತಮ್ಯವು ತಾನೇ ಎಲ್ಲಿಯದು ? ಇವೆರಡಭಿಪ್ರಾಯವೂ ಸರಿಯಲ್ಲವೆಂದು ತೋರಿಸುವದಕ್ಕಾಗಿ **ದ್ವಾಸುಪರ್ಣಾ ಸಯುಜಾ** ಎಂಬ ಶ್ರುತಿಯಲ್ಲಿ ತೋರಿಬರುವ ಸಾಯುಜ್ಯವೇ ಸರಿಯಾದಭಿಪ್ರಾಯವೆಂದು **ಈ ವಾಕ್ಯ**ಖಂಡದಿಂದ ತೋರಿಸಿರುತ್ತಾರೆ. ಲೀಲಾವಿಭೂತಿಯಲ್ಲಿಯಾಗಲೂ ಸರ್ವೇಶ್ವರನು ಹಾರ್ದನಾಗಿರುವದರಿಂದ ಈತನು **ಸಯುಕ್ಕೇ**, ಹಾಗೆಯೇ ಪರಮಪದದಲ್ಲಿಯೂ ಕೂಡ ಈತನು ಸಯುಕ್ಕೇ ಎಂಬ ಭಾವವು. ಇಲ್ಲಿ **ಪರಿಚ್ಛಿನ್ನ**ವಾದ ದುಃಖಮಿಶ್ರತ್ವಾದಿ ದೋಷಯುಕ್ತವಾದ ಆನಂದವು, ಉಪಾಸಕನಾದರೆ ಇನ್ನೂ ಹೆಚ್ಚಿನ ಆನಂದವು, ಆದರೆ ಅದೂ ಪರಿಚ್ಛಿನ್ನವಾದುದು ; ವೈಕುಂಠದಲ್ಲಾದರೋ ನಿರತಿಶಯವಾದ ಅಪರಿಚ್ಛಿನ್ನವಾದ ಸರ್ವೇಶ್ವರಾನಂದಕ್ಕೆ ಸಮವಾದ ಆನಂದವೆಂಬ ಭಾವವು ಯಾವಾಗ ಸರ್ವೇಶ್ವರಾನಂದಕ್ಕೆ ಸಮವೆಂದು ಶ್ರುತಿಯು ಹೇಳಿತೋ ಆಗ ನಿತ್ಯಸೂರಿಗಳಾನಂದಕ್ಕೆ ಸಮವೆಂಬುದು ಕೈಮುತಿಕ ನ್ಯಾಯಸಿದ್ಧವು. ಆದುದರಿಂದಲೇ **ಪೇರಿನ್ಬತ್ತಡಿಯರೋಡೆ ಇರುತ್ತಿ** ಎಂಬ ಪ್ರಯೋಗವು. (೨೦) ಹಿಂದೆ ಸರ್ವೇಶ್ವರನು ನಡೆಸಿದ ಹತ್ತೊಂಭತ್ತು ವಾಕ್ಯಖಂಡಗಳಲ್ಲಿ ಉಪಪಾದಿತಗಳಾದ ಮಹತ್ತಾದ ಉಪಕಾರಗಳನ್ನೆಲ್ಲಾ ಸಂಗ್ರಹಿಸಿ ಹೇಳುತ್ತಾರೆ:— **ಇಪ್ಪಡಿ - ಈ**

**ಸ್ವಸ್ವರೂಪಾವಿರ್ಭಾವಪೂರ್ವಕವಾಗವುವ್, ದೇಶಕಾಲಾವಸ್ಥಾ ಸಙ್ಕೋಚ ಮಿಲ್ಲಾದ ಪಡಿಯಾಗವುಮ್, ಶರ್ಕ ಮನೋರಥತ್ತುಕ್ಕು ಅನುರೂಪ**

---

ಮೇಲೆ ಉಪಪಾದಿಸಿದ ರೀತಿಯಲ್ಲಿ, **ಸಮಸ್ತ ಪ್ರತಿಬಂಧಕ ನಿವೃತ್ತಿಪೂರ್ವಕ ವಾಗವುವ್** - ಈತನಿಗೆ ಪುಣ್ಯಪಾಪರೂಪ ಕರ್ಮಗಳೇ ಪ್ರತಿಬಂಧಕಗಳು, ಅವುಗಳು ಯಾವಾಗ ಎಲ್ಲವೂ ನಾಶವಾದವೋ ಆಗ ಸಮಸ್ತ ಪ್ರತಿಬಂಧಕಗಳೂ ನಿವೃತ್ತಿಯಾದವೆಂದು ಭಾವವು; ಹೀಗೆ ಎಲ್ಲಾ ಪ್ರತಿಬಂಧಕಗಳ ನಿವೃತ್ತಿಪೂರ್ವಕ ವಾಗಿಯೂ, **ಸ್ವಸ್ವರೂಪಾವಿರ್ಭಾವ ಪೂರ್ವಕವಾಗವುವ್** - ಪ್ರಕೃತಿಯೊಂದಿಗೆ ಇದುವರೆಗೂ ಈತನು ಇದ್ದುದರಿಂದ ಈತನ ಸ್ವರೂಪವನ್ನು ಅದು ಮರೆಸಿದ್ದಿತು, ಈಗ ಪ್ರಕೃತಿ ಸಂಬಂಧವು ನಿಶ್ಶೇಷವಾಗಿ ತೊಲಗಿದುದರಿಂದ, ತನ್ನ ಮೊದಲಿನ ಶ್ರೇಷ್ಠವಾದ ಸ್ವರೂಪದ ಪುನಃ ಆವಿರ್ಭವಿಸುವಿಕೆಯ ಮೂಲಕವಾಗಿಯೂ, **ದೇಶಕಾಲಾವಸ್ಥಾ ಸಙ್ಕೋಚ ಮಿಲ್ಲಾದಪಡಿಯಾಗವುವ್** - ಈ ದೇಶ ಈ ಕಾಲ ಈ ಅವಸ್ಥೆಗಳಲ್ಲಿ ಉಂಟು, ಇನ್ನೊಂದು ದೇಶ, ಕಾಲ, ಅವಸ್ಥೆಗಳಲ್ಲಿ ಇಲ್ಲವೆಂಬ ಹಾಗೆ ಇಲ್ಲದೆ ಅನಂತವಾದುದಾಗಿಯೂ, **ಶರ್ಕ ಮನೋರಥತ್ತುಕ್ಕು** - ಪರಮಾತ್ಮನಾದ ತನ್ನ ಇಷ್ಟಕ್ಕೆ, **ಅನುರೂಪಮಾಗ** - ಅನುಸಾರವಾದ, **ಇವರ್ಕ ಮನೋರಥಿತ್ತ ಕೈಙ್ಕರ್ಯ ವರ್ಗಂಗಳೈ ಯೆಲ್ಲಾವ್** - ಈ ಮುಕ್ತನು ಅಪೇಕ್ಷಿಸಿದ ಕೈಂಕರ್ಯ ಸಮೂಹವನ್ನೆಲ್ಲಾ, **ಯಾವದಾತ್ಮಭಾವಿಯಾಗ** - ಆತ್ಮಸ್ವರೂಪವಿರುವವರೆಗೂ ಎಂಬುದರಿಂದ ನಿರಂತರವಾಗಿ ನಿತ್ಯದಲ್ಲೂ, **ಕೊಣ್ಡರುಳಿ** ಸ್ವೀಕರಿಸುವದರ ಮೂಲಕ ಕೃಪೆಗೈಯ್ದು; ಹಿಂದಿನ ವಾಕ್ಯಖಂಡದಿಂದ ನಿತ್ಯಸೂರಿಗಳೊಂದಿಗೆ ಆತನಿಗೂ ಪರಿಪೂರ್ಣ ಬ್ರಹ್ಮಾನುಭವ ಉಂಟೆಂದು ಹೇಳಲ್ಪಟ್ಟಿತು. ಈ ಪರಿಪೂರ್ಣ ಬ್ರಹ್ಮಾನುಭವವು ಎಂಥಾದ್ದೆಂಬುದು ಈಗ ವಿಶದೀಕರಿಸಲ್ಪಡುತ್ತದೆ. ಕರ್ಮರೂಪವಾದ ಪ್ರತಿಬಂಧಕಗಳೊಂದೂ ಇಲ್ಲದೆ ಸ್ವಸ್ವರೂಪಾವಿರ್ಭಾವ ಉಂಟಾಗಿ ಗುಣಾಷ್ಟಕಪ್ರಾಪ್ತಿಯುಂಟಾಗಿರುವದರಿಂದ ವಿಕಸಿತವಾದ ಜ್ಞಾನ ಉಂಟಾಗಿ, ಶೇಷಿಯಾದವನಿಗೆ "ಅಹಂ ಸರ್ವಂ ಕರಿಷ್ಯಾಮಿ" (ರಾ. ಅಯೋಧ್ಯಾ ೩೧. ೨೫) ಎಂದು ಹೇಳಿರುವ ಹಾಗೆ ನಿತ್ಯಕೈಂಕರ್ಯವನ್ನು ಮಾಡುವದೇ ಶೇಷನಾದವನಿಗೆ, ಸ್ವರೂಪವೆಂದು ಭಾವಿಸಿ, ಶ್ರಿಯಃಪತಿಗೆ ಯಾವ ಕೈಂಕರ್ಯಗಳು ಭೋಗ್ಯವಾದವೋ, ಉಚಿತವೋ ಅಂಥಾದ್ದನ್ನು ಶ್ರಿಯಃಪತಿಯು ಕೃಪೆಯಿಂದಲೇ ತಿಳಿದು ಮಾಡಿಸಿ, ಅವುಗಳನ್ನೆಲ್ಲಾ ಸರ್ವೇಶ್ವರನು ಪರಮ ಕೃಪೆಯಾ ಸ್ವೀಕರಿಸುವನೆಂಬ ಭಾವವು. ಆತನಿಗೆ ಇಷ್ಟವಿಲ್ಲದುದನ್ನು ಈ ಮುಕ್ತನು ಎಂದಿಗೂ

**ಮಾಗ ಇರ್ವ ಮನೋರಥಿತ್ತ ಕೈಙ್ಕರ್ಯವರ್ಗ ಙ್ಗಳೈ ಯೆಲ್ಲಾಮ್ ಯಾವ ದಾತ್ಮಭಾವಿಯಾಗ ಕೊಣ್ಡರುಳಿ (೧) "ಸವಯಸಇವಯೋನಿತ್ಯನಿರ್ದೋಷ ಗಂಧಾಃ"**

---

ಮಾಡುವದಿಲ್ಲವು. ಪರಸ್ಪರ ಇಂಗಿತಗಳನ್ನರಿತವರಾದುದರಿಂದ ಸರ್ವೇಶ್ವರನಿಗೆ, ಭೋಗ್ಯವಾಗಿ, ಯೋಗ್ಯವಾದವುಗಳನ್ನೇ ಸರ್ವೇಶ್ವರನು ಇವನ ಮೂಲಕ ಮಾಡಿ ಸುವಹಾಗೆ ಮಾಡಿ ಅದರಿಂದ ಆನಂದಿಸುವನೆಂದು ಹೇಳಲ್ಪಟ್ಟಿತು. ಇಂತಹ ಆನಂ ದಕ್ಕೆ ಯಾವಾಗಲಾದರೂ ಚ್ಯುತಿಯುಂಟೋ ಎಂದರೆ ಎಂದಿಗೂ ಅದು ಪರಿಚ್ಛಿನ್ನ ವಾದುದಲ್ಲವೆಂದು ತಿಳಿಸುವದಕ್ಕಾಗಿ "**ದೇಶಕಾಲಾವಸ್ಥಾ ಸಙ್ಕೋಚವಿಲ್ಲಾದ ಪಡಿಯಾಗವುಮ್**" ಎಂದು ಪ್ರಯೋಗಿಸಿರುತ್ತಾರೆ. ಯಾವುದೋ ಒಂದು ಕಾಲ ದಲ್ಲಿ ಪರಸ್ಪರ ವಿರಸ ಉಂಟಾಗಿ, ಸರ್ವೇಶ್ವರನು ಈಗ ಮುಕ್ತನಾಗಿರುವವನನ್ನು ಪುನಃ ಲೀಲಾವಿಭೂತಿಗೆ ಏಕೆ ದಬ್ಬಿಡಕೂಡದು ಎಂಬ ಸಂದೇಹದಲ್ಲಿ ಶ್ರುತಿಯೂ ಸೂತ್ರವೂ ಸಹ "**ನ ಚ ಪುನರಾವರ್ತತೇ, ನ ಚ ಪುನರಾವರ್ತತೇ**" ಎಂದು ಹೇಳಿ ಸಂದೇಹ ವಿಚ್ಛೇದವನ್ನು ಮಾಡಿರುತ್ತವೆ ದಯಾವಾತ್ಸಲ್ಯಾದಿ ಕಲ್ಯಾಣ ಗುಣಾಕರನು, ಇಂತಹ ಪ್ರಿಯನಾದ ಜ್ಞಾನಿಯಾದವನಿಗೆ ಅಭಯಪ್ರದಾನವನ್ನು ಮಾಡಿ ತನ್ನ ಸತ್ಯಸಂಕಲ್ಪತೆಯನ್ನು ಎಂದಿಗಾದರೂ ನಾಶಪಡಿಸಿಕೊಳ್ಳುವನೇ ಎಂದು ಶ್ರೀ ಭಾಷ್ಯಕಾರರು ಪ್ರಶ್ನಿಸಿರುತ್ತಾರೆ; ಮತ್ತು ಸ್ಮೃತಿಯೂ ಈ ಅಭಿ ಪ್ರಾಯವನ್ನೇ ಬೋಧಿಸುತ್ತದೆಂದು ಹೇಳಿ ಉದಾಹರಿಸಿರುತ್ತಾರೆ:—"**ಮಾಮು ಪೇತ್ಯ ಪುನರ್ಜನ್ಮ ದುಃಖಾಲಯ ಮಶಾಶ್ವತಂ । ನಾಪ್ನುವನ್ತಿ ಮಹಾತ್ಮಾನ ಸ್ಸಂಸಿದ್ಧಿಂ ಪರಮಾಂಗತಾಃ**" (ಗೀ) ಎಂದರೆ ಹೀಗೆ ಕರ್ಮಬಂಧಗಳನ್ನೆಲ್ಲಾ ನೀಗಿಕೊಂಡು, ಜ್ಞಾನಸಂಕೋಚವಿಲ್ಲದವರಾಗಿ, ಪರಬ್ರಹ್ಮಾನುಭವವನ್ನು ಹೊಂದಿ ದವರಾಗಿ ಆತನಿಗೆ ಸರ್ವವಿಧ ಕೈಂಕರ್ಯಗಳನ್ನೆಸಗುವದೇ ತನಗೆ ಸ್ವರೂಪವೆಂದು ಚನ್ನಾಗಿ ತಿಳಿದವರಾಗಿ, ಪರಮ ನಿಶ್ರೇಯಸ್ಸನ್ನು ಪಡೆದ ಈ ಮಹಾತ್ಮರು ದುಃಖ ಗಳಿಗೆ ತೌರುಮನೆಯಾಗಿರುವ ಅಶಾಶ್ವತವಾದ ಭೂಲೋಕವನ್ನು ಪುನಃ ಎಂದಿಗೂ ಹೊಂದಲಾರರು ಎಂದು ಸರ್ವೇಶ್ವರನೇ ಹೇಳಿರುವದರಿಂದ ಅಂತಹ ಸಂಶಯಕ್ಕೆ ಕಾರಣವೇ ಇಲ್ಲವೆಂದು ಹೇಳುವದಕ್ಕಾಗಿಯೋ, **ದೇಶಕಾಲಾವಸ್ಥಾ ಸಂಙ್ಕೋಚ** ವಿಲ್ಲವೆಂದೂ, **ಯಾವದಾತ್ಮಭಾವಿ**ಯೆಂದೂ ಹೇಳಲ್ಪಟ್ಟಿತು. ಅನಂತ ಗರುಡ ವಿಷ್ವಕ್ಸೇನಾದಿಗಳು ನಿಯತ ಕೈಂಕರ್ಯಪರರಾಗಿದ್ದಾರೆ. ಅಂತಹ ಕೈಂಕರ್ಯಗಳು

---

(೧) ಶ್ರೀಗುಣ ರತ್ನಕೋಶ ೨೭.

## ಭಗವಾನ್ ಕಥಮ್ ನಿರತಿಶಯಾನಂದಃ

ಎಙ್ಗಳುಡೈಯೋ ತನುಕ್ಕು ಮನ್ಯೋನ್ಯಮು ಮೊರು ವಯಸ್ಸಿಲ್ ತೋೞರ್ ಮಾರ್ಪ್ಪೋಲೆ ಇರುಕ್ಕಿರ ನಿತ್ಯಸೂರಿಗಳೋಡುಮ್ ಇನ್ರುವನ್ದ ವಿವನೋಡುಮ್ ವಾಶಿಯುರಪ್ಪುರೈಯುರಪ್ಪರಿಮಾರಿ, ಸ್ತೋತ್ರತ್ತಿಲುಮ್

ಈತನಿಗೆ ಇಲ್ಲವಲ್ಲಾ, ಆದುದರಿಂದ ಕೈಂಕರ್ಯಕ್ಕೆ ಸಂಕೋಚವುಂಟಾಯಿತಲ್ಲವೇ ಎಂದರೆ ದಾಸಭೂತನಾದ ಈ ಚೇತನನಿಗೆ ಸರ್ವೇಶ್ವರನ ಇಷ್ಟಾನುಸಾರ ಕೈಂಕರ್ಯ ಮಾಡುವದೇ ಸ್ವರೂಪವಾದುದರಿಂದ, ಸ್ವಾಮಿ ಮನೋರಥಕ್ಕೆ ವಿರುದ್ಧವಾಗಿ ಕೈಂಕರ್ಯೇಚ್ಛೆಯುಂಟಾಗಲಾರದಾದುದರಿಂದ, "ತನ್ ಮನೋರಥತ್ತುಕ್ಕು ಅನುರೂಪಮಾಗ ಇವನ್ ಮನೋರಥಿತ್ತ ಕೈಙ್ಕರ್ಯವರ್ಗಙ್ಗಳೆಲ್ಲಾಮ್" ಎಂಬ ಪ್ರಯೋಗವು. ಕೈಙ್ಕರ್ಯವರ್ಗಮೆಲ್ಲಾಮ್ ಕೊಂಡರುಳಿ - ಸ್ವಾಮಿ ಇಷ್ಟಾನುಸಾರ ನಡೆಸಿದ ಕೆಲವು ಕೈಂಕರ್ಯಗಳಿಂದ ಸರ್ವ ಕೈಂಕರ್ಯಗಳನ್ನೂ ನಡೆಸಿದಂತೆ ಸರ್ವೇಶ್ವರನು ಪರಿಗ್ರಹಿಸುವನೆಂಬ ಭಾವಕ್ಕಾಗಿ ಕೊಂಡರುಳಿ - ಎಂದು ಪ್ರಯೋಗಿಸಿರುತ್ತಾರೆ

## ಪರಮಾತ್ಮನು ಹೇಗೆ ನಿರತಿಶಯಾನಂದನು.

ಸವಯಸ ಇವ - ಸಮಾನರಾದ ಒಂದೇ ವಯಸ್ಸಿನ ಸ್ನೇಹಿತರುಗಳ ಹಾಗೆ ಇರುವ, ನಿತ್ಯನಿರ್ದೋಷ ಗಂಧಾಃ - ನಿತ್ಯದಲ್ಲೂ ಸ್ವಲ್ಪವಾಗಲಿ ದೋಷಗಂಧವಿಲ್ಲದವರಾಗಿ, ಮುಕ್ತರಿಗಾದರೋ ಬದ್ಧದೆಶೆಯಲ್ಲಿ ದೋಷಗಂಧ ಸಂಬಂಧವುಂಟು, ಇವರಾದರೋ ನಿರಂತರವಾಗಿಯೂ ದೋಷಗಂಧವಿಲ್ಲದವರೆಂಬ ಭಾವವು, ಇದು ನಿತ್ಯಸೂರಿಗಳಿಗೆ ವಿಶೇಷಣವು, ಈ "ಸವಯಸ ಇವ" ಎಂಬ ಶ್ಲೋಕಾರ್ಧವನ್ನು ತಾವೇ ಉಪಪಾದಿಸುತ್ತಾರೆ, ಎಙ್ಗಳುಡೈಯೋ - ಎಂದು ಹೇಳಿರುವ ಹಾಗೆ, ತನುಕ್ಕುಂ - ಸರ್ವೇಶ್ವರನಾದ ತನಗೆ, ಅನ್ಯೋನ್ಯಂ - ಪರಸ್ಪರಾನುರಾಗಯುಕ್ತರಾಗಿರುವ, ಒರು ವಯಸ್ಸಿಲ್ - ಒಂದೇ ವಯಸ್ಸಿನಲ್ಲಿರುವ, ತೋೞರ್ ಮಾರ್ಪ್ಪೋಲೆ-ಸ್ನೇಹಿತರ ಹಾಗೆ, ಇರುಕ್ಕಿರ - ಇರುವ, ನಿತ್ಯಸೂರಿಗಳೋಡುಮ್ - ಅನಾದಿಯಾಗಿ ಕೈಂಕರ್ಯಗಳನ್ನು ಮಾಡುತ್ತಿರುವ ಅನಂತ ಗರುಡ ವಿಷ್ವಕ್ಸೇನಾದಿಗಳಿಗೂ, ಇನ್ರುವನ್ದ ವಿವನೋಡುಮ್- ಈವತ್ತು ಬಂದು ಕೈಂಕರ್ಯಮಾಡುವ ಈ ಮುಕ್ತನಿಗೂ, ವಾಶಿಯುರ - ಏನೊಂದೂ ವ್ಯತ್ಯಾಸವಿಲ್ಲದಹಾಗೆ, ಪುರೈಯುರ-

ಸ್ವಲ್ಪವೂ ಭೇದವಿಲ್ಲದ ಹಾಗೆ, **ಪರಿವಾರಿ** - ಸಂಶ್ಲೇಷವನ್ನು ಹೊಂದಿ; ಸರ್ವೇಶ್ವರನಿಗೆ ವೈಷಮ್ಯನೈರ್ಘೃಣ್ಯಗಳ್ಯಾವವೂ ಇಲ್ಲವು; ಅನಂತ ಗರುಡ ವಿಷ್ವಕ್ಸೇನಾದಿಗಳೆಲ್ಲರೂ ಸಮಾನ ವಯಸ್ಕರಾದ ಸ್ನೇಹಿತರ ಹಾಗೆ ಅನ್ಯೋನ್ಯಪ್ರೀತಿಯಿಂದಿದ್ದುಕೊಂಡು ಅನಾದಿಯಾಗಿ ಕೈಂಕರ್ಯ ಮಾಡುತ್ತಿರುವರು, ಆದುದರಿಂದ ಅವರುಗಳಲ್ಲಿ ಸರ್ವೇಶ್ವರನಿಗೆ ಹೆಚ್ಚು ಪ್ರೀತಿಯೂ, ಈ ಮುಕ್ತನು ಈವತ್ತು ಬಂದು ಕೈಂಕರ್ಯ ಮಾಡುವವನಾಗಿ ಅದಕ್ಕಾಗಿ ಅಷ್ಟು ವಿಶೇಷ ಪ್ರೀತಿಯಿಲ್ಲದೆಯೂ ಇರುತ್ತಾನೋ ಎಂದರೆ, ಹಾಗೆ ಎಂದಿಗೂ ಇಲ್ಲವು ಎಂದು ತಿಳಿಸುವದಕ್ಕಾಗಿ ಶ್ರೀ ಪರಾಶರ ಭಟ್ಟರ ದಿವ್ಯಸೂಕ್ತಿಯನ್ನು ಉದಾಹರಿಸಿರುತ್ತಾರೆ. ಆ ಪೂರಾ ಶ್ಲೋಕ ಯಾವುದೆಂದರೆ :—

**ತೇ ಸಾಧ್ಯಾಸ್ಸಂತಿ ದೇವಾ ಜನನಿ ಗುಣವಪುರ್ವೇಷ ವೃತ್ತಸ್ವರೂಪೈ ।**
**ರ್ಭೋಗೈರ್ವಾ ನಿರ್ವಿಶೇಷಾ ಸ್ಸವಯಸ ಇವ ಯೇ ನಿತ್ಯ ನಿರ್ದೋಷಗಂಧಾಃ॥**
**ಹೇ ಶ್ರೀಃ ಶ್ರೀರಙ್ಗಭರ್ತುಸ್ತವ ಚ ಪದ ಪರೀಚಾರ ವೃತ್ತ್ಯೈ ಸದಾಪಿ ।**
**ಪ್ರೇಮ ಪ್ರದ್ರಾಣ ಭಾವಾ ವಿಲಹೃದಯ ಹಠಾತ್ಕಾರ ಕೈಙ್ಕರ್ಯಭೋಗಾಃ॥**

ಇದು ಲಕ್ಷ್ಮೀ ಸ್ತೋತ್ರವು, "**ಹೇ ಜನನಿ** – ಓ ತಾಯಿಯೇ, **ಶ್ರೀಃ** - ಲಕ್ಷ್ಮಿಯೇ, **ಗುಣ** ... **ಸ್ವರೂಪೈಃ** - **ಗುಣ** - ಗುಣಾಷ್ಟಕಗಳಿಂದಲೂ, **ವಪುಃ**- ಶಂಖ ಚಕ್ರಾದಿಯುತ ಚತುರ್ಭುಜಗಳಿಂದ ಕೂಡಿದ ದಿವ್ಯಮಂಗಳ ವಿಗ್ರಹದಿಂದಲೂ, **ಸ್ವರೂಪೈಃ**-ಜ್ಞಾನಾನಂದಾಮಲತ್ವಾದ್ಯಾತ್ಮಸ್ವರೂಪಗಳಿಂದಲೂ, **ಭೋಗೈರ್ವಾ**-ಭೋಗಗಳಿಂದಲೂ ಕೂಡ, **ಸವಯಸ ಇವ** - ಸ್ನೇಹಿತರ ಹಾಗೆ, **ನಿರ್ವಿಶೇಷಾಃ** - ಏನೊಂದೂ ವ್ಯತ್ಯಾಸವಿಲ್ಲದೆ, **ನಿತ್ಯ ನಿರ್ದೋಷಗಂಧಾಃ** - ಯಾವಾಗಲೂ ಸಂಸಾರಸಂಬಂಧಾದಿಗಳೊಂದೂ ಇಲ್ಲದೆ ದೋಷರಹಿತರಾಗಿ, **ಸಾಧ್ಯಾಃ** - ಸಾಧ್ಯರೆಂದು ಹೇಳಿಸಿಕೊಳ್ಳುವ, **ದೇವಾಃ** - ನಿತ್ಯಸೂರಿಗಳು, **ಯೇ** - ಯಾರು, **ಸಂತಿ** – ಇರುತ್ತಾರೋ, ಅಂತಹ, **ತೇ** – ಆ ನಿತ್ಯಸೂರಿಗಳು (ಮುಕ್ತರೂ ಹೇಳಲ್ಪಟ್ಟರು), **ಶ್ರೀರಙ್ಗಭರ್ತುಃ ತವ ಚ**- ಶ್ರೀರಂಗನಾಥನಿಗೂ ಮತ್ತು ಆತನ ಪ್ರಿಯಪತ್ನಿಯಾದ ನಿನಗೂ ಸಹ, **ಪದಪರೀಚಾರವೃತ್ತ್ಯೈ**-ಪಾದಾರವಿಂದಗಳಲ್ಲಿ ಕೈಂಕರ್ಯ ಮಾಡುವದಕ್ಕಾಗಿ, **ಸದಾಪಿ** - ಯಾವಾಗಲೂ, **ಪ್ರೇಮ**... ... ... **ಭೋಗಾಃ** - ಪ್ರೀತಿಯಿಂದ ಕರಗಿದ ಮನಸ್ಸಿನಿಂದ ಕೈಂಕರ್ಯಕ್ಕೆ ತ್ವರೆ ಮಾಡುವ ಪ್ರವೃತ್ತಿಯೇ ತಮಗೆ ಸುಖದಾಯಕವೆಂದು ತಿಳಿದವರಾಗಿದ್ದರು" ಎಂಬುದು ಈ ಶ್ಲೋಕಾರ್ಥವು.

**"ನಿತ್ಯಸೂರಿಗಳೋಡುಮ್, ಇನ್ರು ವನ್ದ ಏವನೋಡುಮ್ ವಾಶಿಯರ"** ಎಂದು ಹೇಳಿರುವದರಿಂದ ನಿತ್ಯಸೂರಿಗಳಿಗೂ ಮತ್ತು ಮುಕ್ತರಿಗೂ ಇರುವ ಆನಂದದಲ್ಲಿ ವ್ಯತ್ಯಾಸವಿಲ್ಲವೆಂದು ಹೇಳಿದ ನಂತರ, ಮುಕ್ತರಲ್ಲೇ ಆನಂದ ತಾರತಮ್ಯವಿಲ್ಲ

**ಶ್ರೀ ವೈಕುಂಠ ಗದ್ಯತ್ತಿಲುಮ್ ಅರುಳಿಚ್ಚೆಯ್‌ದ ಮನೋರಥತ್ತಿಱ ಪಡಿಯೇ ಐಕಾಂತಿಕಾತ್ಯನ್ತಿಕ ನಿತ್ಯಕಿಂಕರನಾನ ಇವನುಕಪ್ಪಾಲೇ ತಾನ್ ನಿರತಿಶಯಾನಂದನಾಯಿರುಕ್ಕುಮ್.**

---

ವೆಂದು ಇನ್ನು ಬೇರೆ ಹೇಳಬೇಕಾದುದಿಲ್ಲವು. ಹೀಗೆ "**ನಿರಂಜನಃ ಪರಮಂ ಸಾಮ್ಯಮುಪೈತಿ**" ಎಂಬ ಶ್ರುತಿಯು ಉದ್ಘೋಷಿಸುತ್ತಿದ್ದರೂ ಅದಕ್ಕೆ ವಿರೋಧವಾಗಿ ಆನಂದದಲ್ಲಿ ತಾರತಮ್ಯ ಉಂಟೆಂದು ಹೇಳಲು ಹೇಗೆ ಸಾಧ್ಯವು ?

ಹೀಗೆ ನಿತ್ಯರೊಂದಿಗೆ ಹೇಗೋ ಹಾಗೆಯೇ ಈ ಹೊಸದಾಗಿ ಬಂದ ಮುಕ್ತರೊಂದಿಗೂ ಸಂಶ್ಲೇಷಿಸಿ, ಸರ್ವೇಶ್ವರನು **ನಿರತಿಶಯಾನಂದನಾಯಿರುಕ್ಕುಮ್** ಎಂದು ಮುಂದೆ ಹೇಳುತ್ತಾರೆ ; **ಸ್ತೋತ್ರತ್ತಿಲುಮ್** - ಸ್ತೋತ್ರರತ್ನವೆಂದೆನಿಸಿ ಪ್ರಸಿದ್ಧವಾಗಿರುವದರಿಂದ ಸ್ತೋತ್ರವೆಂದರೆ ಯಾಮುನೇಯರ ಸ್ತೋತ್ರದಲ್ಲೂ ಮತ್ತು **ಶ್ರೀ ವೈಕುಂಠ ಗದ್ಯತ್ತಿಲುಮ್** - ಶ್ರೀ ಯತಿವರ್ಯರು ರಚಿಸಿರುವ ಶ್ರೀ ವೈಕುಂಠ ಗದ್ಯದಲ್ಲೂ, **ಅರುಳಿಚ್ಚೆಯ್‌ದ** – ಕೃಪೆಮಾಡಿ ಹೇಳಿರುವ, **ಮನೋರಥತ್ತಿಱ ಪಡಿಯೇ**-ಪುರುಷಾರ್ಥದ ಹಾಗೆಯೇ, **ಐಕಾಂತಿಕಾತ್ಯಂತಿಕ ನಿತ್ಯಕಿಂಕರನಾನ, ಐಕಾಂತಿಕ** - ಪ್ರಯೋಜನಾಂತರಶೂನ್ಯನಾದುದರಿಂದ ಆ ಒಂದು ಪ್ರಯೋಜನದಲ್ಲೇ ನಿಯತನಾದ, **ಆತ್ಯಂತಿಕ** - ಆದುದರಿಂದ ನಿತ್ಯವೂ ಅನುವೃತ್ತನಾದ, **ನಿತ್ಯಕಿಂಕರನಾನ** - ಸದಾ ಕೈಂಕರ್ಯನಿರತನಾದ, **ಇವನ್** - ಈ ಹೊಸದಾಗಿ ಪ್ರಾಪ್ತನಾದ ಮುಕ್ತನ, **ಉಗಪ್ಪಾಲೇ** - ಭೋಗ್ಯಭಾವದಿಂದ ಎಂದರೆ ಆತನಿಗೆ ಈ ಪರಮ ಮನೋರಥರೂಪ ಕೈಂಕರ್ಯವನ್ನು ಒದಗಿಸಿಕೊಟ್ಟು ಹೀಗೆ ಆತನಿಗೆ ತಾನು ಪರಮಭೋಗ್ಯನಾಗುವದರಿಂದ, **ತಾಱ** - ತಾನೂ ಕೂಡ, **ನಿರತಿಶಯಾನಂದನಾಯಿರುಕ್ಕುಮ್** – ಹೀಗೆ ತುಂಬಾ ಆನಂದದಾಯಕನಾಗುವದರಿಂದ ಪರಮಸಂತೋಷ ಹೊಂದುವನಾಗಿರುವನು ಎಂಬ ತಾತ್ಪರ್ಯವು. ಈ ವಾಕ್ಯದಲ್ಲಿ "**ರಸೋವೈ ಸಃ, ರಸಗ್ ಹ್ಯೇವಾಯಂ ಲಬ್ಧ್ವಾನಂದೀ ಭವತಿ । ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋನಸ್ಯಾತ್ । ಏಷಹ್ಯೇವಾನನ್ದಯಾತಿ**" ಎಂಬ ಶ್ರುತ್ಯರ್ಥವು ಉಪಪಾದಿಸಲ್ಪಟ್ಟಿತು. ಪರಮಾತ್ಮನು ಆನಂದಸ್ವರೂಪನು, ಈತನೂ ಅದನ್ನೇ ಹೊಂದುವದರಿಂದ ಈತನಿಗೂ ಆನಂದತ್ವವು ; ಹೀಗೆ ಈ ಪರಮಾತ್ಮನು ಅಪರಿಚ್ಛಿನ್ನವಾದ ಆನಂದಸ್ವರೂಪನಲ್ಲದೇ ಇದ್ದರೆ ಸಾಂಸಾರಿಕವಾದುದೇಯಾಗಲಿ ಅಥವಾ ಆಮುಷ್ಮಿಕರೂಪವಾದುದೇಯಾಗಲಿ ಇರುವ ಸುಖವನ್ನು ಯಾವನು ತಾನೇ ಹೊಂದು

ವನು, ಈತನೇ ಸಕಲ ವಿಧವಾದ ಆನಂದಕ್ಕೂ ಕಾರಣಭೂತನಾಗಿರುವದರಿಂದಲೇ ಆತನಿಗೆ ಪ್ರಾಪ್ಯತ್ವ ಉಂಟು, ಆತನು ಎಲ್ಲರಿಗೂ ಆನಂದವನ್ನುಂಟುಮಾಡುವನು ಎಂಬುದು ಈ ಶ್ರುತ್ಯಭಿಪ್ರಾಯವು (ತೈ ಆನಂದ ೭ನೆಯ ಅನುವಾಕ)

ಶ್ರೀ ಯಾಮುನೇಯರು ತಮ್ಮ ಸ್ತೋತ್ರರತ್ನದಲ್ಲಿ ಏನನ್ನು ಅಪೇಕ್ಷಿಸಿರುತ್ತಾರೆಂದರೆ :—

**"ಭವಂತಮೇವಾನುಚರನ್ನಿರಂತರ**
**ಪ್ರಶಾಂತ ನಿಶ್ಶೇಷ ಮನೋರಥಾಂತರಃ ।**
**ಕದಾಹ ಮೈಕಾಂತಿಕ ನಿತ್ಯಕಿಂಕರಃ**
**ಪ್ರಹರ್ಷಯಿಷ್ಯಾಮಿ ಸನಾಥ ಜೀವಿತಃ" ॥ ೪೬ ॥**

ಪರಮ ಪುರುಷಾರ್ಥ ಕಾಷ್ಠಾಭೂತವಾದುದು ಸರ್ವೇಶ್ವರನ ನಿರುಪಾಧಿಕ ಕೈಂಕರ್ಯವು. ಅದನ್ನು ಪ್ರಾರ್ಥಿಸುವ ಈ ಶ್ಲೋಕವನ್ನೇ ಮನಸ್ಸಿನಲ್ಲಿಟ್ಟು ಈ ಶ್ಲೋಕಾಭಿಪ್ರಾಯವನ್ನೇ ಸ್ವಾಮಿಯವರು ಉಪಪಾದಿಸಿರುತ್ತಾರೆ **ಭವಂತಂ** - **"ಕದಾಪುನಶ್ಶಂಖ"** ಎಂಬ ಶ್ಲೋಕ ಮೊದಲುಗೊಂಡು ಇದುವರೆಗೂ ಈ ೧೫ ಶ್ಲೋಕಗಳಲ್ಲಿ ಹೇಳಿದ ಹಾಗೆ ಸರ್ವವಿಧದಲ್ಲೂ ಪೂರ್ಣತೆಯನ್ನು ಹೊಂದಿದ ನಿನ್ನನ್ನೇ, ತನಗೆ ಸೇವ್ಯಾಂತರವಿಲ್ಲವೆಂದು ತಿಳಿಸುವದಕ್ಕಾಗಿ **ಏವ** ಕಾರವು. ಅಥವಾ ಒಂದುವೇಳೆ ಭಾಗವತರಿಗೆ ಶುಶ್ರೂಷಾ ರೂಪದಲ್ಲಿ ಕೈಂಕರ್ಯ ಮಾಡಿದರೂ ಅದೂ ಕೂಡ ನಿನಗೇನೇ ಸಲ್ಲುತ್ತದೆ ಎಂಬ ಭಾವವೆಂದಾಗಲಿ **ಭವಂತಮೇವ** ಎಂಬ ಪ್ರಯೋಗವು. **ಅನುಚರನ್** - ಶುಶ್ರೂಷೆ ಮಾಡುವನಾಗಿ, ಅದಕ್ಕಾಗಿ ಪರಮಕೃಪಾಳುವಾದ ನೀನು ಏನು ಮಾಡತಕ್ಕದ್ದೆಂದರೆ, **ಪ್ರಶಾಂತ ನಿಶ್ಶೇಷ ಮನೋರಥಾಂತರಃ** - ನಿನ್ನ ಕೃಪೆಯಿಂದಲೇ ಇತರ ತುಚ್ಛ ಮನೋರಥಗಳಲ್ಲವೇಕ್ಷೆಯು ನಿಶ್ಶೇಷವಾಗಿ ಚೆನ್ನಾಗಿ ಶಾಂತವಾಗತಕ್ಕದ್ದು, ಸ್ವಲ್ಪವೂ ನಿಲ್ಲದ ಹಾಗೆ ಶಾಂತವಾಗತಕ್ಕದ್ದು, ಅದೂ ಅಲ್ಲದೆ ಇಂತಹ ಇಚ್ಛೆಯ ಶಮನವು ಸಾರ್ವಕಾಲಿಕವಾಗಿರಬೇಕು, ಆದುದರಿಂದ ನಿರಂತರ ಪ್ರಶಾಂತವೆಂದು ಹೇಳಲ್ಪಟ್ಟಿತು. ಹೀಗೆ ಬೇರೇ ಮನೋರಥಗಳೊಂದೂ ಇಲ್ಲದವನಾಗಿ, ಆದುದರಿಂದಲೇ, **ಐಕಾಂತಿಕಃ** - ನಿನ್ನ ನಿರಂತರ ಒಬ್ಬರಲ್ಲೇ ನಿಯತನಾಗಿ, **ನಿತ್ಯಕಿಂಕರಃ** ಯಾವಾಗಲೂ ನಿತ್ಯವಾದ ಎಂದರೆ ಅನ್ಯದೇವತಾಸಂಬಂಧವಿಲ್ಲದ, **ಕಿಂಕರಃ** - ಕೈಂಕರ್ಯಗಳನ್ನೆಸಗುವ ದಾಸನಾಗಿ. ನಿನ್ನನ್ನು, **ಪ್ರಹರ್ಷಯಿಷ್ಯಾಮಿ** - ಪ್ರೀತಿಗೊಳಿಸುವೆನು. ಹೀಗೆ ದಾಸಭೂತನಾದ ನಿನಗೆ ಸಂತೋಷವನ್ನುಂಟುಮಾಡುವದೇ ನನಗೆ ಪ್ರಧಾನ ಪ್ರಯೋಜನವೇ ವಿನಾ ಮಿಕ್ಕ ಯಾವುದೂ ಪ್ರಯೋಜನವಿಲ್ಲವೆಂಬ ಭಾವವು. ಇದರಿಂದ ತನಗೆ ಅಧೀನವಾದುದು ಮತ್ತು ತನಗೆ ಪ್ರಯೋಜನವಾದುದು ಎಂಬ

ಭ್ರಮೆ ಇಲ್ಲದೆ ಕೈಂಕರ್ಯವನ್ನು ಸರ್ವೇಶ್ವರನಿಗೆ ಎಸಗುವದೇ ಈತನಿಗೆ ಪರಮಾನಂದವು, ಹೀಗೆ ಆನಂದವನ್ನುಂಟುಮಾಡುವದರಿಂದ ಸರ್ವೇಶ್ವರನು ನಿರತಿಶಯಾನಂದವನ್ನು ಹೊಂದುವನು. ಮುಕ್ತನಿಗೆ ಹೀಗೆ ಆನಂದವನ್ನುಂಟುಮಾಡುವ ದ್ವಾರಾ ತಾನೂ ಆನಂದಿಸುವನು ಎಂಬ ತಾತ್ಪರ್ಯವು ಹೀಗೆ ಮಾಡುವದರಿಂದ ತಾನು ಈಗ **ಸನಾಥಜೀವಿತಃ** - ನಿನ್ನನ್ನು ನಾಥನನ್ನಾಗಿ ವರಿಸಿ ಜೀವಸಾರ್ಥಕ್ಯವನ್ನು ಹೊಂದಿದವನಾದೆನು. ಹಿಂದೆ ಉಪೇಕ್ಷೆ ಮಾಡಿ ಜೀವಶ್ರವದ ಹಾಗೆ ಇದ್ದೆನು ಎಂಬ ಭಾವವು.

ಶ್ರೀ ಭಾಷ್ಯಕಾರರ ವೈಕುಂಠ ಗದ್ಯವಾಕ್ಯಗಳು ಯಾವುವೆಂದರೆ :— ಎರಡು ಮೂರು ಕಡೆಯಲ್ಲಿ ಇದನ್ನೇ ಉಪಪಾದಿಸಿರುತ್ತಾರೆ:—(೧) **ಕಲ್ಯಾಣಗುಣೌಘ ಮಹಾರ್ಣವಂ ಪರಮ ಪುರುಷಂ ಭಗವಂತಂ ಶ್ರೀಮನ್ನಾರಾಯಣಂ ಸ್ವಾಮಿತ್ವೇನ ಸುಹೃತ್ವೇನ ಗುರುತ್ವೇನ ಚ ಪರಿಗೃಹ್ಯ ಐಕಾಂತಿಕಾತ್ಯಂತಿಕ ತತ್ಪಾದಾಮ್ಬುಜದ್ವಯ ಪರಿಚರ್ಯೈಕ ಮನೋರಥಃ**" "ಇಂತಹ ಸರ್ವೇಶ್ವರನನ್ನು ಸ್ವಾಮಿಯೆಂದೂ, ಸರ್ವಸುಹೃತ್ತೆಂದೂ, ಪರಮಗುರುವೆಂದೂ ಭಾವಿಸಿ, ಐಕಾಂತಿಕವಾದ ಆತ್ಯಂತಿಕವಾದ, ಆತನ ಪಾದಕಮಲಗಳಲ್ಲಿ ಕೈಂಕರ್ಯ ಮಾಡಬೇಕೆಂಬ ಮುಖ್ಯ ಮನೋರಥವುಳ್ಳವನಾಗಿ" ಎಂದು ಹೇಳಿರುತ್ತದೆ. ಇನ್ನೊಂದು ಕಡೆಯಲ್ಲಿ "**ಕದಾಹಂ ಭಗವತ್ಪಾದಾಂಬುಜದ್ವಯ ಪರಿಚರ್ಯಾ ಕರಣಯೋಗ್ಯಸ್ತದೇಕ ಭೋಗಸ್ತತ್ಪಾದೌ ಪರಿಚರಿಷ್ಯಾಮಿ**" "ಯಾವಾಗ ನಾನು ಆ ಭಗವಂತನ ಪಾದಕಮಲಗಳಲ್ಲಿ ಪರಿಚರ್ಯ ಮಾಡಲು ಯೋಗ್ಯನಾಗಿ, ಅದನ್ನೇ ಮುಖ್ಯ ಭೋಗವುಳ್ಳವನಾಗಿ, ಆತನ ಪಾದಕಮಲಗಳಲ್ಲಿ ಪರಿಚರ್ಯೆ ಮಾಡುವೆನೋ?" ಎಂದು ಹೇಳಲ್ಪಟ್ಟಿರುತ್ತದೆ ಇನ್ನೂ ಒಂದು ಕಡೆಯಲ್ಲಿ "**ಮಾಮೈಕಾನ್ತಿಕಾತ್ಯಂತಿಕ ಪರಿಚರ್ಯಾಕರಣಾಯ ಪರಿಗೃಹ್ಣೀಷ್ವ**" "ಇಂತಹ ಐಕಾಂತಿಕಾತ್ಯಂತಿಕ ಕೈಂಕರ್ಯವನ್ನು ಮಾಡುವದಕ್ಕಾಗಿ ನನ್ನನ್ನು ಅಂಗೀಕರಿಸು" ಎಂದು ಹೇಳಲ್ಪಟ್ಟಿರುತ್ತದೆ

**ಇತರ ಗತಿಗಳ ವಿಷಯವು ಬೇಕಿಲ್ಲವು.**

---

ಈ ಅರ್ಚಿರಾದಿ ಗತಿಯಲ್ಲದೆ ಇತರ ಬೇರೇ ಗತಿಗಳ ಮೂಲಕವಾಗಿಯೂ ಮೋಕ್ಷವುಂಟೆಂದು ಕೆಲವು ಭಾರತ ವಚನಗಳಲ್ಲೂ, ಜಯತ್ಸಂಹಿತೆಯಲ್ಲೂ, ಬ್ರಹ್ಮಸೂತ್ರದ ಪಾಂಚರಾತ್ರಾಧಿಕರಣದಲ್ಲೂ ಹೇಳಿದೆಯಲ್ಲಾ, ಇವುಗಳೂ ಪ್ರಮಾಣಗಳಲ್ಲವೇ ಎಂದರೆ, ಅವುಗಳು ಕೆಲವು ಅಧಿಕಾರಿವಿಶೇಷರನ್ನು ಕುರಿತು ಹೇಳುವದರಿಂದ, ಅವು ನಮಗೀಗ ಬೇಕಿಲ್ಲವೆಂದು ಹೇಳುತ್ತಾರೆ.

## ಗತ್ಯಂತರಾಣಾ ಮನಪೇಕ್ಷಿತತ್ವಮ್

### (೧) ವಸ್ವಾದಿ ಪದಪ್ರಾಪ್ತಿ ಪೂರ್ವಕ ಮೋಕ್ಷಸಾಧನಮಾನ ಮಧು

**ವಸ್ವಾದಿ ಪದಪ್ರಾಪ್ತಿ ಪೂರ್ವಕ** - ವಸ್ವಾದಿಗಳ ಲೋಕಪ್ರಾಪ್ತಿ ಪೂರ್ವಕ, **ಮೋಕ್ಷಸಾಧನಮಾನ** - ಮೋಕ್ಷವನ್ನು ಸಾಧಿಸಿಕೊಡುವ, **ಮಧು ವಿದ್ಯಾದಿಗಳಿಲುಮ್** - ಮಧುವಿದ್ಯವೇ ಮೊದಲಾದವುಗಳಲ್ಲೂ, ಇಲ್ಲಿ ಆದಿಪದ ದಿಂದ ಪಂಚಾಗ್ನಿ ವಿದ್ಯೆಯೂ ಹೇಳಲ್ಪಟ್ಟಿತು, ಮಧುವಿದ್ಯಾನಿಷ್ಠನಿಗೆ ವಸ್ವಾದಿ ಪ್ರಾಪ್ತಿಯೇ ಹೇಳಿರುವದರಿಂದ, ತನ್ನನ್ನು ತಾನೇ ಉಪಾಸ್ಯವಾಗಿ ಭಾವಿಸುವದು ಅಯುಕ್ತವೆಂದು ಜೈಮಿನ್ಯಾಚಾರ್ಯರು ಭಾವಿಸಿದರು ಅದೂ ಅಲ್ಲದೆ ವಸ್ವಾದಿ ತ್ಯರುಗಳಿಗೆ **"ತಂ ದೇವಾ ಜ್ಯೋತಿಷಾಂ ಜ್ಯೋತಿಃ"** ಎಂಬಲ್ಲಿ ಪರಂಜ್ಯೋತಿ ಸ್ಸಾದ ಪರಬ್ರಹ್ಮವೇ ಉಪಾಸ್ಯವೆಂದೂ ಹೇಳಿರುವದರಿಂದ ಮಧುವಿದ್ಯೆಯಲ್ಲಿ ಅಧಿ ಕಾರವಿಲ್ಲವೆಂಬಭಿಪ್ರಾಯವು. ಮಧುವಿದ್ಯೆಯಲ್ಲಿ ಆದಿತ್ಯನ ಪೂರ್ವ ದಕ್ಷಿಣ ಪಶ್ಚಿಮೋ ತ್ತರ ಊರ್ಧ್ವಭಾಗಗಳು, ಕ್ರಮವಾಗಿ ವಸು, ರುದ್ರ, ಆದಿತ್ಯ, ಮರುತ್, ಸಾಧ್ಯರು ಗಳಿಗೆ ಮಧುವಿನ ಹಾಗೆ ಭೋಗ್ಯಗಳೆಂದು ಹೇಳಲ್ಪಟ್ಟ, ಇವುಗಳೇ ಉಪಾಸ್ಯ ಗಳು, ಇವುಗಳೇ ಪ್ರಾಪ್ಯಗಳು ಎಂದು ಉಪದೇಶಿಸಲ್ಪಟ್ಟಿರುತ್ತದೆ. ವ್ಯಾಸರಭಿ ಪ್ರಾಯವು ಜೈಮಿನ್ಯಾಚಾರ್ಯರಭಿಪ್ರಾಯಕ್ಕೆ ವಿರುದ್ಧವಾಗಿ, ವಸುರುದ್ರಾದಿತ್ಯಾದಿ ಗಳಿಗೂ ಮಧುವಿದ್ಯೆಯಲ್ಲಿ ಅಧಿಕಾರ ಉಂಟೆಂದೂ ಕಲ್ಪಾಂತದಲ್ಲಿ ವಸ್ವಾದಿಪ್ರಾಪ್ತಿ ಯುಂಟಾಗಿ. ಅಲ್ಲಿಂದ ಮುಂದಕ್ಕೆ ಮೋಕ್ಷಪ್ರಾಪ್ತಿಯುಂಟಾಗಬಹುದು ಎಂಬುದು. ಆದರೆ ತನಗೆ ತಾನೇ ಉಪಾಸ್ಯ ಹೇಗೆ ಎಂದರೆ ವಸ್ವಾದಿತ್ಯ ಶರೀರಕ ಪರಬ್ರಹ್ಮ ವೆಂದು ಭಾವಿಸತಕ್ಕದ್ದು. ಇದು ಮಧುವಿದ್ಯಾನಿಷ್ಠನಾದ ಉಪಾಸಕನಿಗೆ ಹೇಳಿರುವ ಬೇರೆ ಗತಿಯಾಮದರಿಂದ ನಮಗೆ ಬೇಕಾದುದಲ್ಲವೆಂಬ ಭಾವವು ಹಾಗೆಯೇ ಪಂಚಾಗ್ನಿ ವಿದ್ಯಾನಿಷ್ಠನಿಗೆ, ಕೈವಲ್ಯಪ್ರಾಪ್ತಿಯುಂಟಾಗಿ ಅನಂತರ ಮೋಕ್ಷವೆಂದು ಹೇಳಲ್ಪಟ್ಟಿರುತ್ತದೆ. ( ನೆಯ ಪುಟ ನೋಡಿ). ಪಂಚಾಗ್ನಿ ವಿದ್ಯಾನಿಷ್ಠನೆಂದರೆ:— ಪ್ರಕೃತಿವಿಲಕ್ಷಣವಾದ ಪರಿಶುದ್ಧವಾದ ತನ್ನ ಆತ್ಮಸ್ವರೂಪವು ಬ್ರಹ್ಮಾತ್ಮಕವೆಂದು ಉಪಾಸಿಸುವವನು. ಇವನಿಗೆ ಫಲವು ಮಧುವಿದ್ಯಾನಿಷ್ಠನಿಗೆ ಹೇಗೆ ವಸ್ವಾದಿಲೋಕ ಪ್ರಾಪ್ತಿ ಮೂಲಕ ಅವಾಂತರಫಲವೋ, ಹಾಗೆಯೇ ಇವನಿಗೂ ಕೈವಲ್ಯದಲ್ಲಿ ಸ್ವಾತ್ಮಾನುಭವವು ಅವಾಂತರ ಫಲವು, ಆಲ್ಲಿಂದ ಮುಂದಕ್ಕೆ ಮೋಕ್ಷಫಲವು ಹೀಗೆ ಇಂತಹ ಉಪಾಸಕರುಗಳಿಗೆ ಬೇರೇ ಗತಿಯು ಹೇಳಿರುತ್ತದೆ ಇದು

ವಿದ್ಯಾದಿಗಳಿಲುಮ್ (೨) "ಸತ್ತ್ವಂ ವಹತಿ ಶುದ್ಧಾತ್ಮಾ ದೇವಂ ನಾರಾಯಣಮ್ (ಪ್ರಭುಮ್) ಹರಿಮ್ । ಪ್ರಭುರ್ವಹತಿ ಶುದ್ಧಾತ್ಮಾ ಪರಮಾತ್ಮಾನಮಾತ್ಮನಾ" (೩) "ಯೇತು ದಗ್ಧೇಂಧನಾ ಲೋಕೇ ಪುಣ್ಯಪಾಪವಿವರ್ಜಿ

---

ಉಪಾಸಕ ವಿಷಯವಾದುದರಿಂದ ನಮಗೆ ಬೇಕಿಲ್ಲವೆಂದು ಉಪದೇಶಿಸುತ್ತಾರೆ. ಇಲ್ಲಿಯೂ ಕೂಡ ಅರ್ಚಿರಾದಿ ಗತಿಯಿಂದಲೇ ಹೋಗಿ, ಅಲ್ಲಲ್ಲಿ ನಿಂತು ಹೋಗುತ್ತಾರೆಂದು ಏಕೆ ಹೇಳಕೂಡದೆಂದರೆ, ಅರ್ಚಿರಾದಿ ಗತಿಯಲ್ಲಿ ಆದಿತ್ಯನನ್ನು ಬೇಧಿಸಿಕೊಂಡು ಹೋಗುತ್ತಾನೆಂದು ಹೇಳಿರುವದರಿಂದ, ಅದೇ ಪ್ರಾಪ್ಯವೆಂದು ಹೇಳುವದು ವಿರುದ್ಧವಾಗುವದರಿಂದ ಅರ್ಚಿರಾದಿ ಗತಿಗಿಂತಲೂ ಬೇರೆಯಾದುದೆಂದೇ ಭಾವಿಸತಕ್ಕದ್ದು.

(೨) ಮುಂದೆ ಶಾಂತಿ ಪರ್ವ ೩೦೭ ನೆಯ ಅಧ್ಯಾಯದಲ್ಲಿ ಹೇಳಿರುವ ಮಾರ್ಗಾಂತರವನ್ನು ಕುರಿತು ಹೇಳುತ್ತಾರೆ:—**ಶುದ್ಧಾತ್ಮಾ** - ಪರಿಶುದ್ಧವಾದ ಸ್ವರೂಪವುಳ್ಳ, **ಸತ್ತ್ವಂ** - ಸತ್ತ್ವವು, **ಪ್ರಭುಮ್** - ಸಮರ್ಥನಾಗಿಯೂ, **ದೇವಂ** - ಪ್ರಕಾಶಿಸುವನಾಗಿಯೂ, ಇರುವ, **ನಾರಾಯಣಂ** – ಸಂಕರ್ಷಣಾವತಾರಿಯಾದ ನಾರಾಯಣನನ್ನು, **ವಹತಿ** - ಸೇರಿಸುತ್ತದೆ. ಶುದ್ಧಾತ್ಮನಾದ, ಪ್ರಭುವಾದ ಈ ಅನಿರುದ್ಧರೂಪೀ ನಾರಾಯಣನು, **ಆತ್ಮನಾ** – ತಾನೇ, **ಪರಮಾತ್ಮಾನಂ** - ಪರವಾಸುದೇವನನ್ನು, **ವಹತಿ** - ಸೇರಿಸುವನು" ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ ಭೀಷ್ಮರು ಸಾಂಖ್ಯರ ವಿಷಯವಾಗಿ ಯುಧಿಷ್ಠಿರನಿಗೆ ಉಪದೇಶಿಸುವ ಪ್ರಕರಣವು. ಇವರನ್ನು ಸೂರ್ಯನು ತನ್ನ ರಶ್ಮಿಗಳ ಮೂಲಕ ನಭಸ್ಸನ್ನೂ, ನಭಸ್ಸು ತಮಸ್ಸನ್ನೂ, ತಮಸ್ಸು ರಜಸ್ಸನ್ನೂ, ರಜಸ್ಸು ಸತ್ತ್ವವನ್ನೂ ಸೇರಿಸುತ್ತವೆಂದು ಹೇಳಿ, ಸತ್ತ್ವವು ಅನಿರುದ್ಧನನ್ನೂ, ಅನಿರುದ್ಧನು ವಾಸುದೇವನನ್ನೂ ಸೇರಿಸುವನೆಂದು ಹೇಳಲ್ಪಟ್ಟಿರುತ್ತದೆ ಇದೂ ಜ್ಞಾನಯೋಗಿಗಳಾದ ಸಿದ್ಧರ ವಿಷಯವಾದುದರಿಂದ ನಮಗೆ ಬೇಕಾದುದಲ್ಲವೆಂಬ ಭಾವವು. ಇಲ್ಲಿ ನಾರಾಯಣನು ಪರಮಾತ್ಮನನ್ನು ಸೇರಿಸುವನು ಎಂದು ಹೇಳಿರುವದರಿಂದ ಸಂಕರ್ಷಣರೂಪಿಯಾದ ನಾರಾಯಣನು ವಾಸುದೇವರೂಪಿಯಾದ ಪರಮಾತ್ಮನನ್ನು ಸೇರಿಸುವನೆಂದು ಅರ್ಥ ಮಾಡಬೇಕು. ಏಕೆಂದರೆ ಮುಂದೆ ೩೫೪ ನೆಯ ಅಧ್ಯಾಯದಲ್ಲಿ ಹಾಗೆಯೇ ಪುನಃ ಸಾಂಖ್ಯರ ವಿಷಯದಲ್ಲಿ ಹೇಳಲ್ಪಟ್ಟಿರುವದರಿಂದ, ಸಂಕರ್ಷಣ ವಾಸುದೇವರೂಪಿಗಳೆಂದು ಅರ್ಥ ಮಾಡತಕ್ಕದ್ದು. ಶ್ರೀಮಾನ್ ಶೆಟ್ಟಿಲೂರು ನರಸಿಂಹಾಚಾರ್ಯರು

---

(೨) ಭಾರತ, ಶಾಂತಿಪರ್ವ ೩೦೭, ೭೭. (೩) ಭಾರತ, ಶಾಂತಿ. ೩೫೪. ೧೩. ೨೦.

ತಾಃ । ತೇಷಾಂ ವೈ (ಕ್ಷೇಮಮಧ್ವಾನಂ) ಷ್ಣವ ಮಧ್ವಾನಂ ಗಚ್ಛತಾಂ ದ್ವಿಜಸತ್ತಮ । ಸರ್ವಲೋಕ ತಮೋಹಂತಾ ಆದಿತ್ಯೋ ದ್ವಾರಮುಚ್ಯತೇ । ಜ್ವಾಲಾಮಾಲೀ ಮಹಾತೇಜಾ ಯೇನೇದಂ ಧಾರ್ಯತೇ ಜಗತ್ । ಆದಿತ್ಯ

---

ನಾರಾಯಣನೆಂದರೆ ಅನಿರುದ್ಧರೂಪಿ ಎಂದು ಅರ್ಥ ಮಾಡಿರುತ್ತಾರೆ. ಇಲ್ಲಿಯೂ ವ್ಯೂಹಾವತಾರಿಯನ್ನು ಹೇಳಿದಂತಾಯಿತು.

(೩) "ಯೇತು-ಯಾರಾದರೆ ಲೋಕೇ-ಈ ಲೋಕದಲ್ಲಿ, ದಗ್ಧೇಂಧನಾಃ ಸು ಡಲ್ಪಟ್ಟ ಕಟ್ಟಿಗೆಯ ರೂಪವಾದ ಪಾಪವುಳ್ಳವರಾಗಿ, ಎಂದರೆ ಉಪಾಸನಾದಿಗಳಿಂದ ಕರ್ಮಗಳ ನಾಶವುಳ್ಳವರಾಗಿ, ಆ ಕಾರಣದಿಂದ, ಪುಣ್ಯಪಾಪ ವಿವರ್ಜಿತಾಃ-ಪುಣ್ಯ ಪಾಪಗಳಿಲ್ಲದವರಾಗಿ ಕ್ಷೇಮಮಧ್ವಾನಂ ಗಚ್ಛತಾಂ-ಎಲ್ಲಿ ಪೂರ್ಣಕ್ಷೇಮವುಂಟೋ ಅಂತಹ ಮಾರ್ಗವನ್ನು ಕುರಿತು ಹೋಗುತ್ತಿರುವ, ತೇಷಾಂ - ಅಂತಹ ಯೋಗಿ ಗಳಾದ ಸಾಂಖ್ಯರುಗಳಿಗೆ, ಹೇ ದ್ವಿಜಸತ್ತಮ - ಓ ಬ್ರಾಹ್ಮಣಶ್ರೇಷ್ಠರಾದ ನಾರದರೇ, ಇದು ನಾರದರಿಗೆ ನರನಾರಾಯಣ ಋಷಿಗಳು ಮಾಡುವ ಉಪದೇಶವು; ಸರ್ವಲೋಕ ತಮೋಹಂತಾ - ಸಮಸ್ತ ಲೋಕದ ಅಂಧಕಾರವನ್ನು ನಾಶ ಮಾಡುವ, ಆದಿತ್ಯಃ - ಸೂರ್ಯನು, ದ್ವಾರಂ - ಮಾರ್ಗವಾಗಿ, ಉಚ್ಯತೇ - ಹೇಳಲ್ಪಡುವನು ಎಂದರೆ ಅಂಥಾವರು ಸೂರ್ಯನ ಮೂಲಕವಾಗಿ, ಕ್ಷೇಮವುಂಟಾಗುವ ಸ್ಥಳವಾದ ವೈಕುಂಠಕ್ಕೆ ಹೋಗತಕ್ಕದ್ದೆಂಬ ಭಾವವು; ಆ ಸೂರ್ಯನು ಎಂಥಾವನೆಂದರೆ, ಜ್ವಾಲಾಮಾಲೀ - ಜ್ವಾಲೆಗಳನ್ನೇ ಮಾಲೆಯಾಗಿ ಉಳ್ಳವನು, ಮಹಾತೇಜಾಃ - ಮಹಾ ತೇಜಸ್ಸುಳ್ಳವನು, ಯೇನ-ಯಾವ ಸೂರ್ಯನಿಂದಲೇ, ಇದಂ ಜಗತ್-ಈ ಜಗತ್ತು, ಧಾರ್ಯತೇ - ಧರಿಸಲ್ಪಟ್ಟಿರುತ್ತದೋ, ಸೂರ್ಯನಿಂದಲೇ ಈ ಜಗತ್ತಿನಲ್ಲಿ ಪ್ರಾಣಿಗಳ ವಾಸವಾದುದರಿಂದ ಧಾರ್ಯತೇ ಎಂದು ಪ್ರಯೋಗಿಸಲ್ಪಟ್ಟಿರುತ್ತದೆ; ಹೀಗೆ ಆದಿತ್ಯದಗ್ಧ ಸರ್ವಾಂಗಾಃ - ಸೂರ್ಯನಿಂದ ಸುಡಲ್ಪಟ್ಟ ಸರ್ವಾವಯವವುಳ್ಳವರಾಗಿ, ಕೇನಚಿತ್-ಯಾರೊಬ್ಬರಿಂದಲೂ, ಕ್ವಚಿತ್ - ಯಾವದೊಂದು ಪ್ರದೇಶದಲ್ಲಾಗಲಿ, ಅದೃಶ್ಯಾಃ - ಕಾಣಿಸದವರಾಗಿ, ಪರಮಾಣ್ವಾತ್ಮಭೂತಾಶ್ಚ - ಅತಿ ಸೂಕ್ಷ್ಮವಾದ ಶರೀರವುಳ್ಳವರಾಗಿ, ತಂ ದೇವಂ - ಆ ಅನಿರುದ್ಧನಾದ ದೇವನನ್ನು, ಪ್ರವಿಶಂತಿ - ಹೊಂದುವರು, ಅನಿರುದ್ಧ ತನೌ ಸ್ಥಿತಾಃ - ಆ ಅನಿರುದ್ಧ ಶರೀರದಲ್ಲಿರುವವರಾಗಿ, ತಸ್ಮಾದಪಿ ವಿನಿರ್ಮುಕ್ತಾಃ - ಅಲ್ಲಿಂದಲೂ ಬಿಡಲ್ಪಟ್ಟವರಾಗಿ, ಮನೋಭೂತಾಃ - ಮನಸ್ಸನ್ನೇ ಶರೀರವಾಗಿ ಉಳ್ಳವರಾಗಿ, ತತಃ - ಅಲ್ಲಿಂದ ಮುಂದಕ್ಕೆ, ಭೂಯಃ-ಪುನಃ, ಪ್ರದ್ಯುಮ್ನಂ -

**ದಗ್ಧ ಸರ್ವಾಂಗಾ ಅದೃಶ್ಯಾಃ ಕೇನ ಚಿತ್ಕ್ವಚಿತ್ । ಪರಮಾಣ್ವಾತ್ಮಭೂತಾಶ್ಚ ತಂ ದೇವಂ ಪ್ರವಿಶನ್ತ್ಯುತ । ತಸ್ಮಾದಪಿ ವಿನಿರ್ಮುಕ್ತಾ ಅನಿರುದ್ಧತನೌ ಸ್ಥಿತಾಃ । ಮನೋಭೂತಾಸ್ತತೋ ಭೂಯಃ ಪ್ರದ್ಯುಮ್ನಂ ಪ್ರವಿಶನ್ತ್ಯುತ । ಪ್ರದ್ಯುಮ್ನಾಚ್ಚ ವಿನಿರ್ಮುಕ್ತಾ ಜೀವಂ ಸಂಕರ್ಷಣಂತತಃ । ವಿಶನ್ತಿ ವಿಪ್ರಪ್ರವರಾ ಸಾಂಖ್ಯಾ ಯೋಗಾಶ್ಚ ತೈಸ್ಸಹ । ತತಸ್ತ್ರೈಗುಣ್ಯ ಹೀನಾಸ್ತೇ ಪರಮಾತ್ಮಾನಮಂಜಸಾ । ಪ್ರವಿಶನ್ತಿ ದ್ವಿಜಶ್ರೇಷ್ಠಾಃ ಕ್ಷೇತ್ರಜ್ಞಂ ನಿರ್ಗುಣಾತ್ಮಕಂ । ಸರ್ವಾವಾಸಂ ವಾಸುದೇವಂ ಕ್ಷೇತ್ರಜ್ಞಂ ವಿದ್ಧಿತತ್ತ್ವತಃ । ಸಮಾಹಿತಮನಸ್ಕಾಶ್ಚ ನಿಯತಾ ಸ್ಸಂಯತೇಂದ್ರಿಯಾಃ । ಐಕಾಂತ್ಯಭಾವೋಪಗತಾ ವಾಸುದೇವಂ ವಿಶಂತಿ ತೇ ॥" ಇತ್ಯಾದಿಗಳಾನ ಮಹಾ**

---

ಪ್ರದ್ಯುಮ್ನನನ್ನು, **ಪ್ರವಿಶಂತಿ** - ಪ್ರವೇಶಿಸುವರು, ಎಂದರೆ ಆ **ವ್ಯೂಹಲೋಕ**ವನ್ನು ಸೇರುವರು ಎಂಬರ್ಥವು; **ಪ್ರದ್ಯುಮ್ನಾಚ್ಚ ವಿನಿರ್ಮುಕ್ತಾಃ** - ಆ ಪ್ರದ್ಯುಮ್ನನಿಂದ ಬಿಡಲ್ಪಟ್ಟವರಾಗಿ, **ಜೀವಂ ಸಂಕರ್ಷಣಂ ತತಃವಿಶಂತಿ** - ಅನಂತರ ಜೀವಾಭಿಮಾನಿಯಾದ ಸಂಕರ್ಷಣ **ಲೋಕ**ವನ್ನು **ಪ್ರ**ವೇಶಿಸುವರು, **ತೈಸ್ಸಹ** - ಅವರುಗಳೊಂದಿಗೆ, **ವಿಪ್ರಪ್ರವರಾಃ** - ಬ್ರಾಹ್ಮಣಶ್ರೇಷ್ಠರಾದ, **ಸಾಂಖ್ಯಾ ಯೋಗಾಶ್ಚ** - ಜ್ಞಾನಯೋಗ ಕರ್ಮಯೋಗ ನಿಷ್ಠರೂ ಸಹ, **ತತಃ** - ಆ **ಸಂಕರ್ಷಣ**ನನ್ನು ಬಿಟ್ಟು, **ತ್ರೈಗುಣ್ಯ ಹೀನಾಃ** - ಮೂರು ಗುಣಗಳಾದ ಸತ್ವರಜಸ್ತಮೋಗುಣಗಳಿಂದ ಬಿಡಲ್ಪಟ್ಟವರಾಗಿ, **ತೇ** - ಆ, **ದ್ವಿಜಶ್ರೇಷ್ಠಾಃ** - ಬ್ರಾಹ್ಮಣಶ್ರೇಷ್ಠರು, **ಅಂಜಸಾ** - ಶೀಘ್ರದಲ್ಲಿ, **ಕ್ಷೇತ್ರಜ್ಞಂ** - ಕ್ಷೇತ್ರಜ್ಞನೆಂದು ಹೇಳಿಸಿಕೊಳ್ಳುವ, **ನಿರ್ಗುಣಾತ್ಮಕಂ** – ಈ ಹೇಯವಾದ ಪ್ರಕೃತಿಗುಣಗಳೊಂದೂ ಇಲ್ಲದಿರುವ, **ಪರಮಾತ್ಮಾನಂ** - ಪರಮಾತ್ಮನಾದ ವಾಸುದೇವನನ್ನು, **ವಿಶಂತಿ** - ಹೊಂದುತ್ತಾರೆ. **ಕ್ಷೇತ್ರಜ್ಞಂ** - ಆ ಕ್ಷೇತ್ರಜ್ಞನನ್ನು, **ಸರ್ವಾವಾಸಂ** - ಸಮಸ್ತಕ್ಕೂ ಆವಾಸಭೂತನಾದ, **ವಾಸುದೇವಂ** - ವಾಸುದೇವನನ್ನಾಗಿ, **ವಿದ್ಧಿತತ್ತ್ವತಃ**- ಯಥಾರ್ಥವಾಗಿ ತಿಳಿ, **ತೇ** - ಅವರು, **ಸಮಾಹಿತಮನಸ್ಕಾಶ್ಚ** - ಶಾಂತಮನಸ್ಕರಾಗಿ, **ನಿಯತಾಃ** - ಶಾಸ್ತ್ರನಿಯಮದಿಂದಿರುವವರಾಗಿ, **ಸಂಯತೇಂದ್ರಿಯಾಃ** - ಅಡಗಿಸಲ್ಪಟ್ಟ ಇಂದ್ರಿಯಗಳುಳ್ಳವರು, ಎಂದರೆ ಇಂದ್ರಿಯನಿಗ್ರಹ ಮಾಡಿದವರೂ, **ಐಕಾಂತ್ಯಭಾವೋಪಗತಾಶ್ಚ** - ಅನನ್ಯ ಪ್ರಯೋಜನರಾದವರು, ಸರ್ವೇಶ್ವರನೊಬ್ಬನಲ್ಲೇ ಮನಸ್ಸಿಟ್ಟ, **ತೇ** - ಅವರೂ, **ವಾಸುದೇವಂ ವಿಶಂತಿ** - ವಾಸುದೇವನನ್ನು ಹೊಂದುವರು. ಹೀಗೆ ಸಾಂಖ್ಯರಿಗೆ ಆದಿತ್ಯ, ಅನಿರುದ್ಧ, ಪ್ರದ್ಯುಮ್ನ,

**ಭಾರತಾದಿ ವಚನಂಗಳಿಲುಮ್ (೪) "ಶ್ವೇತದ್ವೀಪಂ ಮಿತಃ ಪ್ರಾಪ್ಯ ವಿಶ್ವ ರೂಪಧರಂ ಹರಿಮ್ । ತತೋಽನಿರುದ್ಧ ಮಾಸಾದ್ಯ ಶ್ರೀಮತ್ ಕ್ಷೀರೋದಧೌ ಹರಿಮ್ । ತತಃ ಪ್ರದ್ಯುಮ್ನ ಮಾಸಾದ್ಯದೇವಂ ಸರ್ವೇಶ್ವರೇಶ್ವರಮ್ । ತತಸ್ಸಂಕರ್ಷಣಂ ದಿವ್ಯಂ ಭಗವಂತಂ ಸನಾತನಮ್ । ಅಯಮಪ್ಯಪರೋ ಮಾರ್ಗ ಸ್ಸದಾ ಬ್ರಹ್ಮಸುಖೈಷಿಣಾಮ್ । ಪರಮೈಕಾನ್ತಿ ಸಿದ್ಧಾನಾಂ ಪಂಚಕಾಲ ರತಾತ್ಮನಾಮ್ ।" ಎನ್ರಿಪ್ಪ್ಪಡ್ಯೆಗಳಿಲೇ ಜಯತ್ಸಂಹಿತಾದಿಗಳಿಲುಮ್, (೫) "ವಿಭವಾರ್ಚನಾದ್ವ್ಯೂಹಂ ಪ್ರಾಪ್ಯ ವ್ಯೂಹಾರ್ಚನಾ**

---

ಸಂಕರ್ಷಣರ ಮೂಲಕವಾಗಿ ವಾಸುದೇವನನ್ನು ಹೊಂದುವರೆಂದು ಬೇರೇ ಮಾರ್ಗವು ಇಲ್ಲಿ ಹೇಳಲ್ಪಟ್ಟಿರುತ್ತದೆ." ಇವೇ ಮೊದಲಾದವುಗಳಾದ, ಮಹಾಭಾರತವೇ ಮೊದಲಾದ ವಚನಗಳಲ್ಲೂ ; ಇಲ್ಲಿಯೂ ಕೆಲವು ವಿಧ ಯೋಗಿಗಳಿಗೆ ಈ ಗತಿಯು ಹೇಳಲ್ಪಟ್ಟಿರುವದರಿಂದ ನಮಗೆ ಬೇಕಾದುದಲ್ಲವೆಂಬ ಭಾವವು.

(೩) ಮುಂದೆ ಜಯತ್ಸಂಹಿತಾ ವಾಕ್ಯಗಳನ್ನುದಾಹರಿಸುತ್ತಾರೆ :—**ಇತಃ**- ಈ ಲೋಕದಿಂದ, **ಶ್ವೇತದ್ವೀಪಂ** - ಶ್ವೇತದ್ವೀಪವನ್ನು ಹೊಂದಿ ಅಲ್ಲಿರುವ, **ವಿಶ್ವ ರೂಪಧರಂ ಹರಿಮ್** - ವಿಶ್ವರೂಪವನ್ನು ಧರಿಸಿರುವ ಶ್ರೀಹರಿಯನ್ನೂ, **ಪ್ರಾಪ್ಯ**- ಹೊಂದಿ, **ತತಃ** - ಅಲ್ಲಿಂದ, **ಶ್ರೀಮತ್ ಕ್ಷೀರೋದಧೌ** - ಕ್ಷೀರಸಮುದ್ರದಲ್ಲಿರುವ, **ಹರಿಮ್** - ಶ್ರೀಹರಿಯನ್ನು, **ಪ್ರಾಪ್ಯ** - ಹೊಂದಿ, **ತತಃ** - ಅಲ್ಲಿಂದ, **ಸರ್ವೇಶ್ವರೇಶ್ವರಂ** - ಬ್ರಹ್ಮಾದಿ ಸಮಸ್ತ ದೇವತೆಗಳಿಗೂ ಈಶ್ವರನಾದ, **ದೇವಂ**- ಲೀಲಾಸಕ್ತನಾದ ಪ್ರದ್ಯುಮ್ನನನ್ನು **ಆಸಾದ್ಯ** - ಹೊಂದಿ, **ತತಃ** - ಅಲ್ಲಿಂದ ಮುಂದಕ್ಕೆ, **ಸಂಕರ್ಷಣಂ** - ಸಂಕರ್ಷಣನನ್ನು, **ಆಸಾದ್ಯ** - ಹೊಂದಿ, ಎಂದು ಇಟ್ಟುಕೊಳ್ಳಬೇಕು; **ತತಃ** - ಅಲ್ಲಿಂದ, **ಸನಾತನಂ** - ಅನಾದಿಯಾದ, **ಭಗವಂತಂ** - ಭಗವಂತನನ್ನು ಹೊಂದುತ್ತಾರೆ ಎಂದು ಇಟ್ಟುಕೊಳ್ಳತಕ್ಕದ್ದು. **ಸದಾ** – ಯಾವಾಗಲೂ, **ಬ್ರಹ್ಮಸುಖೈಷಿಣಾಮ್** – ಬ್ರಹ್ಮಾನುಭವಾನಂದವನ್ನು ಅಪೇಕ್ಷಿಸುವ, **ಪರಮೈಕಾನ್ತಿ ಸಿದ್ಧಾನಾಂ** - ಪರಮಾತ್ಮನನ್ನು ಏಕಾಗ್ರಚಿತ್ತತೆಯಿಂದ ಧ್ಯಾನಿಸುವದರಿಂದ ಸಿದ್ಧಿಯನ್ನು ಹೊಂದಿರುವ, **ಪಂಚಕಾಲರತಾತ್ಮನಾಂ**- ಅಭಿಗಮನ, ಉಪಾದಾನ, ಇಜ್ಯಾ, ಸ್ವಾಧ್ಯಾಯ, ಯೋಗವೆಂಬ ಐದು ಕಾಲದಲ್ಲೂ ಭಗವಂತನ ಆರಾಧನೆಯಲ್ಲಿ ಮನಸ್ಸುಳ್ಳವರಿಗೆ, **ಅಯಮಪಿ** - ಇದೂ ಕೂಡ, ಈ ಮೇಲೆ ಹೇಳಿದುದೂ ಕೂಡ, **ಅಪರೋ ಮಾರ್ಗಃ** – ಇನ್ನೊಂದು ಮಾರ್ಗವು.

---

(೪) ಶ್ರೀಭಾಷ್ಯ. ೩.೨. ೪೧.

ತ್ಪರಂ ಬ್ರಹ್ಮ ವಾಸುದೇವಾಖ್ಯಂ ಸೂಕ್ಷ್ಮಂ ಪ್ರಾಪ್ಯತ ಇತಿ ವದಂತಿ"
ಎನ್ರು ಶ್ರೀ ಪಾಂಚರಾತ್ರಾಧಿಕರಣತ್ತಿಲುಮ್, ಶಿಲವಧಿಕಾರ ವಿಶೇಷಙ್ಗಳೈ
ಪ್ಪತ್ತಚ್ಚೊಲ್ಲುಗಿರ ಕ್ರಮ ಮುಕ್ತಿ ಪಕ್ಷತ್ತಿಲುಮ್, ಸತ್ಯಲೋಕಾದಿಗಳಿಲಿ

---

ಎನ್ರಿಪ್ಪುಡೈಗಳಿಲೇ - ಈ ರೀತಿಗಳಲ್ಲಿ, ಜಯತ್ಸಂಹಿತಾದಿಗಳಿಲುಮ್ - ಜಯ ತ್ಸಂಹಿತವೇ ಮೊದಲಾದವುಗಳಲ್ಲಿ; ಇಲ್ಲಿ ಹೇಳಿರುವ ಮಾರ್ಗವು ಕೆಲವು ಅಧಿಕಾರಿ ವಿಶೇಷವನ್ನು ಕುರಿತು ಹೇಳಿರುವದರಿಂದ ನಮಗೆ ಪ್ರಕೃತವಾದುದಲ್ಲವೆಂಬ ಭಾವವು.

(ಆ) ವಿಭವಾರ್ಚ್ಚನಾತ್ - ರಾಮಕೃಷ್ಣಾದಿ ಅವತಾರ ರೂಪಿಯ ಅರ್ಚನೆ ಯಿಂದ ಎಂದರೆ ಧ್ಯಾನದಿಂದ, ವ್ಯೂಹಂ ಪ್ರಾಪ್ಯ - ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ರೂಪಿಯಾದ ಭಗವಂತನನ್ನು ಹೊಂದಿ, ಎಂದರೆ ಕ್ರಮವಾಗಿ ಅವ ರನ್ನು ಹೊಂದಿ, ವ್ಯೂಹಾರ್ಚ್ಚನಾತ್ - ಆ ವ್ಯೂಹಗಳ ಅರ್ಚನೆಯಿಂದ, ವಾಸು ದೇವಾಖ್ಯಂ - ವಾಸುದೇವನೆಂಬ ಹೆಸರುಳ್ಳ, ಸೂಕ್ಷ್ಮಂ - ಕೇವಲ ಸೂಕ್ಷ್ಮವಾದ ಷಾಡ್ಗುಣ್ಯವಿಗ್ರಹವಾದ ಪರಂಬ್ರಹ್ಮವು, ಪ್ರಾಪ್ಯತೇ ಹೊಂದಲ್ಪಡುತ್ತದೆ, ಇತಿ - ಎಂಬದಾಗಿ, ವದಂತಿ - ಹೇಳುತ್ತಾರೆ" ಇದು ಶ್ರೀ ಭಾಷ್ಯಕಾರೋಕ್ತಿಯು, ಎನ್ರು- ಎಂಬದಾಗಿ, ಶ್ರೀ ಪಾಂಚರಾತ್ರಾಧಿಕರಣತ್ತಿಲುಮ್ - ಪಾಂಚರಾತ್ರ ಶಾಸ್ತ್ರ ವನ್ನು ಕುರಿತ ಅಧಿಕರಣದಲ್ಲೂ, (ಇದಕ್ಕೆ ಉತ್ಪತ್ತ್ಯಸಂಭವಾಧಿಕರಣ ವೆಂದು ಹೆಸರು) ಇಲ್ಲಿಯೂ ವಿಭವ ವ್ಯೂಹಾವತಾರಗಳನ್ನು ಉಪಾಸನೆ ಮಾಡುವವರನ್ನು ಕುರಿತು ಹೇಳಿರುವದರಿಂದ ನಮಗೆ ಸಂಬಂಧಿಸಿದುದಲ್ಲವೆಂಬ ತಾತ್ಪರ್ಯವು. ಹೀಗೆ ಶಿಲ ಅಧಿಕಾರ ವಿಶೇಷಙ್ಗಳೈ - ಕೆಲವು ಉಪಾಸನಾದಿ ಅಧಿಕಾರ ವಿಶೇಷಗಳನ್ನು, ಪತ್ತ - ಕುರಿತು, ಶೊಲ್ಲುಗಿರ - ಹೇಳುವ, ಕ್ರಮಮುಕ್ತಿ ಪಕ್ಷತ್ತಿಲುಮ್ - ಕ್ರಮವಾಗಿ ಮುಕ್ತಿಯುಂಟಾಗುವ ಪಕ್ಷದಲ್ಲಿ, ಎಂದರೆ ವಿಭವದಿಂದ ವ್ಯೂಹವೂ, ಆ ವ್ಯೂಹದಲ್ಲಿ ಅನಿರುದ್ಧ, ಅನಂತರ ಪ್ರದ್ಯುಮ್ನ, ಆಮೇಲೆ ಸಂಕರ್ಷಣ, ಅನಂತರ ವಾಸುದೇವ, ಹೀಗೆ ಕ್ರಮವಾಗಿ ಮುಕ್ತಿಯುಂಟಾಗುವ ಪಕ್ಷದಲ್ಲಿ ಎಂಬರ್ಥವು. ಸತ್ಯಲೋಕಾದಿಗಳಿಲಿರುನ್ದು - ಚತುರ್ಮುಖನ ಲೋಕವಾದ ಸತ್ಯಲೋಕವೇ ಮೊದಲಾದವುಗಳಲ್ಲಿದ್ದು, ಕೂರ್ಮಪುರಾಣ ಪೂರ್ವಖಂಡದಲ್ಲಿ "ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ । ಪರಸ್ಯಾನ್ತೇ ಕೃತಾತ್ಮಾನಃ ಪ್ರವಿ ಶನ್ತಿ ಪರಂಪದಂ" ಎಂದು ಹೇಳಿರುತ್ತದೆ. ಇದರರ್ಥವೇನೆಂದರೆ:—ಸಂಪ್ರಾ ಪ್ತೇ ಪ್ರತಿಸಂಚರೇ - ಪ್ರಳಯವು ಪ್ರಾಪ್ತವಾಗಲಾಗಿ, ಪರಸ್ಯಾನ್ತೇ - ಈ ಚತುರ್ಮುಖನ ಆಯುಸ್ಸು ಕಳೆದ ನಂತರ, ತೇ ಸರ್ವೇ - ಅವರೆಲ್ಲರೂ, ಕೃತಾ

**ರುನ್ದು ಮುಕ್ತರಾಮುವರ್‌ಗಳುಕ್ಕು ಮುಳ್ಳ ಗತಿವಿಶೇಷಾದಿಗಳಿರುಕ್ಕುಮ್ ಕಟ್ಟಳೈಗಳವ್ವೋ ಅಧಿಕಾರಿಗಳುಕ್ಕೇ ಜ್ಞಾತವ್ಯಙ್ಗಳಾಗೈಯಾಲಿಙ್ಗವೈ ವಗುತ್ತು ಚ್ಚೊಲ್ಲುಗೈಯುಪೇಕ್ಷಿತಮನ್ರು.**

---

**ತ್ಮಾನಃ** - ಕೃತಕೃತ್ಯರಾಗಿ, **ಬ್ರಹ್ಮಣಾ ಸಹ** - ಚತುರ್ಮುಖನೊಂದಿಗೆ, **ಪ್ರವಿಶನ್ತಿ ಪರಂಪದಂ** - ಪರಮಪದವನ್ನು ಪ್ರವೇಶಿಸುತ್ತಾರೆ." ಇದರ ಪ್ರಕಾರ ಈಗ ಮುಕ್ತಿಯೇ ಇಲ್ಲವೆಂದರೂ, ಸತ್ಯಲೋಕದಲ್ಲಿ ಚತುರ್ಮುಖ ಸಾಯುಜ್ಯವನ್ನು ಹೊಂದಿದ್ದು, ಕಲ್ಪಾಂತರಲ್ಲಿ ಚತುರ್ಮುಖನೊಂದಿಗೇ ಮುಕ್ತಿಯು ಎಂದು ಕೆಲವರಭಿಪ್ರಾಯಪಡುತ್ತಾರೆ ಇದು ಬಾದರಿಯವರಭಿಪ್ರಾಯವು ಜೈಮಿನ್ಯಾಚಾರ್ಯರೂ ವ್ಯಾಸಮಹರ್ಷಿಗಳೂ ಈ ಅಭಿಪ್ರಾಯವನ್ನು ಖಂಡಿಸಿರುತ್ತಾರೆ. (ಬ್ರಹ್ಮಸೂತ್ರ ೪ ೩. ೧೦—೧೪) ಹಾಗಾದರೆ **ಬ್ರಹ್ಮಣಾ ಸಹತೇ ಸರ್ವೇ** - ಎಂಬುದಕ್ಕೆ ಅರ್ಥ ಹೇಗೆ ಎಂದರೆ ಸತ್ಯಲೋಕವಾಸಿಗಳಾಗಿರುವವರಿಗೆ ಚತುರ್ಮುಖನೊಂದಿಗೆ ಮುಕ್ತಿಯು ಎಂದು ಹೇಳಲ್ಪಟ್ಟಿರುತ್ತದೆ ಇಲ್ಲಿ ಆದಿ ಶಬ್ದದಿಂದ ತಪೋಲೋಕ (ಇಲ್ಲಿ ಸನಕಾದಿಗಳಿದ್ದಾರೆಂಬ ಪ್ರಸಿದ್ಧಿಯು), ಸಾಂತಾನಿಕ ಲೋಕಗಳು (ಅಯೋಧ್ಯೆಯಲ್ಲಿದ್ದವರು ಶ್ರೀರಾಮನೊಂದಿಗೆ ಸರಯೂ ನದಿ ಪ್ರವೇಶ ಮಾಡಿ ಇಲ್ಲಿದ್ದಾರೆಂಬ ಪ್ರಸಿದ್ಧಿಯು) ಹೇಳಲ್ಪಟ್ಟವು, **ಮುಕ್ತರಾಮುವರ್‌ಗಳುಕ್ಕು** - ಮುಕ್ತಿಯನ್ನು ಹೊಂದುವವರಿಗೂ, **ಉಳ್ಳ ಗತಿವಿಶೇಷಾದಿಗಳ್** - ಪ್ರಾಪ್ತವಾದ ಗತಿವಿಶೇಷಗಳು, **ಇರುಕ್ಕುಮ್ ಕಟ್ಟಳೈಗಳ್** - ಹೇಳಲ್ಪಟ್ಟ ಕ್ರಮಗಳು, **ಅವ್ವೋ ಅಧಿಕಾರಿಗಳುಕ್ಕೇ** - ಆಯಾ ಅಧಿಕಾರಿಗಳಿಗೇನೆ, **ಜ್ಞಾತವ್ಯಙ್ಗಳಾಗೈಯಾಲೇ** - ತಿಳಿಯತಕ್ಕದ್ದಾದುದರಿಂದ, **ಇಙ್ಗು** – ಈ ಸ್ಥಳದಲ್ಲಿ, ಈ ಸಂದರ್ಭದಲ್ಲಿ, **ಅವೈ** - ಆ ಗತಿವಿಶೇಷಗಳನ್ನೆಲ್ಲಾ, **ವಗುತ್ತುಚ್ಚೊಲ್ಲುಗೈ** - ವಿಸ್ತರಿಸಿ ಹೇಳಬೇಕಾದುದು, **ಅಪೇಕ್ಷಿತಮನ್ರು** - ಬೇಕಾಗಿಲ್ಲವು ಸತ್ಯಲೋಕದಲ್ಲೂ ತಪೋಲೋಕದಲ್ಲೂ **ಸಾಂತಾನಿಕ ಲೋಕದಲ್ಲೂ ಇರುವವರಿಗೇನೇ ತಮಗೆ ಯಾವಾಗ ಮೋಕ್ಷವೆಂಬುವದು ತಿಳಿಯುವದು ; ಈಗ ಈ ಲೋಕದಲ್ಲಿರುವಂಥಾ ನಮಗೆ ಅದು ಬೇಕಾದುದಲ್ಲವೆಂಬ ಭಾವವು ; ಅಪ್ರಸ್ತುತ ಪ್ರಶಂಸೆಯು ಅನಾವಶ್ಯಕವೆಂಬ ಭಾವವು**

ಇವೆಲ್ಲಾ ತಿಳಿದುಕೊಳ್ಳತಕ್ಕದ್ದು ನಮಗೆ ಅನಾವಶ್ಯಕವೆಂದು ಹೇಳಿದಂತಾಯಿತು. ನಮ್ಮಂತಹ ಸ್ವತಂತ್ರಪ್ರಪತ್ತಿನಿಷ್ಠರಿಗಾದರೋ ಇಂತಹ ವಿಳಂಬಗಳೊಂದೂ ಇಲ್ಲದೆ ಅರ್ಚಿರಾದಿ ಗತಿಯೇ ಮಾರ್ಗವೆಂದು ಸ್ಥಾಪಿಸಲ್ಪಟ್ಟಿತು. **ಆದರೆ ಈ ಅರ್ಚಿರಾದಿ ಗತಿಯನುಸಂಧಾನವು ಭಕ್ತಿಯೋಗನಿಷ್ಠನಿಗೆ ನಿತ್ಯವೂ**

## ಮುಮುಕ್ಷೋಃ ಭರನ್ಯಾಸಪೂರ್ವೋತ್ತರಕಾಲಯೋಃ ಗತಿಚಿಂತನಸ್ಯ ಪ್ರಯೋಜನಮ್

**ಇಗ್ಗತ್ಯನುಸಂಧಾನಾದಿಗಳ್ ಸ್ವತಂತ್ರ ಪ್ರಪತ್ತಿನಿಷ್ಠನಾನ ಇವನುಕ್ಕು ಸದ್ವಾರಕ ಪ್ರಪತ್ತಿನಿಷ್ಠನುಕ್ಕುಪ್ಪೋಲೆ ಉಪಾಯಾಂಗಮಾಗ ನಾಳ್**

ಮಾಡತಕ್ಕದ್ದೇನೋ ಕರ್ತವ್ಯವು ಈ ಭರಸಮರ್ಪಣೆ ಮಾಡುವವನಿಗಾಗಲಿ ಅಥವಾ ಮಾಡಿದವನಿಗಾಗಲಿ ನಿತ್ಯದಲ್ಲೂ ಈ ಗತ್ಯನುಸಂಧಾನವು ಆವಶ್ಯಕವೇ ? ಭರನ್ಯಾಸ ಮಾಡುವವನಿಗೂ ಆವಶ್ಯಕವೆಂದರೆ ಇದೇನೂ ಅಂಗವಾಗಿ ಹೇಳಲ್ಪಡಲಿಲ್ಲವಲ್ಲಾ ? ಭರನ್ಯಾಸ ಮಾಡಿದವನಿಗೆ ಆವಶ್ಯಕವೇ ಎಂದರೆ ಇದೂ ಒಂದು ಅಂಗವೇ ಎಂಬಾಕ್ಷೇಪಣೆಗೆ ಒಳಗಾಗುತ್ತದೆ. ಹೀಗಿರುವಲ್ಲಿ ಈ ಗತ್ಯನುಸಂಧಾನವು ಉಪಾಯಾನುಷ್ಠಾನಕ್ಕೆ ಮುಂಚೆಯಾಗಲಿ, ಅನಂತರವಾಗಲಿ ಆವಶ್ಯಕವಾಗಿ ತೋರುವದಿಲ್ಲವಲ್ಲಾ ಎಂದರೆ, ಹಾಗಲ್ಲವೆಂದು, ಈ ಗತ್ಯನುಸಂಧಾನವು ಎರಡು ಸಂದರ್ಭದಲ್ಲೂ ಉಪಯೋಗವಾದುದರಿಂದ ಆವಶ್ಯಕವೆಂದುಪದೇಶಿಸುತ್ತಾರೆ :—

**ಮುಮುಕ್ಷುವಿಗೆ ಭರನ್ಯಾಸಕ್ಕೆ ಮೊದಲೂ ಅನಂತರವೂ ಈ ಗತಿಯು ಚಿಂತನದಿಂದುಂಟಾಗುವ ಪ್ರಯೋಜನವು.**

**ಇಗ್ಗತ್ಯನುಸಂಧಾನಾದಿಗಳ್** - ಈ ಅರ್ಚಿರಾದಿ ಗತಿಯನ್ನು ನಿತ್ಯದಲ್ಲೂ ಸ್ಮರಣೆಗೆ ತಂದುಕೊಳ್ಳುವದೇ ಮೊದಲಾದವುಗಳು, ಇಲ್ಲಿ ಆದಿಪದದಿಂದ ಅಲ್ಲಲ್ಲಿ ಉಂಟಾಗುವ ಸತ್ಕಾರ, ಕೊನೆಗೆ ಪರಮಫಲಪ್ರಾಪ್ತಿ ಇವೆಲ್ಲವೂ ಬೋಧಿಸಲ್ಪಟ್ಟವು. **ಸ್ವತಂತ್ರ ಪ್ರಪತ್ತಿ ನಿಷ್ಠನಾನ ಇವನುಕ್ಕು** - ಭರನ್ಯಾಸವನ್ನನುಷ್ಠಿಸಿದ ಈ ಪ್ರಪನ್ನನಿಗೆ, **ಸದ್ವಾರಕ ಪ್ರಪತ್ತಿನಿಷ್ಠನುಕ್ಕುಪ್ಪೋಲೆ** - ಭಕ್ತ್ಯುಪಾಯನಿಷ್ಠನಾದ ಯೋಗಿಯ ಹಾಗೆ, **ನಾಳ್ ತೋರುಮ್** - ಪ್ರತಿನಿತ್ಯದಲ್ಲೂ, **ಕರ್ತ್ತವ್ಯಙ್ಗಳಲ್ಲೇಯಾಗಿಲುಮ್** - ಮಾಡಲೇಬೇಕೆಂಬ ನಿಯಮವಿಲ್ಲದಿದ್ದರೂ, ಎಂದರೆ ನಿರ್ಯಾಣ, ಗತಿಚಿಂತನ, ಪರಿಪೂರ್ಣಾನುಭವ ಇವುಗಳನುಸಂಧಾನವು ಭಕ್ತಿಮಾರ್ಗನಿಷ್ಠನಿಗೆ ಹೇಗೆ ನಿತ್ಯದಲ್ಲೂ ಆವಶ್ಯಕವೋ ಹಾಗೆ ಈ ಭರನ್ಯಾಸ ನಿಷ್ಠನಿಗೆ ಆವಶ್ಯಕವಿಲ್ಲವೆಂಬುದು ತಾತ್ಪರ್ಯವು. ಭಕ್ತಿಮಾರ್ಗದಲ್ಲಿರುವವನಿಗೆ ಇವೆಲ್ಲಾ ಆವಶ್ಯಕ

**ಕೋರುಮ್ ಕರ್ತವ್ಯಙ್ಗಳಿನ್ರೇಯಾಗಿಲುಮ್ ಇವ್ವುಪಾಯತ್ತಿಲಿಳಿಯು ಮ್ಪೋದು ಅಧಿಕಾರತ್ವ ಸಿದ್ಧಿಕ್ಕಾಗ ಫಲಾರ್ಥಿತ್ವಂ ಅಪೇಕ್ಷಿತಮಾಗೈಯಾ ಲೇ ಫಲಪರ್ವವಿಶೇಷಾನಸಂಧಾನಮಾಯ್ ಪ್ಪುಕಿರಕ್ಕಡವನ.**

**ಪಿನ್ಪು ವರಪ್ಪುಗುಗಿರ ಕಣ್ಣಾಲತ್ತುಕ್ಕು ನಾಳೆಣ್ಣಿ ಯಿರುಕ್ಕುಮಾ ಪ್ಪೋಲೆ ಪೂರ್ವಪ್ರಾರ್ಥಿತ ಪುರುಷಾರ್ಥ ಸ್ಮರಣಮಾತ್ರಮಾಯ್ ಇಪ್ಪುರು ಷಾರ್ಥಪೆರಪ್ಪುಕುಕಿರೋಮೆಙ್ಗ್ಗರ ಪ್ರೀತ್ಯತಿಶಯತ್ತೈ ವಿಳೈಪ್ಪಿತ್ತು ಕ್ಕೊಣ್ಡು ಸ್ವಯಂಪ್ರಯೋಜನಮಾಯಿರುಕ್ಕುಮ್.**

---

ವೆಂದು ಶ್ರೀ ಭಾಷ್ಯದಲ್ಲಿ ಹೇಳಲ್ಪಟ್ಟಿರುತ್ತದೆ; **ಇವ್ವುಪಾಯತ್ತಿಲ್ ಇಳಿಯು ಮ್ಪೋದು** - ಈ ಭರನ್ಯಾಸವನ್ನು ಅನುಷ್ಠಿಸುವ ಕಾಲದಲ್ಲಿ, **ಅಧಿಕಾರತ್ವ ಸಿದ್ಧಿಕ್ಕಾಕ** - ಅಧಿಕಾರವು ಸಿದ್ಧಿಸುವದಕ್ಕಾಗಿ, **ಫಲಾರ್ಥಿತ್ವಂ** - ಫಲಾಪೇಕ್ಷೆಯು, **ಅಪೇಕ್ಷಿತಮಾಗೈಯಾಲೆ** - ಅಪೇಕ್ಷಿತವಾದುದರಿಂದ ಎಂದರೆ ಆವಶ್ಯಕವಾದುದ ರಿಂದ, **ಫಲಪರ್ವ ವಿಶೇಷಾನುಸಂಧಾನಮಾಯ್** - ಫಲಕಾಲ ವಿಶೇಷದ ಚಿಂತ ನೆಯಾಗಿ, **ಪುಗಿರಕ್ಕಡವನ** - ಅದರಲ್ಲೇ ಅಂತರ್ಗತವು ಎಂದರೆ ಫಲದಲ್ಲೇ ಅಂತರ್ಗತವು. ಅಧಿಕಾರತ್ವವು ಸಿದ್ಧಿಸುವದಕ್ಕೆ ಫಲಾರ್ಥಿತ್ವವು ಆವಶ್ಯಕವು; ಆದುದರಿಂದ ಮೋಕ್ಷಫಲಾಪೇಕ್ಷೆಯು ಯಾವಾಗ ಅಧಿಕಾರಸಿದ್ಧಿಗೆ ಆವಶ್ಯಕವಾ ಯಿತೋ, ಆವಾಗ ಮೋಕ್ಷಕ್ಕೆ ಹೋಗುವ ದಾರಿ ಯಾವುದು ಎಂಬುದರನುಸಂಧಾ ನವು ಆ ಫಲದಲ್ಲೇ ಅಂತರ್ಗತವೆಂಬ ಭಾವವು. ಆದುದರಿಂದ ಮೋಕ್ಷಾರ್ಥಿಗೆ ಈ ಗತಿಚಿಂತನವು ಭರನ್ಯಾಸಕ್ಕೆ ಪೂರ್ವಭಾವಿಯಾಗಿ ಅಧಿಕಾರಸಿದ್ಧಿಗೆ ಅಪೇಕ್ಷಿತ ವಾದುದು ಎಂಬ ತಾತ್ಪರ್ಯವು. ಭರನ್ಯಾಸಾನಂತರ ಹೇಗೆ ಪ್ರಯೋಜನವೆಂಬು ದನ್ನು ಮುಂದಿನ ವಾಕ್ಯದಿಂದುಪದೇಶಿಸುತ್ತಾರೆ:—

**ಪಿನ್ಪು** - ಉಪಾಯಾನುಷ್ಠಾನಾನಂತರವೂ, **ವರಪ್ಪುಗುಗಿರ ಕಣ್ಣಾಲ ತ್ತುಕ್ಕು** - ಮುಂದೆ ಬರುವ ಮದುವೆಗೆ, **ನಾಳೆಣ್ಣಿ ಯಿರುಕ್ಕುಮಾಪ್ಪೋಲೆ** - ಈವತ್ತಿಗೆ ಹತ್ತುದಿನವಿದೆ, ಈವತ್ತಿಗೆ ಒಂಬತ್ತು ದಿನ, ಈವತ್ತಿಗೆ ಎಂಟುದಿನವಿದೆ, ಹೀಗೆ ದಿನಗಳನ್ನು ಎಣಿಸಿಕೊಂಡಿರುವದರ ಹಾಗೆ, **ಪೂರ್ವಪ್ರಾರ್ಥಿತ ಪುರುಷಾ ರ್ಥ ಸ್ಮರಣಮಾತ್ರಮಾಯ್** - ಭರನ್ಯಾಸಕಾಲದಲ್ಲಿ ಪ್ರಾರ್ಥಿಸಿದ ಪುರುಷಾರ್ಥದ ಸ್ಮರಣೆಯ ರೂಪವಾದುದಾಗಿ, **ಇಪ್ಪುರುಷಾರ್ಥಂ ಪೆರಪ್ಪುಗಿಗರೋಮ್** - ಈ ಮಹತ್ತಾದ ಪರಿಪೂರ್ಣ ಬ್ರಹ್ಮಾನುಭವ ರೂಪವಾದ ಪುರುಷಾರ್ಥವನ್ನು ನಾವು ಮುಂದೆ ಹೊಂದುವೆವು, **ಎಙ್ಗ್ಗರ ಪ್ರೀತ್ಯತಿಶಯತ್ತೈ** - ಎನ್ನುವ ಹೆಚ್ಚಾದ

## ಗತ್ಯನುಸಂಧಾನ ವಿಷಯೇ ನಿದರ್ಶನಂ

### ಆಗೈಯಾಲಿಙ್ಗ ಸಮುದಾಯಜ್ಞಾನಮಾತ್ರತ್ತಾಲುಮ್ ಇವನುಕ್ಕು

**ಪ್ರೀತಿಯೈಯುಂ ವಿಳೈವಿತ್ತುಕ್ಕೊಂಡು** - ಅಭಿವೃದ್ಧಿಪಡಿಸಿಕೊಂಡು, **ಸ್ವಯಂ ಪ್ರಯೋಜನಮಾಯಿರುಕ್ಕೈಯಾಲ್** - ಸ್ವತಃ ಪ್ರಯೋಜನವಾಗುತ್ತದೆ ಒಬ್ಬನಿಗೆ ವಿವಾಹಕ್ಕೆ ಲಗ್ನ ನಿಶ್ಚಯಿಸಿದ್ದರೆ, ಇನ್ನು ಎಷ್ಟು ದಿನಗಳಿವೆ ವಿವಾಹಕ್ಕೆ ಎಂದು ಪ್ರತಿಯೊಂದು ದಿವಸವೂ ದಿನಗಳನ್ನು ಎಣಿಸುತ್ತಲೇ ಇರಲಿ, ಎಣಿಸದೇ ಇರಲಿ, ಅಂತೂ ವಿವಾಹವೇನೋ ನಡೆಯುತ್ತದೆ. ಆದರೆ ಈ ದಿವಸಗಳನ್ನೆಣಿಸುವುದರಲ್ಲಿ ಆ ವಿವಾಹೋತ್ಸವ ವಿಷಯದಲ್ಲಿ ಪ್ರೀತ್ಯತಿಶಯವು ಹೇಗೆ ಹೆಚ್ಚುತ್ತದೋ, ಹಾಗೆಯೇ ಈ ಗತಿಚಿಂತನದಿಂದ ಇಂತಹ ನಿರುಪಮವಾದ ಪುರುಷಾರ್ಥವನ್ನು ಸದ್ಯದಲ್ಲೇ ಹೀಗೆ ಹೊಂದುವೆವು ಎಂದು ತೋರಿಬರುವದರಿಂದ, ಪುರುಷಾರ್ಥ ಪ್ರಾಪ್ತಿಯಲ್ಲಿ ಪ್ರೀತ್ಯತಿಶಯವು ಅಭಿವೃದ್ಧಿಯನ್ನು ಹೊಂದುತ್ತದೆ ನಿರುಪಾಧಿಕ ಸಹಜ ಶೇಷಭೂತನಾದ ಈ ಪ್ರಪನ್ನನಿಗೆ ಅತ್ಯರ್ಥಪ್ರಿಯನಾದ ಸರ್ವೇಶ್ವರನಲ್ಲಿಗೆ ಹೋಗುವದು ತುಂಬಾ ಅಪೇಕ್ಷಿತವಾದುದರಿಂದ. ಅಂತಹ ಅಪೇಕ್ಷೆಯನ್ನು ವೃದ್ಧಿಗೊಳಿಸುವದರಲ್ಲಿ ಉಪಯೋಗವಾದುದರಿಂದ, ಸ್ವಯಂ ಪ್ರಯೋಜನವಾದುದೆಂದು ಹೇಳಲ್ಪಟ್ಟಿತು. ಆದುದರಿಂದ ನಿತ್ಯದಲ್ಲೂ ಗತ್ಯನುಸಂಧಾನವು ಆವಶ್ಯಕವೆಂದು ಉಪದೇಶಿಸಲ್ಪಟ್ಟಿತು. ಅರ್ಚಿರಾದಿ ಮಾರ್ಗದಲ್ಲಿ ತನಗುಂಟಾಗುವ ಸತ್ಕಾರಗಳೇನು, ಸ್ವಾಮಿ ಸನ್ನಿಧಿಯು ದೊರೆತ ನಂತರ ತನಗುಂಟಾಗುವ ಭೋಗಗಳೇನು ಇವುಗಳು ತನಗೆ ತಿಳಿಯತಕ್ಕದ್ದು ಆವಶ್ಯಕವೆಂದು ಸ್ಥಾಪಿಸಲ್ಪಟ್ಟಿತು. ಇಷ್ಟೆಲ್ಲಾ ವಿಶದವಾಗಿ ಗತಿವಿಶೇಷವನ್ನೆಲ್ಲಾ ಸಮಗ್ರವಾಗಿ ಎಲ್ಲಿ ಎಲ್ಲಾ ಭರನ್ಯಾಸ ಮಾಡಿದವರು ತಿಳಿದಿರುತ್ತಾರೆ? ಎಂದು ಪ್ರಶ್ನಿಸಿದರೆ ಅಷ್ಟು ಸಂಪೂರ್ಣ ಜ್ಞಾನವಿಲ್ಲದಿದ್ದರೂ ಸಮುದಾಯ ಜ್ಞಾನವಿದ್ದರೂ ಸಾಕು, ಅದರಿಂದಲೂ ಸಿದ್ಧಿಯುಂಟೆಂದು ತಿಳಿಸುತ್ತಾರೆ. ಹೀಗೆ ಒಂದು ವಿಶೇಷಗತಿಯು ಪರಮಾತ್ಮನ ಕೃಪೆಯಿಂದ ಪ್ರಾಪ್ತವಾಗುತ್ತದೆಂದೂ, ಅಲ್ಲಿ ಆತಿವಾಹಿಕರು ಸತ್ಕರಿಸಿ ತನ್ನನ್ನು ಮುಂದಕ್ಕೆ ಕರೆದುಕೊಂಡು ಹೋಗುವರೆಂದೂ, ಅಲ್ಲಿ ಬ್ರಹ್ಮಾಲಂಕಾರಾದಿಗಳು ಪ್ರಾಪ್ತವಾಗುತ್ತದೆಂದೂ, ಅಲ್ಲಿಂದ ಪರಿಪೂರ್ಣ ಬ್ರಹ್ಮಾನುಭವ ಉಂಟೆಂದೂ, ಇಷ್ಟು ಮಾತ್ರ ಸಮುದಾಯ ಜ್ಞಾನದಿಂದಲೂ ಅಪೇಕ್ಷಿತ ಸಿದ್ಧಿಯುಂಟೆಂದು ತಿಳಿಸುತ್ತಾರೆ. ಆದುದರಿಂದ ಇದು ಸ್ವಯಂ ಪ್ರಯೋಜನವಾದುದಾಗುತ್ತದೆಂದು ಹೇಳಲ್ಪಟ್ಟಿರುತ್ತದೆ

**ಅಪೇಕ್ಷಿತಸಿದ್ಧಿರ್ಯುಣ್ಡು. (೧) "ಸಮಾಪಂ ರಾಜಸಿಂಹಸ್ಯ ರಾಮಸ್ಯ ವಿದಿತಾತ್ಮನಃ । ಸಙ್ಕಲ್ಪ ಹಯಸಂಯುಕ್ತೈರ್ಯಾಂತೀಮಿವ ಮನೋರಥೈಃ",**

## ಗತ್ಯನುಸಂಧಾನದ ವಿಷಯದಲ್ಲಿ ಒಂದು ನಿದರ್ಶನವು.

**ಅಗ್ಗೈಯರಾಲ್** - ಹೀಗೆ ಗತ್ಯನುಸಂಧಾನವು ಭರನ್ಯಾಸಕ್ಕೆ ಪೂರ್ವಭಾವಿಯಾಗಿ ಅಧಿಕಾರಸಿದ್ಧಿಗೆ ಉಪಕಾರಕವೆಂದೂ, ಉತ್ತರ ಕಾಲದಲ್ಲಿ ಮೋಕ್ಷಪ್ರಾಪ್ತಿಯಲ್ಲಿ ಪ್ರೀತ್ಯತಿಶಯವನ್ನುಂಟುಮಾಡಿ ಆ ಉತ್ಸವಕಾಲ ಪ್ರತೀಕ್ಷೆಯನ್ನು ಮಾಡುವದಕ್ಕೆ ಉಪಕಾರಕವೆಂದೂ ಒಪ್ಪಿಕೊಂಡ ನಂತರ, **ಇಙ್ಗು** - ಈ ಅರ್ಚಿರಾದಿ ಗತಿವಿಶೇಷ ಚಿಂತನೆಯಲ್ಲಿ, **ಸಮುದಾಯ ಜ್ಞಾನತ್ತಾಲುಮ್** - ವಿಶದವಾದ ಗತಿಕ್ರಮದ ಜ್ಞಾನವಿಲ್ಲದೆ ಒಟ್ಟಿನಲ್ಲಿ ಸ್ವಲ್ಪ ಜ್ಞಾನವಿರುವದರಿಂದಲೂ, **ಇವನುಕ್ಕು** - ಈ ಮುಮುಕ್ಷುವಿಗೆ, **ಅಪೇಕ್ಷಿತ ಸಿದ್ಧಿಯುಂಡು**- ಅಪೇಕ್ಷಿತವಾದುದು ಪ್ರಾಪ್ತವಾಗುತ್ತದೆ. ಅಪೇಕ್ಷಿತವು ಯಾವುದೆಂದರೆ.- ಭರನ್ಯಾಸಾನುಷ್ಠಾನ ಕಾಲದಲ್ಲಿ ಫಲಾಪೇಕ್ಷೆಯ ಮೂಲಕ ಅಧಿಕಾರಸಿದ್ಧಿಗೂ, ಅನಂತರದಲ್ಲಿ ಪುರುಷಾರ್ಥಪ್ರಾಪ್ತಿಯಲ್ಲಿ ಪ್ರೀತ್ಯತಿಶಯವೂ, ಕೊನೆಗೆ ಪರಿಪೂರ್ಣ ಬ್ರಹ್ಮಾನುಭವವೂ ಸಹ. **"ರಾಜಸಿಂಹಸ್ಯ**– ರಾಜಶ್ರೇಷ್ಠನಾದ, **ವಿದಿತಾತ್ಮನಃ** ಸರ್ವವನ್ನೂ ತಿಳಿದ ಮನಸ್ಸುಳ್ಳ, **ರಾಮಸ್ಯ** – ತನ್ನ ಪತಿಯಾದ ಶ್ರೀರಾಮನ, **ಸಮಾಪಮ್**- ಸಮೀಪವನ್ನು, **ಸಙ್ಕಲ್ಪ ಹಯಸಂಯುಕ್ತೈಃ** - ಸಂಕಲ್ಪವೆಂಬ ಕುದುರೆಗಳಿಂದ ಕಟ್ಟಲ್ಪಟ್ಟ, **ಮನೋರಥೈಃ**- ಮನೋರಥಗಳಿಗೆ ಆಶ್ರಯವಾದ ಮನಸ್ಸೆಂಬ ರಥಗಳಿಂದ, **ಯಾಂತೀಮಿವ** - ಹೋದಿರುವಳೋ ಎಂಬ ಹಾಗಿರುವ, **ಸೀತಾಂದದರ್ಶ** - ಸೀತೆಯನ್ನು ರಾವಣನು ಕಂಡನು ಎಂಬುದರೊಂದಿಗೆ ಅನ್ವಯವು. ಸಙ್ಕಲ್ಪವು ಮನಸ್ಸಿಗೆ ಸಂಬಂಧಿಸಿದುದು, ಆದುದರಿಂದ ಸಂಕಲ್ಪಗಳೇ ಕುದರೆಗಳಾದರೆ, ಮನಸ್ಸೆಂಬುದೇ ರಥವೆಂದು ಭಾವಿಸತಕ್ಕದ್ದಾಗಿರುತ್ತದೆ; ಎಂದರೆ ರಾವಣನು ಎದುರಿಗೆ ಬಂದಿದ್ದರೂ ಮನಸ್ಸಿನಿಂದ ತನ್ನ ಪತಿಯನ್ನೇ ಧ್ಯಾನಿಸುತ್ತಾ, ಹೇಗಾದರೂ ಮಾಡಿ ಆತನ ಸನ್ನಿಧಿಗೆ ಹೋಗಿ ಸೇರತಕ್ಕದ್ದೆಂಬುದೇ ಸಂಕಲ್ಪವು, ಇದು ಸಿದ್ಧಿಸುವ ಕ್ರಮ ಹೇಗೆ ಎಂದು ಗತಿಚಿಂತನ ಮಾಡುತ್ತಿದ್ದಳೆಂಬ ಭಾವವು. ಆ ಗತಿ ಹೇಗೆಂದರೆ ಹನುಮಂತನಿಗೆ ತಾನೇ ಹೇಳುತ್ತಾಳೆ. **ಬಲೈಸ್ತು ಸಂಕುಲಾಂ ಕೃತ್ವಾ ಲಂಕಾಂ ಪರಬಲಾರ್ದನಃ । ಮಾಂ ನಯೇದ್ಯದಿಕಾಕುತ್ಸ್ಥಃ ತತ್ತಸ್ಯ ಸದೃಶಂ ಭವೇತ್ ॥**

(೧) ರಾ. ಸುಂದರ. ೧೯. ೭.

**ಎನ್ನುಮ್‌ಪಡಿ ಪಿರಾಟ್ಟಿ ಇರುನ್ದ ವಿರುಪ್ಪು ಇವನುಡೈಯ ಗತ್ಯನುಸಂಧಾನತ್ತುಕ್ಕು ನಿದರ್ಶನಮ್.**

---

ಹೀಗೀಗ ಸಂಕಲ್ಪಿಸಿ, ತನ್ನ ಮನೋರಥವು ಪೂರ್ಣವಾಗಿ ಶ್ರೀರಾಮನ ಸಮೀಪವನ್ನು ಹೊಂದುವೆನೆಂದು ಗತಿಚಿಂತನವನ್ನು ಮಾಡುತ್ತಿದ್ದಾಳೆಂಬ ಭಾವವು. ಆದರೆ ರಥೈಃ ಎಂಬ ಬಹುವಚನ ಹೇಗೆ ಎಂದರೆ, ಅಪೇಕ್ಷೆಯು ಪುನಃ ಪುನಃ ಉಂಟಾಗುವದರಿಂದಲಾಗಲಿ, ಅಥವಾ "ಅದಿತಿಃ ಪಾಶಾನ್" ಎಂಬಲ್ಲಿ ಒಂದು ಪಾಶಕ್ಕೇನೇ ಬಹುವಚನ ಹೇಗೋ ಹಾಗೆ ಎಂದಾಗಲಿ ಭಾವಿಸಬಹುದು. ಮನೋರಥೈಃ ಎಂಬ ಪ್ರಯೋಗವಿಲ್ಲಿರುವದರಿಂದ ಶ್ರೀರಾಮನನ್ನು ಯಾವಾಗ ಹೊಂದುವೆನೋ ಎಂಬ ಮನೋರಥವೇ ಪುನಃ ಪುನಃ ಇವಳಿಗೆ ಉಂಟಾಗುತ್ತಿತ್ತೆಂಬ ಭಾವವು ತೋರಿಬರುತ್ತದೆ. ಹೀಗೆ ಸೀತಾ ಮನಸ್ಸು ಶ್ರೀರಾಮ ಸಮೀಪವನ್ನು ಹೊಂದಿದುದರಿಂದ, ದುಷ್ಯಂತನಲ್ಲೇ ಸಕ್ತವಾದ ಶಕುಂತಲಾ ಮನಸ್ಸು ಹೇಗೆ ದುರ್ವಾಸಾಗಮನವನ್ನು ಹೇಗೆ ಅರಿಯದೇ ಹೋಯಿತೋ ಹಾಗೆ ರಾವಣಾಗಮನವನ್ನು ತಿಳಿಯಲಿಲ್ಲವೆಂಬ ಭಾವವೂ ತೋರಿಬರುತ್ತದೆ. ಶ್ರೀಮದ್ ಸಾರವಿವರಣೆ ವ್ಯಾಖ್ಯಾತೃವೂ ಶ್ರೀಮದ್ ಶಿಟ್ಟಲೂರು ನರಸಿಂಹಾಚಾರ್ಯರವರೂ ಸಹ, ಯಾಂತೀಮಿವ ಮನೋರಥೈಃ ಎಂಬುದಕ್ಕೆ ಮನೋರಥಗಳೆಂಬ ರಥಗಳಿಂದ ಎಂದು ಅರ್ಥ ಮಾಡಿರುತ್ತಾರೆ. ಎನ್ನುಮ್‌ಪಡಿ - ಎಂದು ಹೇಳಿರುವ ಹಾಗೆ, ಪಿರಾಟ್ಟಿ - ಸೀತಾದೇವಿಯು, ಇರುನ್ದ ವಿರುಪ್ಪು - ಅಶೋಕ ವನದಲ್ಲಿದ್ದ ಸ್ಥಿತಿಯು, ಇವನುಡೈಯ ಗತ್ಯನುಸಂಧಾನತ್ತುಕ್ಕು - ಈ ಪ್ರಪನ್ನನ ಅರ್ಚಿರಾದಿ ಗತಿಯ ಅನುಸಂಧಾನಕ್ಕೆ, ನಿದರ್ಶನಮ್ - ಉದಾಹರಣೆಯು. ಸೀತಾದೇವಿಯು ಹೇಗೆ ಅನವರತ ತನ್ನ ಪತಿಯನ್ನು ಧ್ಯಾನಿಸುತ್ತಾ ಇನ್ನೆರಡು ತಿಂಗಳಲ್ಲೇ ಹೋಗಿ ಸೇರಲುಳ್ಳವಳೆಂದು ನಿಷ್ಕರ್ಷೆ ಮಾಡಿಕೊಂಡು ಆ ಪತಿಯು ಬಂದು ಎಂದಿಗೂ ಕರೆದುಕೊಂಡು ಹೋಗದೆ ಇರನೆಂದು ಅದರಲ್ಲೇ ತ್ವರಾತಿಶಯವನ್ನೂ ಪ್ರೀತ್ಯತಿಶಯವನ್ನೂ ಹೇಗೆ ಹೊಂದಿದ್ದಳೋ, ಹಾಗೆಯೇ ಈ ಪ್ರಪನ್ನನೂ ತನಗೂ ಪತಿಯಾದ ಶ್ರಿಯಃಪತಿಯು ಕೃಪೆಗೈಯ್ದು ಸೀತೆಯ ಹಾಗೆ ದುರವಸ್ಥೆಯಲ್ಲಿರುವ ತನ್ನನ್ನು ಈ ದೇಹವೆಂಬ ಲಂಕೆಯಲ್ಲಿ ಮನೋರೂಪ ರಾವಣನ ಬಂಧಕ್ಕೆ ಸಿಲುಕಿರುವ ತನ್ನ ನಿಗಳವನ್ನು ಭೇದಿಸಿ ಅರ್ಚಿರಾದಿ ಗತಿಯನ್ನುಂಟುಮಾಡಿ ತನ್ನ ಪಟ್ಟಣಕ್ಕೆ ಯಾವಾಗ ಕರೆದುಕೊಂಡು ಹೋಗುವನೋ ಎಂದು ನಿತ್ಯವೂ ಚಿಂತಿಸತಕ್ಕದ್ದೆಂಬ ಭಾವವು.

**ನಡೈಪೆರ ವಙ್ಗಿಪ್ಪಗಲೊಳಿನಾಳುತ್ತರಾಯಣ ಮಾ**
**ಣ್ಡಿಡೈವರು ಕಾತ್ತಿರವಿ ಯಿರರ್ವಿಪತಿ ಮಿರ್ವರುಣ್**
**ಕುಡೈಯುಡೈವಾ(ನವರ್) ನೋೕರ್ ಕೋಮಾನ್ ಪಿರಶಾಪತಿಯೆನ್ರಿವರಾಲ್**
**ಇಡೈ ಇಡೈ ಪೋಗಙ್ಗಳೆಯ್ದಿ ಯೆಳಿರ್ಪದಮೇರುವರೇ ॥೨೮॥**

---

ಮೇಲೆ ಹೇಳಿದ ಅರ್ಚಿರಾದಿ ಗತಿ ಪ್ರಕಾರವನ್ನು ಒಂದು ಅಧಿಕಾರ ಸಂಗ್ರಹ ಪಾಶುರದಿಂದ ಉಪದೇಶಿಸುತ್ತಾರೆ:—**ನಡೈಪೆರ** - ದೇಹಾವಸಾನದಲ್ಲಿ ಸ್ಥೂಲ ಶರೀರವನ್ನು ತ್ಯಜಿಸಿದ ನಂತರ ಗಮನವು ಪ್ರಾಪ್ತವಾಗಲಾಗಿ, **ಅಂಗಿ**-ಅಗ್ನಿಯು, **ಪಗಲ್** - ದಿನವು, **ಒಳಿನಾಳ್** - ಪ್ರಕಾಶವಿರುವ ದಿನಗಳೆಂಬುವದರಿಂದ ಶುಕ್ಲ ಪಕ್ಷವು, ಉತ್ತರಾಯಣವು, **ಆಣ್ಡು** - ಸಂವತ್ಸರವು, **ಇಡೈವರುಕಾತ್ತು** – **ಸಂವತ್ಸರಾದಾದಿತ್ಯಂ** ಎಂದು ಹೇಳಿದ್ದರೂ, ಸಂವತ್ಸರಕ್ಕೂ ಆದಿತ್ಯನಿಗೂ ಮಧ್ಯೆ ವಾಯುವಿದ್ದಾನೆಂದು ನಿಷ್ಕರ್ಷಿಸಲ್ಪಟ್ಟ ಹಾಗೆ, ಮಧ್ಯೆ ಇರುವ ವಾಯುವು, **ಇರವಿ** - ಆದಿತ್ಯನು, **ಇರರ್ವಿಪತಿ** - ರಾತ್ರಿಗೆ ಪತಿಯಾದ ನಿಶಾಪತಿ ಎನಿಸುವ ಚಂದ್ರನು, **ಮಿರ್** - ವೈದ್ಯುತನ್, ವರುಣನೂ, **ಕುಡೈಯುಡೈ** - ಏಕಚ್ಛತ್ರಾಧಿಪತಿಯಾದ, **ವಾನೋರ್ ಕೋಮಾನ್** - ದೇವತೆಗಳಿಗೆ ಸ್ವಾಮಿಯಾದ ಇಂದ್ರನು, **ಪಿರಶಾಪತಿ** - ಪ್ರಜಾಪತಿ, ಚತುರ್ಮುಖ ಬ್ರಹ್ಮನು, **ಯೆನ್ರಿವರಾಲ್** - ಎಂಬುವೀ ಆತಿವಾಹಕರುಗಳಿಂದ, **ಇಡೈ ಇಡೈ ಭೋಗಙ್ಗಳೆಯ್ದಿ** - ಮಧ್ಯೇ ಮಧ್ಯೇ ಇವರುಗಳು ಮಾಡುವ ಸತ್ಕಾರರೂಪ ಭೋಗಗಳನ್ನು ಹೊಂದಿ, **ಎಳಿಲ್ ಪದಂ** - ಹೀಗೆ ಒಂದಕ್ಕೊಂದಕ್ಕೆ ಉತ್ಕೃಷ್ಟವಾದ ಗಮನದಲ್ಲಿ ಸಿಕ್ಕುವ ಸ್ಥಾನಗಳನ್ನು ಅಥವಾ "**ಅತ್ಯರ್ಕಾನಿಲದೀಪ್ತಮ್ ತತ್ಸ್ಥಾನಂ ವಿಷ್ಣೋರ್ಮಹಾತ್ಮನಃ**" ಎಂದು ಹೇಳಿರುವ ಹಾಗೆ ದೇದೀಪ್ಯಮಾನವಾಗಿ ಇವೆಲ್ಲಕ್ಕೂ ಸರ್ವೋತ್ಕೃಷ್ಟಪದವಾದ ದಿವ್ಯವೈಕುಂಠವನ್ನು, **ಏರುವರೇ** - ಆರೋಹಣ ಮಾಡುವರು, ಹತ್ತುವರು.

**ತಾತ್ಪರ್ಯ.** ಇಲ್ಲಿ **ನಡೈಪೆರ** ಎಂಬುದರಿಂದ ವಾಗಿಂದ್ರಿಯವು, ಸೂಕ್ಷ್ಮದಶೆಯಲ್ಲಿ ಮನಸ್ಸಿನಲ್ಲೂ, ಮನಸ್ಸು ಪ್ರಾಣದಲ್ಲೂ ಇತ್ಯಾದಿ ಗಮನಗಳೂ, ಅನಂತರ ಪರಮಾತ್ಮನನ್ನು ಬಿಟ್ಟು ಮೂರ್ಧನ್ಯ ನಾಡಿಯ ಮೂಲಕ ದೇಹದಿಂದ ಹೊರಗೆ ಬಂದು, ಗತಿಯು ಪ್ರಾಪ್ತವಾದಾಗ ಎಂಬರ್ಥವು.

**ಇಡೈ ವರುಕಾತ್ತು** - ಮಧ್ಯೆ ಬರುವ ವಾಯುವು ಎಂದು ಏಕೆ ಹೇಳಲ್ಪಟ್ಟಿತೆಂದರೆ, ಛಾಂದೋಗ್ಯದಲ್ಲಿ "ಸಂವತ್ಸರಾದಾದಿತ್ಯಂ" ಸಂವತ್ಸರವಾದ ನಂತರ

**ಪಿತೃ ಪಥ ಘಟೀಯಂತ್ರಾ ರೋಹಾವರೋಹ ಪರಿಭ್ರಮೈ**
**ರ್ನಿರಯಪದವೀ ಯಾತಾಯಾತ ಕ್ರಮೈಶ್ಚ ನಿರಂತರೈಃ।**

ಆದಿತ್ಯನೆಂದು ಹೇಳಲ್ಪಟ್ಟಿರುತ್ತದೆ. ಬೃಹದಾರಣ್ಯಕವಲ್ಲಿ "**ದೇವಲೋಕಾದಾದಿತ್ಯಂ**" ದೇವಲೋಕವಾದ ನಂತರ ಆದಿತ್ಯನೆಂದು ಹೇಳಿರುತ್ತದೆ. ಇನ್ನೊಂದು ಕಡೆಯಲ್ಲಿ ವಾಯುಲೋಕದಿಂದ ಆದಿತ್ಯನೆಂದು ಹೇಳಿರುತ್ತದೆ. ಇವು ಮೂರು ಶ್ರುತಿಗಳಿಗೂ ಸಮನ್ವಯ ಮಾಡಿ ಹೇಳುವದಕ್ಕಾಗಿ "**ವಾಯುಮಬ್ದಾದ ವಿಶೇಷ ವಿಶೇಷಾಭ್ಯಾಮ್**" ಎಂಬ ಸೂತ್ರದ ಮೂಲಕ ವ್ಯಾಸ ಮಹರ್ಷಿಯು ದೇವ ಲೋಕ, ವಾಯುಶಬ್ದಗಳು ಸಮಾನಾರ್ಥ ಉಳ್ಳವುಗಳಾದುದರಿಂದ, ಸಂವತ್ಸರ ವಾದ ನಂತರ ವಾಯುವನ್ನಡತಕ್ಕದ್ದೆಂದು ಹೇಳಿರುತ್ತಾರೆ. ಇಲ್ಲಿ **ಭೋಗಜ್ಞೀಯಾದಿ** ಎಂದು ಹೇಳಿರುವವು ಆತಿವಾಹಿಕರ ಅಪ್ಸರ ಸ್ತ್ರೀಯರುಗಳ ಸತ್ಕಾರಾಲಂಕಾರಾದಿಗಳನುಭವವೂ ಭೋಗವಾಗಿ ತೋರುತ್ತದೆ. ಆದರೆ ಈ ಅನುಭವವು ಯಾವುದೂ ಶ್ರೀ ಪರವಾಸುದೇವ ಸನ್ನಿಧಿಯಲ್ಲಿ ಉಂಟಾಗುವ ಭೋಗಕ್ಕೆ ಸಮಾನವಾಗದು. ಆದುದರಿಂದ ಅದನ್ನು, ಎಳಿಲ್ **ಪದಮ್** - ಸರ್ವಸಮೃದ್ಧಿಯುಳ್ಳ ಪದವೆಂದು ಹೇಳಿರುತ್ತದೆ. **ಈ ಎಳಿಲ್ ಪದಮ್ ಏರುವರೇ** ಎಂದು ಹೇಳಿರುವದರಿಂದ ಮುಂದೆ ಅನುಗ್ರಹಿಸುವ ಪರಿಪೂರ್ಣ ಬ್ರಹ್ಮಾನುಭವಾಧಿಕಾರವನ್ನು ಸೂಚಿಸಿದ ಹಾಗಾಯಿತು.

ಪ್ರಪನ್ನನಿಗೇನೋ ಅರ್ಚಿರಾದಿ ಮಾರ್ಗವೆಂದು ಹೇಳಲ್ಪಟ್ಟಿತು. ಹಾಗಾದರೆ ಪ್ರಪನ್ನರಲ್ಲದವರಿಗೆ ಯಾವ ಮಾರ್ಗವೆಂಬುವ ಪ್ರಶ್ನೆಯು ನ್ಯಾಯವಾಗಿ ತೋರಿ ಬರುವದರಿಂದ ಆ ಮಾರ್ಗ ಯಾವುವೆಂಬುದನ್ನು ತಿಳಿಸಿ, ಈ ಎರಡು ಮಾರ್ಗಗಳಿಗೂ ಇರುವ ವೈಲಕ್ಷಣ್ಯವನ್ನು ಈ ಶ್ಲೋಕದ ಮೂಲಕ ತೋರಿಸಿ ಅಧಿಕಾರ ಸಮಾಪ್ತಿಯನ್ನು ಮಾಡುತ್ತಾರೆ:—ಈತನೇನೋ ಈಗ ಪ್ರಪನ್ನನು; "**ಬಹೂನಾಂ ಜನ್ಮನಾಮನ್ತೇ**" ಎಂಬಲ್ಲಿ ಹೇಳಿರುವ ಹಾಗೆ ಸೃಷ್ಟಿ ಮೊದಲ್ಗೊಂಡು ಇದುವರೆಗೂ ಅನೇಕ ಜನ್ಮಸಂತತಿಗಳು ಈತನಿಗೆ ಕಳೆದುಹೋದವು. ಹೀಗೆ ಅನೇಕ ಸಾರಿ ಮರಣಪ್ರಾಪ್ತಿಯಾದಾಗೆಲ್ಲಾ ಯಾವ ಮಾರ್ಗದಲ್ಲಿ ಹೋಗಿ ಪುನಃ ಪುನಃ ಜನ್ಮವನ್ನು ಎತ್ತಿದ್ದಾಯಿತೆಂದರೆ ತಿಳಿಸುತ್ತಾರೆ:—**ಪಿತೃ ಪಥ ಘಟೀಯಂತ್ರಾರೋಹಾವರೋಹ ಪರಿಭ್ರಮೈಃ, ಪಿತೃಪಥ** - ಪುನಃಪುನಃ ಜನನ ಮರಣಾದಿಗಳನ್ನು ಕೊಡುವ ಮಾರ್ಗಕ್ಕೆ **ಪಿತೃಪಥ** ಎಂದರೆ ಪಿತೃಯಾಣ ಅಥವಾ ಧೂಮಾದಿ ಮಾರ್ಗವೆಂದು ಹೆಸರು, ಆ ಮಾರ್ಗವೆಂಬ, **ಘಟೀ ಯಂತ್ರ** -

**ಅಧಿಗತ ಪರಿಶ್ರಾನ್ತೀ ನಾಜ್ಞಾಧರೈರತಿವಾಹ್ಯ ನ**
**ಸ್ಸುಖಯತಿ ನಿಜಚ್ಛಾಯಾದಾಯೀ ಸ್ವಯಂ ಹರಿಚಂದನಃ ॥**

**ಇತಿ ಕವಿತಾರ್ಕಿಕಸಿಂಹಸ್ಯ ಸರ್ವತಂತ್ರಸ್ವತಂತ್ರಸ್ಯ ಶ್ರೀಮದ್ವೇಙ್ಕಟನಾಥಸ್ಯ ವೇದಾನ್ತಾಚಾರ್ಯಸ್ಯ ಕೃತಿಷು ಶ್ರೀಮದ್ರಹಸ್ಯತ್ರಯಸಾರೇ ಗತಿಚಿನ್ತನಾಧಿಕಾರ ಏಕವಿಂಶಃ.**

**ಶ್ರೀಮತೇ ನಿಗಮಾನ್ತ ಮಹಾದೇಶಿಕಾಯನಮಃ.**

---

ನೀರೆತ್ತುವ ಯಾತದ, **ಆರೋಹಾವರೋಹ** - ಭಾವಿಯ ಮೇಲಕ್ಕೆ ಹತ್ತುವದು ಇಳಿಯುವದು, ಇವುಗಳ, **ಪರಿಭ್ರಮೈಃ** - ಸುತ್ತೋಣದಿಂದಲೂ, ಎಂದರೆ ಸ್ವರ್ಗಾರೋಹಣ ಮಾಡುವದು, ಅನಂತರ ಈ ಲೋಕಕ್ಕೇ ಪುನಃ ಇಳಿಯುವದು ಹೀಗೆ ಸುಮ್ಮನೆ ಅಲೆಯುವದರಿಂದಲೂ. ಮತ್ತು, **ನಿರಯ ಪದವೀ ಯಾತಾ ಯಾತ ಕ್ರಮೈಶ್ಚ** - ನರಕಲೋಕಕ್ಕೆ ಹೋಗುವದೇನು, ಪುನಃ ಬರುವದೇನು, ಈ ಕ್ರಮಗಳಿಂದಲೂ ಕೂಡ, **ಅಧಿಗತ ಪರಿಶ್ರಾನ್ತೀನ್** - ಹೊಂದಿದ ಆಯಾಸವುಳ್ಳ, **ನಃ** - ನಮ್ಮನ್ನು, ಆಜ್ಞಾಧರೈಃ - ಸತ್ಕರಿಸಿ ಮಾರ್ಗ ತೋರಿಸತಕ್ಕದ್ದೆಂಬ ಶ್ರೀ ಹರಿಯ ಆಜ್ಞೆಯನ್ನು ವಹಿಸಿರುವ, ಅರ್ಚಿಯೇ ಮೊದಲಾದ ಆತಿವಾಹಿಕರ ಮೂಲಕವಾಗಿ, **ಅತಿವಾಹ್ಯ** – ಸತ್ಕಾರಪೂರ್ವಕವಾಗಿ ಲೀಲಾವಿಭೂತಿಯನ್ನು ದಾಟಿಸುವ ಹಾಗೆ ಮಾಡಿ, **ಹರಿಚಂದನಃ** - ಶ್ರೀಹರಿ ಎಂಬ ಚಂದನವೃಕ್ಷವು, **ಸ್ವಯಂ** - ತಾನೇ, **ನಿಜಚ್ಛಾಯಾದಾಯೀ** - ಸ್ವಕೀಯವಾದ ನೆರಳನ್ನು ಕೊಟ್ಟು, ತನಗೆ ಇವರು ಛಾಯೆಯೋ ಎಂದು ತೋರುವ ಹಾಗೆ ತನ್ನ ಸಾಮ್ಯವನ್ನೂ ಕೊಟ್ಟು ಎಂದು ಇನ್ನೊಂದರ್ಥವು, **ಸುಖಯತಿ** - ಕೈಂಕರ್ಯ ಪ್ರಾಪ್ತಿ ಪರಿಪೂರ್ಣ ಬ್ರಹ್ಮಾನುಭವರೂಪ ಪರಮಾನಂದವನ್ನು ಕೊಟ್ಟು ಭೋಗಪಡಿಸುವನು.

**ತಾತ್ಪರ್ಯ :—** ಈ ಪ್ರಪನ್ನರ ಅರ್ಚಿರಾದಿ ಮಾರ್ಗಕ್ಕೆ ದೇವಯಾನವೆಂಬುದು ಇನ್ನೊಂದು ಹೆಸರು. ಹಾಗೆಯೇ ಪ್ರಪನ್ನರಲ್ಲದವರ ಇನ್ನೊಂದಾದ ಧೂಮಾದಿ ಮಾರ್ಗಕ್ಕೆ ಪಿತೃಯಾಣವೆಂದೂ ಹೆಸರು. ಈ ಪಿತೃಯಾಣ ಕ್ರಮದಲ್ಲಿ ಆವರ್ತಿಯುಂಟು, ದೇವಯಾನದಲ್ಲಿ ಆವರ್ತಿಯಿಲ್ಲವು. ಪಿತೃಯಾಣಕ್ರಮವು ಛಾಂದೋಗ್ಯ ೫. ೧೦. ೩, ೪. ೫. ೬ ಗಳಲ್ಲಿ ಹೇಳಲ್ಪಟ್ಟಿರುತ್ತದೆ ಯಾರು ಅಗ್ನಿಹೋತ್ರಾದಿ ಕರ್ಮವನ್ನಾಗಲಿ, ವಾಪೀ ಕೂಪ ತಟಾಕದ ನಿರ್ಮಾಣವನ್ನಾಗಲಿ, ಪಾತ್ರವರಿತು ದಾನಾದಿಗಳನ್ನಾಗಲಿ ಆಚರಿಸುವರೋ ಅವರು ಧೂಮಾದಿ ಆತಿವಾಹಕರನ್ನು ಹೊಂದುವರು ; ಅವರು ಯಾರೆಂದರೆ :—ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ ಮಾಸ, ಅಲ್ಲಿಂದ ಸಂವತ್ಸರಾಭಿಮಾನ ದೇವತೆಯನ್ನು ಹೊಂದುವದಿಲ್ಲವು, ದಕ್ಷಿಣಾಯನ ಮಾಸಗಳಿಂದ ಪಿತೃಲೋಕ, ಅಲ್ಲಿಂದ ಕ್ರಮವಾಗಿ, ಆಕಾಶ, ಚಂದ್ರನು, ಇವರುಗಳಿಂದ ಸತ್ಕರಿಸಲ್ಪಟ್ಟು, ಸ್ವರ್ಗಭೋಗಕ್ಕೆ ಯೋಗ್ಯವಾದ

ದಿವ್ಯದೇಹವನ್ನು ಹೊಂದುವನು, ಅಲ್ಲಿದ್ದು ಅಲ್ಲಿಂದ ಅನಂತರ ಕರ್ಮಶೇಷವಿರುವದರಿಂದ ಪುನಃ ಅದೇ ಮಾರ್ಗದಲ್ಲೇ ಹಿಂತಿರುಗಿ ಬರುವನು. ಚಂದ್ರನಿಂದ ಆಕಾಶವೂ, ಆಕಾಶದಿಂದ ವಾಯುವೂ, ವಾಯುವಿನಿಂದ ಧೂಮದ ಹಾಗೂ, ಅಭ್ರದ ಹಾಗೂ, ಮೇಘದ ಹಾಗೂ ಆಗಿ, ಅನಂತರ ವರ್ಷಿಸುವ ಹಾಗೆ ಆಗಿ, ಇದರಿಂದ ಭೂತಸೂಕ್ಷ್ಮಯುಕ್ತನಾಗಿ ಭೂಮಿಯಲ್ಲಿ ಇದ್ದು, ನೆಲ್ಲೋ, ಗೋಧಿಯೋ, ಸಸ್ಯವೋ, ಎಳ್ಳೋ, ಉದ್ದೋ ಯಾವುದರಲ್ಲೋ ಸೇರುತ್ತಾನೆ. ಅದರ ಸೇವನೆಯಿಂದ ಪಿತಾವಿನ ರೇತಸ್ಸನ್ನು ಹೊಂದಿ, ತಾಯಿಯಾದ ಯೋಷಿದ್ಗರ್ಭದಲ್ಲಿ ಸ್ಥೂಲಶರೀರಕನಾಗುತ್ತಾನೆ ಒಳ್ಳೇ ಕರ್ಮಶೇಷವಿದ್ದರೆ ಬ್ರಾಹ್ಮಣಾದಿ ಒಳ್ಳೇ ಯೋನಿಗಳಲ್ಲಿ ಹುಟ್ಟುವನು. ಕೆಟ್ಟ ಕರ್ಮಶೇಷವಿದ್ದರೆ ನಾಯಿ ಯೋನಿಯನ್ನೋ, ಸೂಕರ ಯೋನಿಯನ್ನೋ, ಚಂಡಾಲ ಯೋನಿಯನ್ನೋ, ಹೊಂದುವನೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ. ಹೀಗೆ ಯಜ್ಞಾದಿ ಧರ್ಮ ಕೆಲಸಗಳನ್ನು ಮಾಡಿದವರು ಸ್ವರ್ಗಾರೋಹಣ ಮಾಡಿ, ಅದು ತೀರಿದ ನಂತರ ಪುನಃ ಇಲ್ಲಿಗೇನೇ "**ಕ್ಷೀಣೇಪುಣ್ಯೇ ಮರ್ತ್ಯಲೋಕಂ ವಿಶನ್ತಿ**" ಎಂದು ಹೇಳಿರುವ ಹಾಗೆ ಅವರೋಹಣ ಮಾಡಿ ಬರುವದರಿಂದ, **ಪಿತೃಪಥದ ಆರೋಹಾವರೋಹ ಪರಿಭ್ರಮೈಃ** ಎಂದು ಪ್ರಯೋಗಿಸಲ್ಪಟ್ಟಿತು; ಹತ್ತುವದು ಇಳಿಯುವದು ಹೀಗೆ ಪರಿಭ್ರಮವಿರುವದರಿಂದ ಈ ಪಿತೃಪಥವನ್ನು ಘಟೀಯಂತ್ರದ ಹತ್ತುವಿಕೆ ಇಳಿಯುವಿಕೆಗೆ ಹೋಲಿಸಿರುತ್ತಾರೆ. ಶ್ರೀ ಶಂಕರ ಭಾಷ್ಯದಲ್ಲೂ ಆನಂದಗಿರಿ ಟೀಕಿನಲ್ಲೂ ಸಹ ಈ ದೇವಯಾನದ ಆರೋಹಾವರೋಹಗಳನ್ನು ಘಟೀಯಂತ್ರದ ಆರೋಹಾವರೋಹಗಳಿಗೆ ಹೋಲಿಸಿರುತ್ತಾರೆ. ಶರಣಾಗತಿಯನ್ನನುಷ್ಠಿಸಿದರೆ ಅಥವಾ ಯೋಗದಿಂದ ಪರಬ್ರಹ್ಮ ಸಾಕ್ಷಾತ್ಕಾರವಾದರೆ ಅರ್ಚಿರಾದಿ ಗತಿಯೂ, ಪುಣ್ಯ ಮಾಡಿದರೆ ಧೂಮಾದಿ ಗತಿಯೂ ಎಂದು ಹೇಳಲ್ಪಟ್ಟಿತು. ಆದರೆ ಇಲ್ಲಿ ಒಂದು ಸಂಶಯವು ಪ್ರಾಪ್ತವಾಗಬಹುದು. ಏನೆಂದರೆ, ಪುಣ್ಯ ಮಾಡಿದವನಿಗೆ ಧೂಮಾದಿ ಗತಿಯು ಪ್ರಾಪ್ತವಾಗಿ ದ್ಯುಲೋಕ ಪ್ರಾಪ್ತಿಯುಂಟಾಗುವದರಿಂದ ಪ್ರಪನ್ನನು ಪುಣ್ಯವನ್ನು ಮಾಡಕೂಡದು ಎಂಬ ಶಙ್ಕೆ ಉಂಟಾಗಬಹುದು ಫಲಾಪೇಕ್ಷೆಯಿಂದ ಪುಣ್ಯ ಮಾಡಿದವನಿಗೀಗ ಈ ಮಾರ್ಗವು ಫಲಸಙ್ಗ ತ್ಯಾಗ, ಕರ್ತೃತ್ವ ತ್ಯಾಗಾದಿಗಳಿಂದ ಪ್ರಪನ್ನನು ಪುಣ್ಯ ಕರ್ಮಗಳನ್ನು ಮಾಡಿದರೆ ಪ್ರತ್ಯವಾಯವಿಲ್ಲವು. ಈ ತತ್ವವು ಹಿಂದೆಯೇ ಅಪರಾಧ ಪರಿಹಾರಾಧಿಕಾರದಲ್ಲಿ ಉಪಪಾದಿಸಲ್ಪಟ್ಟಿರುತ್ತದೆ. ಇನ್ನು ಪಾಪ ಮಾಡಿದರೆ ಯಾವಗತಿ ಎಂದರೆ ಮೂರನೇ ಗತಿ ಎಂದು ಅದೇ ಛಾಂದೋಗ್ಯದ ೫, ೧೦, ೮ ರಲ್ಲಿ ಹೇಳಲ್ಪಟ್ಟಿರುತ್ತದೆ ಇದರಿಂದ ದಂಶ ಮಶಕ ಕೀಟಾದಿ ಕ್ಷುದ್ರ ಜನ್ಮಗಳು ಪ್ರಾಪ್ತವಾಗಿ ಪುನಃ ಪುನಃ "**ಜಾಯಸ್ವ ಮ್ರಿಯಸ್ವ**" ಎಂದು ಹೇಳಿರುವ ಹಾಗೆ ಜನನ ಮರಣಾದಿಗಳು ಉಂಟಾಗುತ್ತವೆ.

ಅನಂತರ ೯ನೆಯ ವಾಕ್ಯದಲ್ಲಿ ಚಿನ್ನವನ್ನು ಕದಿಯುವವನು, ಹೆಂಡವನ್ನು

ಕುಡಿಯುವವನು, ಗುರುತಲ್ಪಗಾಮಿಯು, ಬ್ರಹ್ಮಘಾತುಕನು ಇಂತಹ ಪಾಪ ಮಾಡಿದವರು ನರಕವನ್ನು ಹೊಂದುವರು ಎಂದು ಹೇಳಿರುತ್ತದೆ. ಹಾಗೆಯೇ ಇನ್ನು ಮಿಕ್ಕ ಕಡೆಗಳಲ್ಲಿ ಶಾಸ್ತ್ರದಲ್ಲಿ ನರಕಪತನವು ಹೇಳಲ್ಪಟ್ಟಿರುತ್ತದೆ. ಇದನ್ನು ಮನಸ್ಸಿನಲ್ಲಿಟ್ಟೇ **ನಿರಯ ಪದವೀ ಯಾತಾ ಯಾತ ಕ್ರಿಮ್ಯೈ ರ್ನಿರಂತರೈಃ** ಎಂದು ಪ್ರಯೋಗಿಸಿರುತ್ತಾರೆ.

ಸೃಷ್ಟಿ ಮೊದಲು ಇದುವರೆಗೂ ನಾವುಗಳು ಲೆಖ್ಖವಿಲ್ಲದೆ ಜನ್ಮಗಳನ್ನೆತ್ತುತ್ತಿರುವದರಿಂದ ಅರ್ಚಿರಾದಿ ಗತಿಯನ್ನು ಇನ್ನೂ ಹೊಂದಿಲ್ಲವೆಂಬುದು ಸುವ್ಯಕ್ತವು. ಏತಕ್ಕೆಂದರೆ ಆ ಮಾರ್ಗದಲ್ಲಿ ಹೋಗಿದ್ದರೆ ಪುನರಾವರ್ತಿಯು ಇಲ್ಲವು ಎರಡನೆಯ ಪಿತೃಯಾಣದಲ್ಲಿ ಹೋಗಿ ಸ್ವರ್ಗಲೋಕದಲ್ಲಿದ್ದು ಹಿಂತಿರುಗಿ ಕೆಳಗಿಳಿದು ಬಂದಿದ್ದರೂ ಬಂದಿರಬಹುದು. ಘಟೀ ಯಂತ್ರವು ಮೇಲಕ್ಕೂ ಕೆಳಕ್ಕೂ ಓಡಾಡುವ ಹಾಗೆ, ಹತ್ತಿ ಇಳಿದು ಹೀಗೆ ಆಯಾಸವನ್ನು ಹೊಂದಿರಬಹುದು ಅಥವಾ ಅನೇಕ ಘೋರಪಾಪಗಳನ್ನು ಮಾಡಿ ನರಕದಲ್ಲಿ ಬಿದ್ದು, ಯಾತನೆಗಳನ್ನನುಭವಿಸಿ ಬಂದಿರಬಹುದು. ಈ ಅಭಿಪ್ರಾಯಗಳನ್ನೇ ಪರಾಶರರು "**ಅನೇಕ ಜನ್ಮ ಸಾಹಸ್ರೀಂ ಸಂಸಾರ ಪದವೀಂ ವ್ರಜನ್ । ಮೋಹಾಚ್ಛ್ರಮಂ ಪ್ರಯಾತಾಸೌ ವಾಸನಾ ರೇಣು ಕುಂಠಿತಃ ॥**" ಎಂಬ ಶ್ಲೋಕದಲ್ಲಿ ಬಹು ಚೆನ್ನಾಗಿ ಹೇಳಿರುತ್ತಾರೆ. (ವಿ. ಪು ೬. ೭. ೧೯) ಇದರರ್ಥ ಮತ್ತು ಉಪಪಾದನೆಗೆ ಉಪೋದ್ಘಾತಾಧಿಕಾರದ ೧೫೩—೪ನೆಯ ಪುಟಗಳನ್ನು ನೋಡಿ. ಹೀಗೆ ಅಧಿಗತ ಪರಿಶ್ರಾನ್ತರಾಗಿ, ಬಹಳ ಆಯಾಸಪಟ್ಟು ಬೆಂದು ಬಳಲಿರಬಹುದು ಇದನ್ನೆಲ್ಲಾ ಆ ಕೃಪಾಸಾಗರನು ಮನಸ್ಸಿನಲ್ಲಿಟ್ಟು ಯಾವಾಗ ನಾವು ನಿಮ್ಮವರು ಎಂದು ಯಾಚಿಸಿ ಶರಣಾಗತಿಯನ್ನು ಅನುಷ್ಠಿಸಿದೆವೋ, ಆಗ ಸಂತೋಷಯುಕ್ತನಾಗಿ "**ಲೋಚನಾಭ್ಯಾಂ ಪಿಬನ್ನಿವ**" (ರಾ. ಯುದ್ಧಕಾಂಡ ೧೮ ) ಎಂದು ಹೇಳಿರುವ ಹಾಗೆ ಕೃಪಾಕಟಾಕ್ಷದಿಂದವಲೋಕಿಸಿ, ಅಂತಿಮ ಸ್ಮರಣೆ, ಸುಖನಿರ್ಯಾಣ, ಮೂರ್ಧನ್ಯ ನಾಡಿ ಪ್ರವೇಶ, ಅರ್ಚಿರಾದಿ ಗತಿಗಳನ್ನುಂಟುಮಾಡಿ, **ಆಜ್ಞಾಧರೈಃ ಅತಿವಾಹ್ಯ**, ಸರ್ವೇಶ್ವರಾಜ್ಞೆಯನ್ನು ಶಿರಸಾ ವಹಿಸಿರುವ ಹನ್ನೆರಡು ಆತಿವಾಹಿಕರಿಂದಲೂ ಸತ್ಕರಿಸಲ್ಪಟ್ಟವರಾಗಿ, ಸ್ವಸ್ವರೂಪಾವಿರ್ಭಾವ ಉಂಟಾಗುವದರ ಮೂಲಕವಾಗಿ, **ನಿಜಚ್ಛಾಯಾದಾಯಿಪಾ** ಎಂಬಲ್ಲಿ ಹೇಳಿರುವ ಹಾಗೆ ಶ್ರಿಯಃಪತಿಗೆ ಸಮಾನಭಾವವನ್ನು ಹೊಂದುತ್ತಾರೆ "**ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯ ಮುಪೈತಿ**" ಎಂದು ಶ್ರುತಿಯು ಹೇಳುತ್ತದೆ. ಬಹುದೂರ ನಡೆದು ಆಯಾಸದಿಂದ ಬಳಲಿದವರಿಗೆ ಶೈತ್ಯೋಪಚಾರವೂ ವೃಕ್ಷದ ನೆರಳಿನಲ್ಲಿರೋಣವೂ ಆಪ್ಯಾಯನವು. ಹೀಗೆ ಆಯಾಸಪಟ್ಟವರಿಗೆ ಶೈತ್ಯೋಪಚಾರಗಳನ್ನು ಮಾಡುವದಕ್ಕಾಗಿ ಆತಿವಾಹಿಕರನ್ನೂ ಅಪ್ಸರಸ್ಸುಗಳನ್ನೂ ಶ್ರಿಯಃಪತಿಯು ನೇಮಿಸಿರುವದಲ್ಲದೆ, ತಾನೇ "**ಬ್ರಹ್ಮತರು**" ವಾಗಿ ಆಶ್ರಿತರಿಗೆ ನೆರಳನ್ನು ಕೊಟ್ಟು ಕಾಪಾಡುವನೆಂದು ಹೇಳಲ್ಪಟ್ಟಿರು

**ತ್ತ**ದೆ. ಹಾಗೆಯೇ ತಾರೆಯು "**ನಿವಾಸವೃಕ್ಷಸ್ಸಾಧೂನಾಂ ಆಪನ್ನಾನಾಂ ಪರಾಗತಿಃ**" ಎಂದು ಹೇಳಿರುತ್ತಾಳೆ. ಆದರೆ ಶ್ರೀ ದೇಶಿಕರವರು ಶ್ರೀ ಹರಿಯನ್ನು ಸಾಮಾನ್ಯವೃಕ್ಷಕ್ಕೆ ಹೋಲಿಸಲಿಲ್ಲವು **ನಿಜಚ್ಛಾಯೆ**ಯನ್ನೀಯುವ ಶ್ರೀ ಹರಿ ಎಂಬ ಚಂದನವೃಕ್ಷವೆಂದು ಹೇಳುತ್ತಾರೆ. ಈ ವೃಕ್ಷವು, ತಾಪತ್ರಯಗಳು ಇನ್ನು ಮುಂದಕ್ಕೆ ಇಲ್ಲದಹಾಗೆ ಮಾಡುವದಲ್ಲದೆ, **ಸರ್ವಗಂಧಸ್ಸರ್ವರಸಃ** (ಛಾಂ ३ ೧೪. ४) ಶ್ರೀಯಃಪತಿಯಲ್ಲಿ ಅಪ್ರಾಕೃತವಾದ ಸ್ವಾಸಾಧಾರಣವಾದ ನಿರವದ್ಯವಾದ ನಿರತಿಶಯವಾದ ಕಲ್ಯಾಣತನುವಾದ ಭೋಗ್ಯಭೂತವಾದ ಸರ್ವವಿಧಗನ್ಧರಸಗಳು ಇವೆ ಎಂದು ಶ್ರುತಿಪ್ರತಿಪಾದ್ಯವಾದುದರಿಂದ, ಆತನು ಸರ್ವವಿಧಭೋಗಾನಂದಗಳನ್ನು ಕಲ್ಪಿಸುವನೆಂಬರ್ಥವು. "**ರಸೋವೈಸಃ ಆನಂದಯಾತಿ**" ಎಂದು ಮೇಲೆ ಉದಾಹರಿಸಿರುವ ತೈತ್ತರೀಯವಾಕ್ಯವು ನಿರತಿಶಯಾನಂದವನ್ನು ಕಲ್ಪಿಸುವನೆಂದು ಹೇಳುವದರಿಂದ ಚಂದನವೃಕ್ಷರೂಪಕವು ತುಂಬಾ ಸಮಂಜಸವಾದುದು. "**ವಾಸುದೇವತರುಚ್ಛಾಯಾ ನಾತಿಶೀತಾ ನಘರ್ಮದಾ । ನರಕಾಂಗಾರ ಶಮನೀ ಸಾಕಿಮರ್ಥಂ ನಸೇವ್ಯತೇ**" ಹೀಗೆ ಸರ್ವತಾಪನಿವಾರಕವಾಗಿಯೂ, ಪರಮ ಸುಖದಾಯಿಕವಾಗಿಯೂ ಭೋಗ್ಯಭೂತವಾಗಿಯೂ, ನರಕತಾಪಭಯವಿಲ್ಲದುದಾಗಿಯೂ ಇರುವ ಈ ವಾಸುದೇವವೆಂಬ ವೃಕ್ಷದ ನೆರಳನ್ನು ಈ ಮೂಢ ಮನುಜರು ಏಕೆ ಸೇವಿಸುವದಿಲ್ಲವೋ ? ಎಂದು ಹೇಳಲ್ಪಟ್ಟಿರುವದು ಇಲ್ಲಿ ಅನುಸಂಧೇಯವು.

ಹೀಗೆ ತನ್ನ ನಿರ್ಹೇತುಕ ಕೃಪೆಯಿಂದ ಪ್ರಪನ್ನನಿಗೆ ಅತಿವಾಹಿಕರ ಮೂಲಕ ಸತ್ಕಾರಗಳನ್ನುಂಟುಮಾಡಿ, ಬ್ರಹ್ಮಾಲಂಕಾರಮಾಡಿಸಿ, ಸ್ವಸ್ವರೂಪಾವಿರ್ಭಾವಮೂಲಕ ತನಗೆ ಸಮವಾದ ಭಾವವನ್ನುಂಟು ಮಾಡಿ, ಪರಮ ಭೋಗ್ಯನಾಗಿ ಪರಿಪೂರ್ಣ ಬ್ರಹ್ಮಾನುಭವ ರೂಪಾನಂದವನ್ನು ಕೊಟ್ಟು ಆತನು ಮಾಡುವ ಕೈಂಕರ್ಯಗಳನ್ನು ತಾನೂ ಸ್ವೀಕರಿಸಿ, ಹೀಗೆ **ಸುಖಯತಿ**, ಸುಖ ಪಡಿಸುವನೆಂದು ಹೇಳಿರುತ್ತಾರೆ. ಈ ಸುಖವೇ ಸುಖವು, ಮಿಕ್ಕಿದ್ದೆಲ್ಲವೂ ನರಕತುಲ್ಯವೆಂದೂ, ಇದಕ್ಕೆ ಹೋಲಿಸಿದರೆ, "**ಏತೇವೈ ನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ**" ಎಂದು ಹೇಳಿರುವ ಹಾಗೆ ಭಯನಿದಾನವೆಂದೂ, ಇದೊಂದೇ ಅಭಯರೂಪವೆಂದೂ ತಿಳಿಸುವದಕ್ಕಾಗಿ **ಸುಖಯತಿ** ಎಂಬ ಪ್ರಯೋಗವು. ಆ ಸುಖವು ಎಂಥಾದ್ದೆಂದು ವಿಶದವಾಗಿ ತಿಳಿಸುವದಕ್ಕಾಗಿ ಮುಂದಿನ ಪರಿಪೂರ್ಣಬ್ರಹ್ಮಾನುಭವಾಧಿಕಾರವನ್ನು ಪರಮಕೃಪಯಾ ಉಪದೇಶಿಸುತ್ತಾರೆ.

**ಇಂತು ಶ್ರೀಮದ್ರಹಸ್ಯತ್ರಯಸಾರದ ಇಪ್ಪತ್ತೊಂದನೆಯ ಗತಿಚಿನ್ತನಾಧಿಕಾರಕ್ಕೆ ತಿರುನಾರಾಯಣಪುರಂ ವಿಜಯರಾಘವಶರ್ಮನ ಆಚಾರ್ಯ ಹೃದಯಾನ್ವೇಷಿಣೀ ಎಂಬ ಕನ್ನಡ ಅರ್ಥ ತಾತ್ಪರ್ಯಗಳು ಸಮಾಪ್ತವಾದವು**

**ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ.**

ಶ್ರಿಯೈ ನಮಃ
ಶ್ರೀನಿವಾಸಾಯ ನಮಃ
ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ



ಶ್ರೀಮನ್ನಿಗಮಾನ್ತ ಮಹಾದೇಶಿಕ ವಿರಚಿತ

**ಶ್ರೀಮದ್ರಹಸ್ಯತ್ರಯಸಾರೇ**

# ಪರಿಪೂರ್ಣ ಬ್ರಹ್ಮಾನುಭವಾಧಿಕಾರಃ. ೨೨

**ವಿತಮಸಿ ಪದೇ ಲಕ್ಷ್ಮೀಕಾಂತಂ ವಿಚಿತ್ರ ವಿಭೂತಿಕಂ ।**
**ಸಚಿವ ಗಣಿತ ಸ್ಸಂಪದ್ವ್ಯಾಪಿರ್ಭವತ್ಸಜಾಕೃತಿಃ ।**

---

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ

---

**ಈ** ಅಧಿಕಾರದಲ್ಲಿ ಅರ್ಚಿರಾದಿಗತಿಯ ಮೂಲಕ ಆತಿವಾಹಿಕ ಸತ್ಕಾರವೂ, **ಅಪ್ಸರಸ್ಸಿನಿಂದ** ಬ್ರಹ್ಮಾಲಂಕಾರವೂ ಉಂಟಾಗಿ ವೈದ್ಯುತನ ಮೂಲಕ ಪರವಾಸುದೇವ ಪ್ರಾಪ್ತಿಯುಂಟಾದ ಮುಕ್ತನಿಗೆ ಲಭಿಸುವ ಪರಿಪೂರ್ಣ ಬ್ರಹ್ಮಾನುಭವದ ಸ್ವರೂಪವೆಂಥಾದ್ದೆಂಬುವದನ್ನು ತಿಳಿಸುತ್ತಾರೆ ಈ ಅಧಿಕಾರಕ್ಕೆ ಹೀಗೆ ಏಕೆ ಹೆಸರೆಂಬುವದನ್ನು ಉಪಪಾದನೆಯು ಪ್ರಥಮ ವಾಕ್ಯದಲ್ಲೇ ತಿಳಿಸುವದರಿಂದ ಇಲ್ಲಿ ಹೇಳುವದು ಅನಾವಶ್ಯಕವು.

**ಅರ್ಥ—ವಿತಮಸಿಪದೇ**-ತಮೋಗುಣಕ್ಕೆ ಆಕರವಿಲ್ಲದ ದಿವ್ಯ ವೈಕುಂಠದಲ್ಲಿ ಯಾವಾಗ ತಮೋಗುಣ ಹೇಳಲ್ಪಟ್ಟಿತೋ, ಆವಾಗ ರಜೋಗುಣವೂ, ಇವುಗಳಿಂದ ಕೂಡಿದ ಸತ್ವಗುಣವೂ ಸಹ ಇಲ್ಲವೆಂದು ಹೇಳಿದಂತಾಯಿತು. ಇದು ಹಾಗಾದರೆ ಎಂಥಾದ್ದೆಂದರೆ ಶುದ್ಧ ಸತ್ವಮಯವಾದುದೆಂಬ ಭಾವವು. ಅಂಧಕಾರವೆಂಬುದೇ ಇಲ್ಲದೆ ಸದಾ ಸ್ವಯಂ ಪ್ರಕಾಶವಾದ ದಿವ್ಯ ವೈಕುಂಠದಲ್ಲಿ, **ವಿಚಿತ್ರವಿಭೂತಿಕಂ-**

**ಸ್ಫುಟತದ ಪೃಥಕ್ಸಿದ್ಧಿ ಸ್ಸಿಧ್ಯದ್ಗುಣಾಷ್ಟಕ ತತ್ಫಲೋ**
**ಭಜತಿ ಪರಮಂ ಸಾಮ್ಯಂ ಭೋಗೇ ನಿವೃತ್ತಿ ಕಥೋಜ್ಝಿತಮ್ ॥೪೭॥**

ಆಶ್ಚರ್ಯಕರವಾದ ನಿಯಾಮ್ಯವರ್ಗಗಳನ್ನು ಹೊಂದಿರುವ, **ಲಕ್ಷ್ಮೀ ಕಾಂತಂ** - ಶ್ರಿಯಃಪತಿಯನ್ನು, **ಸಚಿವ ಗಮಿತಃ**- ಹಿಂದಿನ ಅಧಿಕಾರದಲ್ಲಿ ಹೇಳಿದಹಾಗೆ ಆತನ ಆಜ್ಞಾಧಾರಿಗಳಾದ ಆತಿವಾಹಿಕರಿಂದ ಹೊಂದಿಸಲ್ಪಟ್ಟವನಾಗಿ, **ಸಂಪದ್ಯ** - ಆತನನ್ನು ಹೊಂದಿ, **ಆವಿರ್ಭವತ್ ಸಹಜಾಕೃತಿಃ, ಆವಿರ್ಭವತ್** - ಇದುವರೆಗೂ ಅಪ್ರಕಾಶವಾಗಿದ್ದು ಈಗ ಪ್ರಕಾಶವಾಗಿರುವ, **ಸಹಜ** - ತನಗೆ ಸಹಜವಾದ ಎಂದರೆ ಸ್ವಕೀಯವಾದ, **ಆಕೃತಿಃ** - ಸ್ವರೂಪ ಸ್ವಭಾವಗಳುಳ್ಳವನಾಗಿ, **ಸ್ಫುಟತದ ಪೃಥಕ್ಸಿದ್ಧಃ, ಸ್ಫುಟ** - ಪ್ರತ್ಯಕ್ಷಿಸಲ್ಪಟ್ಟ, **ತದಪೃಥಕ್ಸಿದ್ಧಿಃ** – ಆ ಪರಮಾತ್ಮನನ್ನು ಬಿಡದೆ ಸೇರಿರುವ ಸಿದ್ಧಿಯುಳ್ಳವನಾಗಿ, ಎಂದರೆ ತಾನು ಪರಮಾತ್ಮನಿಗೆ ಶರೀರವು, ಆತನು ತನಗೆ ಆತ್ಮಾ ಎಂಬ ಭಾವವನ್ನು ಚನ್ನಾಗಿ ತಿಳಿದವನಾಗಿ, ಎಂದರೆ ಆತನೊಂದಿಗೆ ಸಾಯುಜ್ಯವನ್ನು ಹೊಂದಿ ಎಂಬರ್ಥವು ; **ಸಿಧ್ಯದ್ಗುಣಾಷ್ಟಕ ತತ್ಫಲಃ, ಸಿಧ್ಯತ್** - ಅಭಿವ್ಯಕ್ತವಾದ, **ಗುಣಾಷ್ಟಕ ತತ್ಫಲಃ** - ಗುಣಗಳ ಎಂಟೇನು, ಅವು ಯಾವುವೆಂದರೆ, ಅಪಹತ ಪಾಪ್ಮತ್ವ, ವಿಜರತ್ವ, ವಿಮೃತ್ಯುತ್ವ, ವಿಶೋಕತ್ವ, ವಿಜಿಘತ್ಸತ್ವ, ಅಪಿಪಾಸತ್ವ, ಸತ್ಯಕಾಮತ್ವ, ಸತ್ಯಸಙ್ಕಲ್ಪಗಳು, **ತತ್ಫಲಃ** - ಆ ಗುಣಾಷ್ಟಕಗಳಿಂದ ಉಂಟಾಗುವ ಫಲವೇನು, ಇದು ಯಾವುದೆಂದರೆ, ಆತನಿಗೆ ಇಷ್ಟಗಳಾಗಿ ಮಾಡುವ, ಕೈಂಕರ್ಯಪರ್ಯಂತವಾದ ಪರಿಪೂರ್ಣಾನುಭವವುಳ್ಳವನಾಗಿ, **ಭೋಗೇ** - ಜಗತ್ತಿನ ಸೃಷ್ಟಿಸ್ಥಿತಿ ಲಯಾದಿಗಳೇ ಮೊದಲಾದವುಗಳಿಲ್ಲದೆ, ಆನಂದಾನುಭವದಲ್ಲಿ ಮಾತ್ರ **ಪರಮಂ ಸಾಮ್ಯಂ** - ಅತ್ಯಂತ ಸಮಭಾವವನ್ನು, **ನಿವೃತ್ತಿ ಕಥೋಜ್ಝಿತಂ** - ಪುನರಾವರ್ತಿಯ ಪ್ರಸಂಗವೇ ಇಲ್ಲದೇ ಇರುವಂಥಾದ್ದನ್ನಾಗಿ, **ಭಜತಿ** - ಹೊಂದುವನು.

**ತಾತ್ಪರ್ಯವು** :—ಇವನು ಆತಿವಾಹಿಕರಿಂದ ಸತ್ಕರಿಸಲ್ಪಟ್ಟು ಹೋದ ಸ್ಥಳವೆಂತಾದ್ದೆಂದರೆ, ಈ ಪ್ರಕೃತಿಮಂಡಲದ ಹಾಗಲ್ಲದೆ ವಿಲಕ್ಷಣವಾದುದು, ಅದು ತಮಶ್ಶಬ್ದವಾಚ್ಯವಾದ ಪ್ರಕೃತಿ ಸಂಬಂಧವಿಲ್ಲದೆ, ಅಪ್ರಾಕೃತವಾದುದು. ಶ್ರುತಿಯು "ತಮಸಃ ಪರಸ್ತಾತ್" ಎಂದೂ, "ತಮಸಸ್ತು ಪಾರೇ" ಎಂದೂ ಈ ದಿವ್ಯ ವೈಕುಂಠವನ್ನು ಕುರಿತು ಹೇಳಿರುತ್ತದೆ. ತಮಶ್ಶಬ್ದವು ಬದ್ಧರಾದ ಚಿದ್ವಿಶಿಷ್ಟವಾದ ಪ್ರಕೃತಿಯನ್ನು ಬೋಧಿಸುತ್ತದೆ. ಅಂತಾದ್ದರಿಂದ ವಿವರ್ಜಿತವಾದುದೆಂಬ ಭಾವವು. ಅದು ಪ್ರಕೃತಿಗಿಂತ ಹೇಗೆ ವಿಲಕ್ಷಣವೆಂಬುವದು ತತ್ವತ್ರಯಾಧಿಕಾರ

ದಲ್ಲಿ ಉಪಪಾದಿತವಾಗಿದೆ (೪೫೮, ೫೦೮—೯ ಪುಟಗಳನ್ನು ಪರಾಂಬರಿಸಿ). ಇದು ಸ್ವಯಂಪ್ರಕಾಶವಾಗಿ, ರಜಸ್ತಮೋಗುಣಗಳಿಂದ ಸೇರದ ಶುದ್ಧಸತ್ವವಾಗಿ, ಸರ್ವೇಶ್ವರನಿಗೆ ಭೋಗೋಪಕರಣವಾಗಿ, ಈ ಚೇತನನಿಗೆ ದಿವ್ಯಮಙ್ಗಳವಿಗ್ರಹಪ್ರಾಪ್ತಿಗೂ ಶ್ರಿಯಃಪತಿಯ ಕೈಙ್ಕರ್ಯಗಳಿಗೆ ಉಪಯುಕ್ತವಾದ ಉಪಕರಣಗಳಾಗಿಯೂ ಆಗುವಂಥಾದ್ದು. ಆ ದಿವ್ಯವೈಕುಂಠದಲ್ಲಿರುವ ಸ್ವಾಮಿಯು ನಿತ್ಯಾನಪಾಯಿನಿಯಾದ ಲಕ್ಷ್ಮೀಯುಕ್ತನಾಗಿ ಲಕ್ಷ್ಮಿಗೂ ಇತರರಿಗೂ ಅತಿ ಮನೋಹರನಾಗಿಯೂ ಇರುತ್ತಾನೆಂದು ಹೇಳುವದಕ್ಕಾಗಿ **ಲಕ್ಷ್ಮೀಕಾಂತಂ** ಎಂಬ ಪ್ರಯೋಗವು. ದ್ವಯವು ಪೂರ್ವಖಂಡದಿಂದ ಉಪಾಯಸ್ಥಿತಿಯಲ್ಲೂ, ಉತ್ತರಖಂಡದಿಂದ ಉಪೇಯ (ಪ್ರಾಪ್ಯ) ಸ್ಥಿತಿಯಲ್ಲೂ ಹೀಗೆ ಯಾವಾಗಲೂ ಲಕ್ಷ್ಮೀವಿಶಿಷ್ಟವಾದ ರೂಪ ಉಳ್ಳವನೆಂದು ತಿಳಿಸುತ್ತದೆ. ಪ್ರಾಪ್ಯದಲ್ಲಿ ಲಕ್ಷ್ಮೀವಿಶಿಷ್ಟನೆಂಬಭಿಪ್ರಾಯವನ್ನು ನಮ್ಮ ಪಂಗಡದವರೆಲ್ಲಾ ಒಪ್ಪಿರುತ್ತಾರೆಯಾದುದರಿಂದ ಇದು ನಿರ್ವಿವಾದ ವಿಷಯವು. ಈ ಶ್ರಿಯಃಪತಿಯೆಂತವನೆಂದರೆ **ವಿಚಿತ್ರವಿಭೂತಿಕಂ** ಎಂದು ಹೇಳಲ್ಪಟ್ಟಿರುತ್ತದೆ. ವಿಭೂತಿ ಎಂದರೆ ನಿಯಾಮ್ಯವರ್ಗವು ಒಬ್ಬ ಸಾಧಾರಣನಾದ ರಾಜನೇ ಅನೇಕ ವಿಚಿತ್ರನಿಯಾಮ್ಯವರ್ಗವುಳ್ಳವನಾಗಿರುವಾಗ ರಾಜಾಧಿರಾಜನನ್ನು ಇನ್ನು ಕೇಳಬೇಕೇ? ಈ ಲೀಲಾವಿಭೂತಿಯೇ ಬಹು ವಿಚಿತ್ರವು ಆ ನಿತ್ಯವಿಭೂತಿಯು ಇನ್ನೂ ವಿಚಿತ್ರತೆಯುಳ್ಳದ್ದಾಗಿರುವದರಲ್ಲಿ ಸಂದೇಹವಿಲ್ಲವು. ಹೀಗೆ ಆತನು ಉಭಯವಿಭೂತಿನಾಥನು. ಇದನ್ನು ಜ್ಞಾನಿಗಳಾದ ಮಹಾಭಾಗವತರು ಬಹುವಾಗಿ ಪುರಾಣೇತಿಹಾಸಗಳಲ್ಲಿ ವರ್ಣಿಸಿರುತ್ತಾರೆ. ಈ ದಿವ್ಯವೈಕುಂಠವನ್ನು ಶ್ರೀ ಭಾಷ್ಯಕಾರರು ಶ್ರೀ ವೈಕುಂಠಗದ್ಯದಲ್ಲಿ ಸಂಗ್ರಹವಾಗಿ ವರ್ಣಿಸಿರುತ್ತಾರೆ ಸಾವಿರ ಕಂಭಗಳುಳ್ಳ ಈ ಆನಂದಮಯವೆಂಬ ಹೆಸರುಳ್ಳ ಮಹಾಮಂಟಪದಲ್ಲಿ ಶ್ರೀ ಪರವಾಸುದೇವನು ಲಕ್ಷ್ಮೀಯುಕ್ತನಾಗಿ ಹೇಗೆ ಅನಂತ ಗರುಡಾದಿ ನಿತ್ಯರುಗಳಿಂದಲೂ ಸೇವಿತನಾಗಿರುತ್ತಾನೆಂಬುದು ಆ ಶ್ರೀ ವೈಕುಂಠಗದ್ಯಪಠನದಿಂದ ವ್ಯಕ್ತಪಡುತ್ತದೆ. ಈ ಮುಕ್ತಿಯನ್ನು ಹೊಂದುವವನು ಪ್ರಾಪ್ಯವನ್ನು ಕಡೆಗೆ ಹೋಗಿ ಸೇರುವನು; ಹಾಗೆ ಸೇರಲು ಮಾರ್ಗವನ್ನು ತೋರಿಸಿದವರು ಯಾರು ಎಂದರೆ, **ಸಚಿವ ಗಮಿತಃ**, ಸರ್ವೇಶ್ವರನ ಆಜ್ಞಾಧಾರಕರಾದ ಅತಿವಾಹಿಕರಿಂದ ಸತ್ಕರಿಸಲ್ಪಟ್ಟು ಮುಖ್ಯವಾಗಿ ಅಮಾನವನಿಂದ ಕರೆದುಕೊಂಡು ಹೋಗಲ್ಪಟ್ಟವನಾಗಿ ಪ್ರಾಪ್ಯವನ್ನು ಹೊಂದುವನೆಂದು ಹೇಳಲ್ಪಟ್ಟಿತು. ಈ ಮುಕ್ತಾತ್ಮನ ಐಶ್ವರ್ಯವೆಂಥಾದ್ದೆಂಬುವದನ್ನು ಮುಂದೆ ಸಙ್ಗ್ರಹವಾಗಿ ತಿಳಿಸುತ್ತಾರೆ. ಪ್ರಥಮತಃ ಈತನಿಗೆ ಹೊಸದಾಗಿ ಏನಾದರೂ ಸ್ವರೂಪಪ್ರಾಪ್ತಿಯುಂಟಾಗುತ್ತದೆಯೇ ಅಥವಾ ಮೊದಲು ಇದ್ದುದೇ ಈಗ ಚೆನ್ನಾಗಿ ಪ್ರಕಾಶಿಸುತ್ತದೆಯೇ ಎಂಬ ಚರ್ಚೆಯಲ್ಲಿ, ಹೊಸದಾಗಿ ಏನೂ

ಉಂಟಾಗುವದಿಲ್ಲವು. ಈತನಿಗೆ ನೈಜವಾಗಿ ಇದ್ದ ಸ್ವರೂಪವು ಪ್ರಕೃತಿ ಸಂಬಂಧ ದಿಂದ ಇದುವರಿವಿಗೂ ತಿರೋಹಿತವಾಗಿದ್ದದು, ಈಗ ಪ್ರಕೃತಿ ಸಂಬಂಧವೂ ಕರ್ಮವೂ ತೊಲಗಿದುದರಿಂದ, ಹಿಂದಿನ ಸ್ವಸ್ವರೂಪವೇ ಆವಿರ್ಭವಿಸುತ್ತದೇ ವಿನಾ ಹೊಸದಾಗಿ ಏನೂ ಉತ್ಪತ್ತಿಯಾಗುವದಿಲ್ಲವು. ಈ ಅಭಿಪ್ರಾಯವು "**ಏವ ಮೇ ವೈಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪ ಸಂಪದ್ಯ ಸ್ವೇನರೂಪೇಣಾಭಿ ನಿಷ್ಪದ್ಯತೇ**" ಎಂದರೆ "ಹಾಗೆಯೆ ಈ ಜೀವಾ ತ್ಮನು ಈ ಶರೀರವನ್ನು ಬಿಟ್ಟು ಹೊರಟವನಾಗಿ, ಪರಂಜ್ಯೋತಿಸ್ಸಾದ ಪರಮ ಪುರುಷನನ್ನು ಸೇರಿ, ತನ್ನ ಸ್ವಕೀಯವಾದ ಸ್ವರೂಪದ ಆವಿರ್ಭಾವವನ್ನು ಹೊಂದು ತ್ತಾನೆ'' ಎಂದು ಛಾಂದೋಗ್ಯ (೮ ೧೨-೨) ದಲ್ಲಿ ಹೇಳಲ್ಪಟ್ಟಿರುತ್ತದೆ. ಆದನ್ನೇ "**ಸಂಪದ್ಯಾವಿರ್ಭಾವ ಸ್ಸ್ವೇನ ಶಬ್ದಾತ್**" ಎಂಬ ವ್ಯಾಸ ಸೂತ್ರವು ಉಪಪಾದಿ ಸುತ್ತದೆ. ಈ ಅಭಿಪ್ರಾಯಗಳಿಗನುಸಾರವಾಗಿ ಇಲ್ಲಯೂ "**ಸಂಪದ್ಯಾವಿರ್ಭವತ್ಸ ಹಜಾಕೃತಿಃ**" ಹಿಂದೆ ಪ್ರಕಾಶಿಸದೇ ಇದ್ದ ಸ್ವರೂಪವು, ಈಗ ಪರಮಾತ್ಮನೊಂದಿಗೆ ಸೇರುವದರಿಂದ, ತನಗೆ ಮೊದಲು ಸಹಜವಾಗಿದ್ದ ಸ್ವರೂಪವು ಈಗ ಆವಿರ್ಭವಿ ಸುತ್ತದೆ, ಎಂದರೆ ಆತ್ಮಾವಿನ ಧರ್ಮ ಭೂತಜ್ಞಾನವು ಏನೊಂದು ತಡೆಯೂ ಇಲ್ಲದೆ, ಸ್ವಯಂ ಪ್ರಕಾಶವಾಗಿ ಕಂಗೊಳಿಸುತ್ತದೆ ಎಂಬ ಭಾವವು. ಹೀಗೆ ಹೇಳಲು ಸಾಧನವೇನೆಂದರೆ ಶ್ರುತಿಯಲ್ಲಿ **ಸ್ವೇನರೂಪೇಣ** ಎಂಬಲ್ಲ **ಸ್ವೇನ** ಎಂಬ ಶಬ್ದ ವಿರುವದರಿಂದ ; ಆದುದರಿಂದಲೇ ಇಲ್ಲ **ಸಹಜಾಕೃತಿಃ** ಎಂಬ ಪ್ರಯೋಗವು.

ಎರಡನೆಯ ವಿಷಯವೇನೆಂದರೆ—**ಸ್ಫುಟತದಪೃಥಕ್ಸಿದ್ಧಿಃ** ಈ ಮುಕ್ತನು ಯಾವಾಗಲೂ ಸರ್ವೇಶ್ವರನಿಗೊಂದಿಗೇನೇ ಇರುವ ಸ್ಥಿತಿಯುಳ್ಳವನಾಗುವನು. ಈ ಅಭಿಪ್ರಾಯವು ವ್ಯಾಸಸೂತ್ರದ **ಅವಿಭಾಗೇನ ದೃಷ್ಟತ್ವಾತ್** ಎಂಬಧಿಕರಣದಲ್ಲಿ ಉಪಪಾದಿತವಾಗಿರುತ್ತದೆ ಈ ಆವಿರ್ಭೂತ ನಿಜಸ್ವರೂಪನಾದ ಮುಕ್ತನೇನು ಪರಮಾತ್ಮನಿಗಿಂತ ತಾನು ಬೇರೆಯೇ ಎಂದೆನಿಸಿ ಬ್ರಹ್ಮಾನುಭವವನ್ನು ಮಾಡು ತ್ತಾನೆಯೇ, ಅಥವಾ ತಾನು ಪರಮಾತ್ಮನಿಗೆ ಆತ್ಮಾವಾಗಿರುವದರಿಂದ ಅವಿಭಾಗ ದಿಂದ ವಿಭಾಗವಿಲ್ಲದ ಹಾಗೆ ಅಪೃಥಕ್ಸಿದ್ಧ ವಿಶೇಷಣವು ತಾನು ಎಂದು ಭಾವಿಸಿ, **ಅಹಂಬ್ರಹ್ಮಾಸ್ಮಿ** ಎಂದು ಪರಬ್ರಹ್ಮಾನುಭವವನ್ನು ಮಾಡುತ್ತಾನೆಯೇ ಎಂಬ ಸಂದೇಹದಲ್ಲಿ, ಈ ಎರಡನೇ ಅಭಿಪ್ರಾಯವೇ ಸಮಂಜಸವಾದುದೆಂದೂ, "**ಅಹಂ ಬ್ರಹ್ಮಾಸ್ಮಿ**" ಎಂದೇ ಅನುಭವಿಸುವನು. **ಮನುಷ್ಯೋಹಂ** ಎಂಬಲ್ಲಿ ಶರೀರ ವಾದ ಮನುಷ್ಯದೇಹಕ್ಕೂ, ಶರೀರಿಯಾದ ಆತ್ಮಾವಾದ ಅಹಂ ಎಂಬುವದಕ್ಕೂ ಹೇಗೆ ಸಾಮಾನಾಧಿಕರಣ್ಯವೋ ಹಾಗೆಯೇ, **ಅಹಂಬ್ರಹ್ಮಾಸ್ಮಿ** ಎಂಬಲ್ಲಿಯೂ ಶರೀರವಾದ **ಅಹಂ** ಎಂಬುವದರಿಂದ ಹೇಳಲ್ಪಟ್ಟ ಜೀವಾತ್ಮನಿಗೂ, ಬ್ರಹ್ಮ

ಶಬ್ದದಿಂದ ಹೇಳಲ್ಪಟ್ಟ ಶರೀರಿ ಎಂದರೆ ಆತ್ಮಾವಾದ ಪರಬ್ರಹ್ಮಕ್ಕೂ ಸಾಮಾನಾಧಿಕರಣ್ಯವು. ಅಹಂ ಬ್ರಹ್ಮಾಸ್ಮಿ ಎಂಬುದರರ್ಥವು ಅಹಂ ಬ್ರಹ್ಮಾತ್ಮಕಃ ಎಂಬದಾಗಿ ಎಂದು ತಿಳಿಯತಕ್ಕದ್ದು. ಶ್ರೀಮಚ್ಛಂಕರಾಚಾರ್ಯರು ಹೇಳುವ ಹಾಗೆ ಜೀವಾತ್ಮನೇ ಪರಮಾತ್ಮನಲ್ಲವು; ಸ್ವರೂಪೈಕ್ಯ ಅರ್ಥವಲ್ಲವು. "ಇದಂ ಜ್ಞಾನಮುಪಾಶ್ರಿತ್ಯ ಮಮಸಾಧರ್ಮ್ಯಮಾಗತಾಃ" (೧೪. ೧೪. ೨) ಎಂಬ ಗೀತಾವಾಕ್ಯವು ಜೀವಾತ್ಮನಿಗೆ ಸ್ವಸ್ವರೂಪಾವಿರ್ಭಾವ ಮೂಲಕ ಗುಣಾಷ್ಟಕ ಉಂಟಾಗುವದರಿಂದ, ಆತನಿಗೆ ಪರಬ್ರಹ್ಮನೊಂದಿಗೆ ಸಮಾನ ಭಾವವನ್ನು ಬೋಧಿಸುತ್ತದೆ. ಹಾಗೆಯೇ "ಯದಾಪಶ್ಯಃಪಶ್ಯತೇ ರುಕ್ಮವರ್ಣಮ್ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ । ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ" (ಮುಂಡಕ ೩. ೨ ೩) "ಯಾವಾಗ ಬ್ರಹ್ಮದರ್ಶಿಯಾದ ಉಪಾಸಕನು, ಆದಿತ್ಯವರ್ಣಂ ಎಂದು ಹೇಳಿರುವ ಹಾಗೆ ದೇದೀಪ್ಯಮಾನವಾದ ದಿವ್ಯಮಂಗಳವಿಗ್ರಹಯುಕ್ತನಾದ, ಜಗತ್ಕರ್ತಾವಾದ, ಜಗನ್ನಿಯಾಮಕನಾದ ಪರಮಪುರುಷನಾದ, ಬ್ರಹ್ಮಶಬ್ದವಾಚ್ಯನಾದ, ಪ್ರಕೃತಿಗೆ ಕಾರಣಭೂತನಾದ ಪರಬ್ರಹ್ಮನನ್ನು ಸಾಕ್ಷಾತ್ಕರಿಸುವನೋ, ಆಗ ಪುಣ್ಯಪಾಪಗಳೆರಡನ್ನೂ ಕಳೆದುಕೊಂಡು ಪ್ರಕೃತಿಸಂಬಂಧವಿಲ್ಲದೆ ಪರಿಶುದ್ಧನಾಗಿ, ಅಪಹತಪಾಪ್ಮತ್ವಾದಿ ಗುಣಾಷ್ಟಕಗಳುಳ್ಳವನಾಗಿ, ಪರಬ್ರಹ್ಮನೊಂದಿಗೆ ಸಮಾನಭಾವವನ್ನು ಹೊಂದುವನು ಎಂದು ಹೇಳಲ್ಪಟ್ಟಿರುತ್ತದೆ. ತೈತ್ತಿರೀಯ ಆನಂದವಲ್ಲಿಯೂ "ಸೋಽಶ್ನುತೇ ಸರ್ವಾನ್ ಕಾಮಾನ್ ಬ್ರಹ್ಮಣಾಸಹ ವಿಪಶ್ಚಿತೇತಿ" "ಕಲ್ಯಾಣಗುಣವಿಶಿಷ್ಟನಾದ ಪರಬ್ರಹ್ಮನನ್ನು ಆತನೊಂದಿಗೆ ಅನುಭವಿಸುತ್ತಾನೆ" ಎಂದು ಹೇಳುತ್ತದೆ. ಇದರಿಂದ ಅಪೃಥಕ್ಸಿದ್ಧವಿಶೇಷಣನಾದ ಜೀವಾತ್ಮನು ವಿಶೇಷ್ಯವಾದ ಶ್ರಿಯಃಪತಿಯೊಂದಿಗೆ ಸಮಾನಾನಂದವನ್ನನುಭವಿಸುವನೆಂದು ಹೇಳಲ್ಪಟ್ಟಿತು.

ಮೂರನೆಯ ವಿಷಯವೇನೆಂದರೆ:—ಸಿದ್ಧ್ಯದ್ಗುಣಾಷ್ಟಕೆ ತತ್ಫಲಃ . ಈತನಿಗೆ ಪರಬ್ರಹ್ಮಸಂಪತ್ತಿಯುಂಟಾದರೆ ಸ್ವಸ್ವರೂಪಾವಿರ್ಭಾವ ಉಂಟಾಗುತ್ತದೆಂದು ಹೇಳಲ್ಪಟ್ಟಿತು. ಆತನಿಗೆ ನೈಜವಾದ ಸ್ವರೂಪಾವಿರ್ಭವವು ಮೇಲೆ ಹೇಳಿದ ಛಾಂದೋಗ್ಯ ೮. ೭. ೧ ರಲ್ಲಿ ಹೇಳಲ್ಪಟ್ಟ ಎಂಟು ಗುಣಗಳ ಆವಿರ್ಭಾವವೇ ಅಥವಾ (೨) ಜ್ಞಾನಸ್ವರೂಪಾವಿರ್ಭಾವ ಮಾತ್ರವೇ (೩) ಇಲ್ಲವೇ ಇವೆರಡರ ಆವಿರ್ಭಾವವೇ ಎಂಬ ಸಂದೇಹದಲ್ಲಿ, ವ್ಯಾಸಶಿಷ್ಯರಾದ ಜೈಮಿನ್ಯಾಚಾರ್ಯರು ಮೊದಲಿನ ಅಭಿಪ್ರಾಯವನ್ನೂ, ಔಡುಲೋಮ್ಯಾಚಾರ್ಯರು ಎರಡನೇ ಅಭಿಪ್ರಾಯವನ್ನೂ ಅವಲಂಬಿಸಿದರು ಶ್ರೀ ವ್ಯಾಸಮಹರ್ಷಿಯು ಇವರಿಬ್ಬರಭಿಪ್ರಾಯವೂ ಸರಿಯಲ್ಲವೆಂದು ಹೇಳಿ, ಈ ಮೂರನೆಯ ಅಭಿಪ್ರಾಯವನ್ನು ತಿಳಿಸಿ ಸ್ವಸ್ವರೂಪಾವಿ

ರ್ಭಾವದಲ್ಲಿ ಇವೆರಡೂ ಸೇರಿದವೆಂದು ಉಪಪಾದಿಸಿರುತ್ತಾರೆ. ಈ ಅಭಿಪ್ರಾಯ ವನ್ನು ತಿಳಿಸುವದಕ್ಕಾಗಿ **ಸಿಧ್ಯದ್ಗುಣಾಷ್ಟಕನು** ಈ ಮುಕ್ತನು ಎಂದು ಹೇಳಿದರು. ಇಷ್ಟು ಮಾತ್ರವೇ ಅಲ್ಲದೆ ಆ ಆವಿರ್ಭವಿಸಿದ ಈ ಎಲ್ಲಾ ಗುಣಗಳಿಂದ ಯುಕ್ತ ವಾದ ಸ್ವರೂಪದಿಂದುಂಟಾಗುವ ಫಲವುಳ್ಳವನೂ ಆಗುತ್ತಾನೆಂದು **ತತ್ಫಲಃ** ಎಂದು ಪ್ರಯೋಗಮಾಡಿರುತ್ತಾರೆ. ಆ ಫಲಗಳು ಯಾವುವೆಂದರೆ :—ಈ ಮುಕ್ತ ನೂ ಸತ್ಯಸಂಕಲ್ಪನಾಗುವದರಿಂದ, "**ಸಙ್ಕಲ್ಪಾದೇವ ತಚ್ಛ್ರುತೇಃ**" ಎಂಬ ವ್ಯಾಸಸೂತ್ರದಲ್ಲಿ ಹೇಳಿರುವ ಹಾಗೆ, ಈ ಸತ್ಯಸಂಕಲ್ಪ ಮಹಿಮೆಯಿಂದಲೇ ಇನ್ನಾವುದರಪೇಕ್ಷೆಯೂ ಇಲ್ಲದೆ, "**ಸಙ್ಕಲ್ಪಾದೇವಾಸ್ಯ ಪಿತರಸ್ಸಮುತ್ತಿಷ್ಠನ್ತಿ**" (ಛಾಂ. ೮. ೨ ೧) "ಆ ಮುಕ್ತನ ಸಂಕಲ್ಪಮಾತ್ರದಿಂದಲೇ ಆತನ ಪಿತೃಗಳು ಉಂಟಾಗುವರು" ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ. ಮತ್ತೇನೆಂದರೆ, ಈತನ ಧರ್ಮ ಭೂತಜ್ಞಾನವು ಬಹು ಪ್ರಕಾಶವಾದುದಾಗಿ ವಿಭುವಾಗುವದರಿಂದ **ಸ ಏಕಧಾ ಭವತಿ, ತ್ರಿಧಾಭವತಿ** (ಛಾಂ. ೨೬. ೨) ಎಂದು ಹೇಳಿರುವ ಹಾಗೆ ಅನೇಕ ದೇಹಗಳನ್ನು ಪಡೆದು ಧರ್ಮಭೂತಜ್ಞಾನದ ವ್ಯಾಪ್ತಿಯಿಂದ ಅವುಗಳೆಲ್ಲಾ ಸತ್ತೆಯನ್ನು ಹೊಂದುವ ಹಾಗೆ ಮಾಡಿಕೊಳ್ಳಬಹುದು ಈ ದೇಹಗಳೂ ಕೂಡ ಶುದ್ಧ ಸತ್ವಮಯವಾದರೂ ಅನಿತ್ಯವಾಗಿರಲಿ ಎಂಬ ಸಂಕಲ್ಪದಿಂದುಂಟಾದುವಾದುದರಿಂದ ಅನಿತ್ಯಗಳಾಗುವವು. ಸರ್ವೇಶ್ವರನು ಮಾಡುವ ಅವತಾರ ಪರಿಸಮಾಪ್ತಿ ಕಾಲದಲ್ಲಿ ಆತನ ದಿವ್ಯಮಂಗಳವಿಗ್ರಹವೇನಾಗುತ್ತದೆ ಎಂಬ ಪ್ರಶ್ನೆಗೆ ಉತ್ತರವು ಇದರಿಂದ ದೊರೆಕಬಹುದು. ಸರ್ವೇಶ್ವರನು ಅವುಗಳು ಅನಿತ್ಯವಾಗಿರಲೆಂದು ಸಂಕಲ್ಪಿಸಿದುದರಿಂದ ಅವುಗಳಿಗೂ ವಿಕಾರತ್ವವೂ ಅಂತ್ಯವೂ ಉಂಟು. ಜನನ ಉಂಟೆಂದು ಭಾವಿಸಿದ ನಂತರ ಅಂತ್ಯ ಉಂಟೆಂದು ಭಾವಿಸಲು ಏನೊಂದೂ ತೊಂದರೆಯಿಲ್ಲವು ಸೌಭರಿ ಮೊದಲಾದ ಋಷಿಗಳಿಗೆ ಧರ್ಮಭೂತಜ್ಞಾನವು ತುಂಬಾ ವಿಕಾಸವನ್ನು ಹೊಂದಿದುದರಿಂದಲೇ ಅವರು ಆ ಜ್ಞಾನದ ವ್ಯಾಪ್ತಿ ಮೂಲಕ ಐವತ್ತು ಶರೀರಗಳನ್ನು ಧರಿಸಿ, ಮಾಂಧಾತರಾಯನ ಐವತ್ತು ರಾಜಕನ್ನಿಕೆಗಳನ್ನೂ ಮದುವೆ ಮಾಡಿಕೊಂಡು ಅವರುಗಳೊಂದಿಗೆ ರಮಿಸಿದರೆಂಬ ಇತಿಹಾಸ ಉಂಟು. ಹಾಗೆಯೇ ಮುಕ್ತನಿಗೂ ತನ್ನ ಸತ್ಯಸಂಕಲ್ಪತೆಯಿಂದ ಅನೇಕ ಶರೀರಪರಿಗ್ರಹಣ ಮಾಡುವ ಫಲವುಂಟಾಗುತ್ತದೆಂದು ಹೇಳಲ್ಪಟ್ಟಿತು ಮತ್ತು ಇಂತಹ ಸಂಕಲ್ಪದಿಂದಲೇ ಈ ಮುಕ್ತನು "**ಜಕ್ಷತ್ ಕ್ರೀಡನ್ ರಮಮಾಣಃ**" (ಛಾಂ. ೮. ೧೨. ೩) ಎಂದು ಹೇಳಿರುವ ಹಾಗೆ ಸರ್ವವಿಧ ಭೋಗವನ್ನೂ ಹೊಂದಬಹುದು. ಹೀಗೆ ಗುಣಾಷ್ಟಕ ಫಲವನ್ನೆಲ್ಲಾ ಈ ಮುಕ್ತನು ಹೊಂದುವನು ಎಂದು ಹೇಳಲ್ಪಟ್ಟಿತು.

ಹೀಗೆ ಈ ಮುಕ್ತನ ಸಂಕಲ್ಪದಿಂದಲೇ ಇವುಗಳು ಪ್ರಾಪ್ತವಾಗುತ್ತವೆಂದರೆ

ಕೆಲವು ಪೂರ್ವಪಕ್ಷಗಳು ತಲೆದೋರುತ್ತವೆ. ೧. ಈತನಿಗೆ ಸಂಕಲ್ಪದಿಂದಲೇ ಇವುಗಳು ಉಂಟಾಗುತ್ತವೆಯೋ, ಇತರ ಸಹಾಯವೇನೂ ಬೇಡವೋ, ಎಂದರೆ ಇತರೆ ಸಹಾಯವೇನೂ ಬೇಡವೆಂದು ಸಂಕಲ್ಪಾದೇವ, ಸಂಕಲ್ಪಮಾತ್ರದಿಂದಲೇ ಉಂಟಾಗುತ್ತದೆಂದು ಹೇಳಿ, ಶ್ರುತಿಯು ಸಸ್ವರಾಡ್ಭವತಿ - ಈತನು ಯಾವುದಕ್ಕೂ, ಕರ್ಮಕ್ಕೂ ಕೂಡ ವಶ್ಯನಲ್ಲವೆಂದು ಹೇಳಲ್ಪಟ್ಟಿತು. ಆಗಲಿ ಹೀಗೆ ಸರ್ವ ಸ್ವಾತಂತ್ರ್ಯ ಹೇಳಿತಲ್ಲಾ ಶಾಸ್ತ್ರವಶ್ಯತೆಯೂ ಇಲ್ಲವೋ ಎಂದರೆ ಅದೂ ಇಲ್ಲವೆಂದು ಹೇಳಲ್ಪಟ್ಟಿತು. ಹಾಗಾದರೆ ಸ್ವೇಚ್ಛಾಪ್ರವೃತ್ತಿ, ಅಧರ್ಮಪ್ರವೃತ್ತಿಯೋ ಎಂದರೆ ಈತನಿಗೆ ಸ್ವರೂಪಾವಿರ್ಭಾವ ಉಂಟಾಗುವದರಿಂದ ಪ್ರತಿಕೂಲ ಪ್ರವೃತ್ತಿಯೇ ಇಲ್ಲವು. ಪ್ರತಿಕೂಲ ಪ್ರವೃತ್ತಿ ಇದ್ದರೆ ತಾನೇ, ಶಾಸ್ತ್ರಾವಾದಶಶಾಸ್ತ್ರದ ಅವಶ್ಯಕತೆಯು ; ಅಂತಹ ಪ್ರತಿಕೂಲತೆಯೇ ಇಲ್ಲದುದರಿಂದ ಶಾಸ್ತ್ರವಶ್ಯತೆಯಿಲ್ಲವು ಆದುದರಿಂದ- ಸಸ್ವರಾಡ್ಭವತಿ - ಅಕರ್ಮವಶ್ಯನಾಗಿ ಸ್ವತಂತ್ರನಾಗಿರುವನು ಎಂಬ ಭಾವವು ಆದರೆ ಸ್ವತಂತ್ರನೆಂದರೆ ಪರಮಾತ್ಮನಿಗೂ ಅಧೀನವಲ್ಲವೋ ಎಂದರೆ ಭಗವಂತನಿಗೆ ಮಾತ್ರ ಪಾರತಂತ್ರ್ಯವೇ ವಿನಾ ಇನ್ಯಾರಿಗಾಗಲಿ ಯಾವುದಕ್ಕಾಗಲಿ ಅಧೀನನಲ್ಲವು. "ಅತ ಏವಚಾನನ್ಯಾಧಿಪತಿಃ" ಎಂಬ ಸೂತ್ರದಲ್ಲಿ ಇದು ಉಪಪಾದಿಸಲ್ಪಟ್ಟಿರುತ್ತದೆ.

(೨) ಈ ಮುಕ್ತನು ಅನೇಕ ಶರೀರಗಳನ್ನು ಸಂಕಲ್ಪದಿಂದೆತ್ತಬಹುದು ಎಂದು ಹೇಳಿದನಂತರ, ಮುಕ್ತದೆಶೆಯಲ್ಲಿ ಈ ಆತ್ಮನಿಗೆ ಶರೀರ ಉಂಟೇ ಇಲ್ಲವೇ ಎಂಬ ಸಂದೇಹದಲ್ಲಿ ಬಾದರಿ ಎಂಬುವರು ಶರೀರವಿಲ್ಲವೆಂದೂ, ಜೈಮಿನಿಯವರು "ಏಕಧಾ ಭವತಿ ತ್ರಿಧಾಭವತಿ" ಎಂದಿರುವದರಿಂದ ಉಂಟೇ ಉಂಟೆಂದೂ ಹೇಳುವ ಪಕ್ಷಗಳನ್ನೂ ಶ್ರೀ ವ್ಯಾಸಮಹರ್ಷಿಯು ಚರ್ಚಿಸಿ, ಮುಕ್ತನು ತನ್ನ ಸಂಕಲ್ಪಾನುಸಾರ ಅಶರೀರನೂ ಆಗಬಹುದು, ಸಶರೀರನೂ ಆಗಬಹುದೆಂದು ತೀರ್ಮಾನ ಮಾಡಿರುತ್ತಾರೆ.

ಹೀಗೆ ತನ್ನ ಸಂಕಲ್ಪಾನುಸಾರ ಎತ್ತಿದ ಶರೀರದಿಂದಲೂ ಮತ್ತು ಪರಮಾತ್ಮನನುಗ್ರಹಿಸಿದ ಶರೀರದಿಂದಲೂ ಇವನು ಪರಿಪೂರ್ಣ ಪರಬ್ರಹ್ಮಾನುಭವ ರೂಪ ಭೋಗವನ್ನೂ ಹೊಂದುವನು ಎಂದು ಹೇಳಿದಂತಾಯಿತು. ಈ ಭೋಗವು ಎಂದರೆ ಆನಂದವು ಎಂಥಾದ್ದೆಂದರೆ ಭೋಗೇ ಪರಮಂ ಸಾಮ್ಯಂ ಎಂದು ಹೇಳಿರುತ್ತಾರೆ ಮೇಲೆ ಉದಾಹರಿಸಿರುವ "ನಿರಂಜನಃ ಪರಮಂ ಸಾಮ್ಯಮುಪೈತಿ" ಎಂಬ ಛಾಂದೋಗ್ಯ ಶ್ರುತಿಯು ಇದಕ್ಕೆ ಆಧಾರವು. "ಸಾಮ್ಯಮುಪೈತಿ" ಎಂದು ಹೇಳಿರುವಾಗ ಅದ್ವೈತಿಗಳ ಸ್ವರೂಪೈಕ್ಯವೆಂಬ ಭಾವವೂ ಅಸಮಂಜಸವೆಂಬುದೂ, ಹಾಗೆಯೇ ದ್ವೈತಸಿದ್ಧಾಂತಿಗಳ ಆನಂದ ತಾರತಮ್ಯವೂ ಅಸಮಂಜಸವೆಂಬುದೂ

ತೋರಿಬರುತ್ತದೆ. ಈ ಸಾಮ್ಯವು ಯಾವ ಸಂದರ್ಭಗಳಲ್ಲಿ ಎಂದರೆ ಭೋಗೇ ಭೋಗದಲ್ಲಿ ಮಾತ್ರ, ಆನಂದದಲ್ಲಿ ಮಾತ್ರ ಸಾಮ್ಯವೇ ವಿನಾ ಮಿಕ್ಕ ವ್ಯಾಪಾರ ಗಳಲ್ಲಿ ಇಲ್ಲವೆಂದು ಹೇಳಲ್ಪಟ್ಟಿರುತ್ತದೆ. ಬ್ರಹ್ಮಸೂತ್ರದ ಜಗದ್ವ್ಯಾಪಾರ ವರ್ಜ್ಯಾಧಿಕರಣದಲ್ಲಿ ಶ್ರೀ ವ್ಯಾಸರು ಮುಕ್ತನಿಗೆ ಜಗತ್ಸೃಷ್ಟಿ ಸ್ಥಿತಿ ನಿಯಮನ ಲಯಾದಿಗಳಲ್ಲಿ ಸಂಬಂಧವಿಲ್ಲವೆಂದು ಸ್ಥಾಪಿಸಿರುತ್ತಾರೆ, ಏಕೆಂದರೆ "ಯತೋ ವಾ ಇಮಾನಿ ಭೂತಾನಿ ಜಾಯನ್ತೇ" ಇತ್ಯಾದಿ ಸೃಷ್ಟಿ ಕ್ರಮವನ್ನು ಹೇಳುವ ಶ್ರುತಿಗಳಲ್ಲಿ ಪರಮಪುರುಷನಿಗೆ ಮಾತ್ರವೇ ಸಂಬಂಧ ಹೇಳಿರುವದರಿಂದ ಆ ಪ್ರಕರಣಗಳಲ್ಲಿ ಮುಕ್ತನ ಹೆಸರು ಅಲ್ಲಿಲ್ಲುದದರಿಂದಲೂ ಈ ಸಾಮ್ಯರೂಪ ಮುಕ್ತೈಶ್ವರ್ಯವು ಜಗದ್ವ್ಯಾಪಾರ ವರ್ಜವಾದುದು. ಹೀಗೆಯೇ ಅನೇಕ ಶ್ರುತಿ ಸ್ಮೃತಿಗಳು ಉಪಪಾದಿಸುತ್ತವೆ ಹಾಗಾದರೆ ಇನ್ನು ಏತರಲ್ಲಿ ಸಾಮ್ಯವೆಂದರೆ, "ಭೋಗಮಾತ್ರಸಾಮ್ಯ ಲಿಙ್ಗಾಚ್ಚ" (೪. ೪. ೨೧.) ಎಂಬ ಸೂತ್ರದಲ್ಲಿ "ಸೋಽಶ್ನುತೇ ಸರ್ವಾ‌ನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ" (ತೈ. ಆನಂದ ೨ ೧. ೨) ಎಂಬ ತೈತ್ತರೀಯ ವಾಕ್ಯವನ್ನನುಸರಿಸಿ ಪರಿಪೂರ್ಣ ಪರಬ್ರಹ್ಮಾನುಭವರೂಪ ಆನಂದವೂ ಪರಬ್ರಹ್ಮಾನಂದವೂ ಸಮವೆಂದು ಗ್ರಹಿಸತಕ್ಕದ್ದು ; ಆದುದರಿಂದ ಮುಕ್ತನಿಗೆ ಪರಮ ಪುರುಷ ಸಾಮ್ಯವನ್ನು ಹೇಳುವದರಲ್ಲಿಯೂ, ಸತ್ಯಸಙ್ಕಲ್ಪತ್ವದಲ್ಲಿ ಇಬ್ಬರೂ ಸಮವೆಂದು ಹೇಳುವದರಲ್ಲೂ ಪರಮಪುರುಷನಿಗೆ ಸೃಷ್ಟಿ ಸ್ಥಿತಿ ನಿಯಮನಲಯಾದಿಗಳನ್ನು ಬೋಧಿಸುವ ಶ್ರುತಿಗಳಿಗೆ ವಿರೋಧವಿಲ್ಲದಂತೆ ಅನ್ವಯಿಸುವದು ಯುಕ್ತವು. ಶ್ರುತಿಗಳಿಗೆ ಪರಸ್ಪರ ವಿರೋಧವನ್ನು ಕಲ್ಪಿಸುವದು ಅನ್ಯಾಯವು. ಆದುದರಿಂದ ಸ್ವಾಮಿ ದೇಶಿಕರವರು, ಮುಕ್ತನು ಪರಮಂ ಸಾಮ್ಯಂ ಭೋಗೇ ಭಜತಿ ಎಂದು ಹೇಳಿದರೇ ವಿನಾ ಸುಮ್ಮನೆ ಪರಮಂ ಸಾಮ್ಯಂ ಭಜತಿ ಎಂದು ಹೇಳಲಿಲ್ಲವು. ಯಾವಾಗ ಭೋಗಮಾತ್ರದಲ್ಲಿ ಸಾಮ್ಯವೆಂದಾಯಿತೋ, ಮಿಕ್ಕ ಜಗದ್ವ್ಯಾಪಾರಾದಿಗಳಿಲ್ಲವೆಂಬುವದು ಸುಸ್ಪಷ್ಟವು. ಹೀಗೆ ಮುಕ್ತೈಶ್ವರ್ಯವನ್ನೇನೋ ಮುಕ್ತನು ಹೊಂದಬಹುದು. ಯಾವುದಾದರೂ ಒಂದು ಕಾರಣದಿಂದ ದಿವ್ಯ ವೈಕುಂಠವಾಸವು ತಪ್ಪಿ ಪುನಃ ಇಲ್ಲಿಗೇನಾದರೂ ಬರುವ ಹಾಗೆ ಆದೀತೋ ಎಂಬ ಸಂದೇಹದಲ್ಲಿ ಶ್ರೀ ನಿಗಮಾಂತದೇಶಿಕರವರು ಹೇಳುತ್ತಾರೇನೆಂದರೆ :— ಈ ಭಗವತ್ಸಾಮ್ಯರೂಪಭೋಗವು, "ನಿವೃತ್ತಿ ಕಥೋಜ್ಝಿತಮ್" ಪುನರಾವೃತ್ತಿ ಪ್ರಸಂಗವೇ ಇಲ್ಲದುದೆಂದುಪದೇಶಿಸಿರುತ್ತಾರೆ. ಈ ಮುಕ್ತನೇ ಒಂದು ವೇಳೆ ಅಪೇಕ್ಷಿಸಿ ಈ ಲೀಲಾವಿಭೂತಿಗೇನೆ ಏಕೆ ಬರಕೂಡದು ಎಂಬ ಶಂಕಾ ಉಂಟಾದರೆ, ಈ ಚೇತನನು ತಾನು ಹಿಂದೆ ಅನುಭವಿಸಿದ ನಾನಾ ವಿಧ ದುಃಖಗಳನ್ನೆಲ್ಲಾ ತಿಳಿದವನಾಗಿ, ದುಃಖಲೇಶಕ್ಕೂ ಕೂಡ ಅವಕಾಶವಿಲ್ಲದ,

ಅನವಧಿಕವಾದ ನಿರತಿಶಯ ಪರಿಪೂರ್ಣ ಬ್ರಹ್ಮಾನುಭವವನ್ನು ಹೊಂದಿದ ನಂತರವೂ ಆ ನರಕರೂಪದ ಅವಸ್ಥೆಯನ್ನು ಎಂದಿಗಾದರೂ ಅಪೇಕ್ಷಿಸುವನೇ? ಈ ಅಭಿಪ್ರಾಯವನ್ನು ಸರ್ವೇಶ್ವರನೇ ಅರ್ಜುನನಿಗೆ ಉಪದೇಶಿಸಿರುತ್ತಾನೆ. "**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಂ । ನಾಪ್ನುವಂತಿ ಮಹಾತ್ಮಾನ ಸ್ಸಂಸಿದ್ಧಿಂ ಪರಮಾಂಗತಾಃ । ಆಬ್ರಹ್ಮ ಭುವನಾಲ್ಲೋಕಾಃ ಪುನರಾವರ್ತಿ ನೋರ್ಜುನ । ಮಾಮುಪೇತ್ಯತು ಕೌನ್ತೇಯ ಪುನರ್ಜನ್ಮ ನ ವಿದ್ಯತೇ ॥**" (ಗೀ ಅ. ೧೫-೧೬) ನನ್ನನ್ನು ಮಹಾ ಕಷ್ಟದಿಂದಲೂ ಪ್ರಯಾಸದಿಂದಲೂ ಶ್ರದ್ಧೆಯಿಂದಲೂ ಐಕಾಂತ್ಯದಿಂದಲೂ ಭಜಿಸಿ ಉಪಾಯಾನುಷ್ಠಾನ ಮಾಡಿ ನನ್ನನ್ನು ಪಡೆದು, ನನ್ನ ಸ್ವರೂಪ ಜ್ಞಾನಾದಿಗಳನ್ನು ಯಥಾವತ್ತಾಗಿ ತಿಳಿದು, ನನ್ನನ್ನೇ ಪರಮಪ್ರಿಯವಾಗಿ ಭೋಗ್ಯವೆಂದು ಭಾವಿಸಿ, ನನ್ನನ್ನು ಬಿಟ್ಟರೆ ತನಗೆ ಸತ್ತೆಯೇ ಇಲ್ಲವೆಂದು ಚನ್ನಾಗಿ ಅರಿತ ಮಹಾತ್ಮರು, ಪರಮೈಶ್ವರ್ಯ ರೂಪ ಸಿದ್ಧಿಯನ್ನು ಹೊಂದಿದ ನಂತರ ಪುನಃ ಪುನಃ ಜನ್ಮ ಮರಣಾದಿಗಳಿಗಾಕರವಾಗಿರುವ, ದುಃಖಕ್ಕೆ ತೌರುಮನೆಯಾಗಿರುವ, ಅಸ್ಥಿರವಾದ, ಈ ಲೀಲಾವಿಭೂತಿಯನ್ನು ಎಂದಿಗೂ ಅಪೇಕ್ಷಿಸುವದಿಲ್ಲವು, ಹೊಂದುವದೂ ಇಲ್ಲವು. ಚತುರ್ಮುಖ ಬ್ರಹ್ಮನ ಲೋಕವಾದ ಸತ್ಯಲೋಕ ಮೊದಲುಗೊಂಡು ಎಲ್ಲಾ ಲೋಕಗಳಲ್ಲೂ ಆವರ್ತಿಯುಂಟು. ಅವುಗಳೆಲ್ಲಾ ಅಸ್ಥಿರವಾದ ಐಶ್ವರ್ಯವನ್ನು ಕೊಟ್ಟು ಅದು ಮುಗಿದ ನಂತರ ಅವು ಆವರ್ತಿಗೆ ಹೇತುಭೂತವಾದವುಗಳಾಗುತ್ತವೆ. ಈ ನಿತ್ಯವಿಭೂತಿಯಲ್ಲಿರುವ ತನ್ನನ್ನು ಹೊಂದಿದವರು, ತಾನು ಸರ್ವಜ್ಞನಾಗಿ, ಸತ್ಯಸಂಕಲ್ಪನಾಗಿ, ಪರಮಕಾರುಣಿಕನಾಗಿರುವದರಿಂದ ಪುನರ್ಜನ್ಮವನ್ನು ಎಂದಿಗೂ ಹೊಂದುವದಿಲ್ಲವೆಂದು ಹೇಳಿಕೊಂಡಿರುತ್ತಾನೆ. ಹೀಗೆ ಸರ್ವೇಶ್ವರನೇ ಹೇಳಿರುವದರಿಂದ, ಕಾರಣಾಂತರದಿಂದ ಸರ್ವೇಶ್ವರನೇ ಏನಾದರೂ ಈ ಮುಕ್ತನಿಗೆ ಆವೃತ್ತಿಯನ್ನುಂಟು ಮಾಡಿಬಿಡುವನೋ ಎಂಬ ಶಂಕೆಯು ದೂರೀಕೃತವಾದುದು. ಹೀಗೆ "**ನಿವೃತ್ತಿ ಕಥೋಕ್ಷಿತಂ**" ಎಂಬುದರಿಂದ, ಛಾಂದೋಗ್ಯದ ಉಪಸಂಹಾರ ವಾಕ್ಯವಾದ "**ಸಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕ ಮಭಿಸಂಪದ್ಯತೇ ನ ಚ ಪುನರಾವರ್ತತೇ**" ಎಂಬುದರಭಿಪ್ರಾಯವನ್ನೂ ಬ್ರಹ್ಮಸೂತ್ರಗಳ ಕೊನೇ ಸೂತ್ರದ ಅಭಿಪ್ರಾಯವನ್ನೂ ಉಪದೇಶಿಸಿರುತ್ತಾರೆ. ಈ ಶ್ರುತ್ಯರ್ಥವೇನೆಂದರೆ, ಪ್ರಾಣವಿರುವ ತನಕ ಹೀಗೆ ಪರಮಪುರುಷೋಪಾಸಕನಾಗಿದ್ದವನು ದಿವ್ಯ ವೈಕುಂಠವನ್ನು ಹೊಂದುವನು, ಅವನಿಗೆ ಪುನರಾವರ್ತಿ ಇಲ್ಲವೆಂದು ಹೇಳಿರುತ್ತದೆ. ಆವೃತ್ತಿಗೆ ಮುಕ್ತನಿಗೇನೇ ಇಚ್ಛೆಯೆಂದಿಗೂ ಉಂಟಾಗುವದಿಲ್ಲವು. ಪರಮ ಕೃಪಾಳುವಾದ ಸರ್ವೇಶ್ವರನಿಗೆ "**ಜ್ಞಾನೀತ್ವಾತ್ಮೈವ ಮೇಮತಂ**" ಎಂದು

**ಪರಿಪೂರ್ಣ ಬ್ರಹ್ಮಾನುಭವ ಸ್ಥಿತಿಃ ಕೀದೃಶೀ ?**

**ಇಗ್ಗತಿ ವಿಶೇಷತ್ತಾಲೇ ಶೆನ್ರವನುಡೈಯ ಪರಿಪೂರ್ಣಾನುಭವಮ್ ಇರುಕ್ಕುಮ್ಪಡಿ ಎಙ್ಗನೇ ಯೆನ್ನಿಲ್—(೧) "ಅನೈತ್ತುಲಕುಂ ಮುಡೈಯ**

ಹೇಳಿದವನಿಗೆ ಇಚ್ಛೆಯು ಎಂದಿಗೂ ಉಂಟಾಗಲಾರದು. ಕರ್ಮವಶದಿಂದೇನಾದರೂ ಉಂಟಾದೀತೋ ಎಂದರೆ ಸಂಪೂರ್ಣವಾಗಿ ಉಚ್ಛಿನ್ನ ಕರ್ಮಬಂಧವಾದುದರಿಂದ ಆವರ್ತಿ ಶಂಕಾ ಇಲ್ಲವೇ ಇಲ್ಲವೆಂಬಭಿಪ್ರಾಯವು.

ಹೀಗೆ ಮುಕ್ತನು ದಿವ್ಯ ವೈಕುಂಠದಲ್ಲಿ ದಿವ್ಯಾಲಂಕಾರಗಳಿಂದ ಕೂಡಿದ ಆನಂದಮಯ ಸಭೆಯಲ್ಲಿ ಪ್ರಾಪ್ಯರಾದ ದಿವ್ಯಲೋಕ ದಂಪತಿಗಳನ್ನು ಹೊಂದಿ, ತನಗೆ ಅವರುಗಳು ಆತ್ಮಾವೆಂದು ತಿಳಿದವನಾಗಿ ಗುಣಾಷ್ಟಕಗಳೊಂದಿಗೆ ಕೂಡಿದ ಸ್ವಸ್ವರೂಪಾವಿರ್ಭಾವವನ್ನೂ ಅವುಗಳಿಂದ ಪ್ರಾಪ್ತವಾಗುವ ಫಲಗಳನ್ನೂ ಹೊಂದಿದವನಾಗಿ, ಪುನರಾವೃತ್ತಿ ಶಂಕಾವಿಗೆ ಕಾರಣವಿಲ್ಲದವನಾಗಿ, ತನ್ನ ಸಂಕಲ್ಪಾನುಸಾರವೂ ಸರ್ವೇಶ್ವರ ಸಂಕಲ್ಪಾನುಸಾರವೂ ಶರೀರಗಳನ್ನು ಧರಿಸುವನಾಗಿ ತನ್ನ ಇಷ್ಟಾನುಸಾರ ಭೋಗಗಳನ್ನು ಅನುಭವಿಸುವನಾಗಿ ಭೋಗಮಾತ್ರದಲ್ಲಿ ಸರ್ವೇಶ್ವರನಿಗೆ ಸಮಾನವಾದ ಆನಂದವನ್ನು ಹೊಂದಿದವನಾಗಿ ಲೋಕದಂಪತಿಗಳಿಗೆ ಕೈಂಕರ್ಯ ಮಾಡುವ ಸಾಮ್ರಾಜ್ಯ ಪದವಿಯನ್ನು ಪಡೆದವನಾಗಿ ಪರಿಪೂರ್ಣ ಬ್ರಹ್ಮಾನುಭವ ರೂಪ ಮುಕ್ತೈಶ್ವರ್ಯವನ್ನು ಹೊಂದುವನು ಎಂಬುದು ಈ ಶ್ಲೋಕ ತಾತ್ಪರ್ಯವು.

**ಪರಿಪೂರ್ಣ ಬ್ರಹ್ಮಾನುಭವದ ಪ್ರಕಾರವೆಂಥಾದ್ದು ?**

ಸಂಗ್ರಹ ಶ್ಲೋಕದಲ್ಲಿ ಹೇಳಿದುದನ್ನೇ ಸವಿಸ್ತರವಾಗಿ ಹೇಳಲುಪಕ್ರಮಿಸಿ ಪ್ರಥಮತಃ ಪರಿಪೂರ್ಣ ಬ್ರಹ್ಮಾನುಭವವು ಎಂಥಾದ್ದೆಂದು ತಿಳಿಸುವರಾಗಿ ಪರಿಪೂರ್ಣ ಬ್ರಹ್ಮಾನುಭವ ಶಬ್ದದರ್ಥವನ್ನು ತಿಳಿಸಿ ಈ ಅಧಿಕಾರದ ಹೆಸರಿನ ಸಾರ್ಥಕ್ಯವನ್ನು ತೋರಿಸುತ್ತಾರೆ :— **ಇಗ್ಗತಿ ವಿಶೇಷತ್ತಾಲೆ** – ಈ ಅರ್ಚಿರಾದಿ ಗತಿ ವಿಶೇಷ ಮೂಲಕವಾಗಿ, **ಶೆನ್ರವನುಡೈಯ** - ಪ್ರಾಪ್ಯವನ್ನು ಹೊಂದಿದ ಮುಕ್ತನ, **ಪರಿಪೂರ್ಣ** ಬ್ರಹ್ಮಾನುಭವವು, **ಇರುಕ್ಕುಮ್ಪಡಿ** - ಇರುವ ಸ್ಥಿತಿಯು, **ಎಙ್ಗನೇ ಯೆನ್ನಿಲ್** - ಎಂಥಾದ್ದೆಂದರೆ :—**"ಅನೈತ್ತುಲಕುಂ ಮುಡೈಯ** – ಈ ಎಲ್ಲಾ ಲೋಕಗಳಿಗೂ ನಿಯಾಮಕನಾಗಿ ಸ್ವಾಮಿಯಾಗಿರುವ, ಎಂದರೆ ಉಭಯ ವಿಭೂತಿ

**ಅರವಿನ್ದ ಲೋಚನನ್ನೈತ್ತಿನೈತ್ತನೆಯುಮ್ ವಿಡಾಳ್" ಇತ್ಯಾದಿಗಳಿಲ್ಪಡಿಯೇ ಸರ್ವದೇಶ ಸರ್ವಕಾಲ ಸರ್ವಾವಸ್ಥೈಗಳಿಲುಮ್ ಸರ್ವೇಶ್ವರನ್ನೈ ಅನಂತಜ್ಞಾನ ವಿಗ್ರಹ ಗುಣವಿಭೂತಿ ಚೇಷ್ಟಿತಙ್ಗಳಿಲೊನ್ರುಮ್ ಕುರೈಯಾಮಲ್ ನಿರತಿಶಯ ಭೋಗ್ಯಮಾಗ ವಿಷಯೀಕರಿತ್ತುಕ್ಕೊಂಡಿರುಕ್ಕುಮ್.**

---

ನಾಯಕನಾಗಿರುವ, **ಅರವಿಂದ ಲೋಚನನ್ನೈ**-ಪುಂಡರೀಕಾಕ್ಷನನ್ನು, ಇದರಿಂದ ಸರ್ವರನ್ನೂ ತನ್ನ ಕಣ್ಣಿನ ಸೌಂದರ್ಯದಿಂದ ಆಕರ್ಷಿಸುವ ಶ್ರಿಯಃಪತಿಯು ಎಂಬ ಭಾವವು, ಈ ಕಣ್ಣು ಉಪಲಕ್ಷಣವಾಗಿ **ಸಾಕ್ಷಾನ್ಮನ್ಮಥಮನ್ಮಥಃ** ಎಂದು ಹೇಳಿರುವ ಹಾಗೆ ಎಲ್ಲರನ್ನೂ ಆಕರ್ಷಿಸುವ ರೂಪಲಾವಣ್ಯಗಳಿಂದ ಒಪ್ಪಿರುವವನೆಂಬ ಭಾವವು, **ತಿನತ್ತನೈಯುಮ್ ವಿಡಾಳ್**, **ತಿನ** - ಬಹಳ **ಸೂಕ್ಷ್ಮ**ವಾಗಿರುವ ಧಾನ್ಯ, ಇದರಿಂದ **ತಿನತ್ತನೈಯುಮ್**-ಸ್ವಲ್ಪವಾದರೂ, ಅಥವಾ ಒಂದು ಕ್ಷಣಕಾಲವಾದರೂ, **ವಿಡಾಳ್** - ಶ್ರಿಯಃಪತಿಯನ್ನನುಭವಿಸದೇ ಬಿಟ್ಟಿರಲಾರಳು. ಈಶ್ವರನಿಗೂ ಜೀವನಿಗೂ ಭರ್ತೃ ಭಾರ್ಯಾ ಸಂಬಂಧವಿರುವದರಿಂದ, ಮಹಾಪತಿವ್ರತೆಯಾದ ಸ್ತ್ರೀಯು ಹೇಗೆ ಪತಿಯನ್ನು ಒಂದು ಕ್ಷಣ ಕೂಡ ಅಗಲದೆ, ಆತನ ಲಾವಣ್ಯ, ಗುಣ, ವಿಭೂತಿ ವ್ಯಾಪಾರಗಳೊಂದಿಗಿರುವ ಆ ತನ್ನ ಸ್ವಾಮಿಯೊಂದಿಗೆ ಅನುಭವಿಸುತ್ತಾ ಆನಂದಿಸಿಕೊಂಡಿರುವಳೋ ಹಾಗೆ ಎಂಬಭಿಪ್ರಾಯವು ಮುಂದಕ್ಕೆ "**ಅವರ್ ಶೇರ್ ತಿರುಕ್ಕೋಳೂರ್ಕ್ಕೇಮನ್ನೈಕ್ಕು ವಾನ್ಪಳಿಯು ನಿನ್ನೈಯಾಳ್ ಶೆಲ್ಲನೈತ್ತನಳೇ**" ಎಂದಿರುತ್ತದೆ. **ಅವರ್ ಶೇರ್** - ಅಂತಹ ಶ್ರಿಯಃ ಪತಿಯನ್ನು ಹೋಗಿ ಸೇರಬೇಕೆಂದು, ತಿರುಕ್ಕೋಳೂರಿಗೆ, **ಶೆಲ್ಲನೈತ್ತನಳೇ**-**ಹೋಗಿ** ಸೇರಿದಳಲ್ಲವೇ. **ಮನ್ನೈಕ್ಕು** - ಅದರಿಂದ ತನ್ನ ಮನತನಕ್ಕೆ ಉಂಟಾಗುವ, **ವಾನ್ ಪಳಿನಿನ್ನೈಯಾಳ್** - ದೊಡ್ಡ ಅಪರಾಧವನ್ನು ಎಣಿಸಳು ಎಂಬರ್ಥವು" **ಇತ್ಯಾದಿಗಳಿಲ್ಪಡಿಯೇ** - ಇವೇ ಮೊದಲಾದವುಗಳ ಹಾಗೆ, ಸಮಸ್ತ ದೇಶ ಕಾಲ ಅವಸ್ಥೆಗಳಲ್ಲೂ, **ಸರ್ವೇಶ್ವರನ್ನೈ** - ಸರ್ವೇಶ್ವರನನ್ನು, **ಅನಂತಜ್ಞಾನ** - ಕೊನೆ ಇಲ್ಲದೇ ಇರುವ, ದಿವ್ಯಮಂಗಳ ವಿಗ್ರಹಗಳೇನು, ಗುಣಗಳೇನು, **ಚೇಷ್ಟಿತಙ್ಗಳಿಲ್**-ವ್ಯಾಪಾರಗಳೇನು, ಇವುಗಳಲ್ಲಿ, **ಒನ್ರುಂ** - ಯಾವುದೊಂದೂ, **ಕುರೈಯಾಮಲ್** - ನ್ಯೂನತೆಯಿಲ್ಲದೆ, **ನಿರತಿಶಯ ಭೋಗ್ಯಮಾಗ** - ಅತಿಶಯವಾದುದೇ ಇಲ್ಲದಿರುವ ಸರ್ವಶ್ರೇಷ್ಠ ಭೋಗ್ಯವಾಗಿ, **ವಿಷಯೀಕರಿತ್ತು** - ಸಾಕ್ಷಾತ್ಕರಿಸಿಕೊಂಡು, **ಇರುಕ್ಕುಮ್** - ಇರುವಂತಹ ಸ್ಥಿತಿಯಾಗಿರುತ್ತದೆ. ಕೆಲವು ಕೋಶಗಳಲ್ಲಿ "**ಸರ್ವೇಶ್ವರನ್ನೈ ಅನಂತಜ್ಞಾನ ವಿಗ್ರಹಗುಣ ಚೇಷ್ಟಿತಙ್ಗಳಿಲೊನ್ನು**

**ಕುರ್ವೈಯಾಮ್ಯ ನಿರತಿಶಯ ಭೋಗ್ಯಮಾಗ ವಿಷಯಿಯಾಕರಿತ್ತುಕ್ಕೊಣ್ಡು ನಿರ್ಕ್ಕೈವರ್**” ಎಂಬ ಪಾಠಾಂತರ ಉಂಟೆಂದು ಸಾರವಿವರಣೆಯವರು ಅಪ್ಪಣೆ ಕೊಡಿಸಿರುತ್ತಾರೆ; ಆ ಸರ್ವೇಶ್ವರನ ಅನಂತಗಳಾದ ದಿವ್ಯಮಂಗಳ ವಿಗ್ರಹಗಳು, ಕಲ್ಯಾಣಗುಣ, ದಿವ್ಯಚೇಷ್ಟಿತಗಳು ಇವುಗಳಲ್ಲಿ ಯಾವುದೊಂದರಲ್ಲೂ ನ್ಯೂನತೆ ಯಿಲ್ಲದಿರುವಿಕೆಯನ್ನು ನಿರತಿಶಯ ಭೋಗ್ಯಭೂತವಾಗಿ ಸಾಕ್ಷಾತ್ಕರಿಸಿಕೊಂಡು ನಿಲ್ಲುವದು.” ಈ ವಾಕ್ಯದಿಂದ **ಪರಿಪೂರ್ಣ ಬ್ರಹ್ಮಾನುಭವ** ವೆಂದರೇನೆಂದು ಹೇಳಲ್ಪಟ್ಟಿತು. ಇಲ್ಲಿ ಸಾಕ್ಷಾತ್ಕಾರವು ಪರಿಪೂರ್ಣನಾದ ಪರಬ್ರಹ್ಮನ ವಿಷಯ ವಾದುದು. ಆತನು ಅನಂತಗಳಾದ ವಿಗ್ರಹ, ಗುಣ, ವಿಭೂತಿ ಚೇಷ್ಟಿತಗಳಿಂದ ಯುಕ್ತನಾಗಿ ಪರಿಪೂರ್ಣನು. ಅಂತಹ ಪರಬ್ರಹ್ಮನನ್ನು ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲೂ ಹೀಗೆ ಪರಿಪೂರ್ಣವಾಗಿ ಭೋಗ್ಯವಾದುದಾಗಿ ಸಾಕ್ಷಾತ್ಕರಿ ಸುವುದೇ, ಪರಿಪೂರ್ಣ ಬ್ರಹ್ಮಾನುಭವವೆಂದು ಹೇಳಲ್ಪಟ್ಟಿತು. ಇಲ್ಲಿನ ಭೋಗಾ ನುಭವವು ಅಲ್ಲಿಯ ಅನುಭವದ ಹಾಗಲ್ಲವು. ಇಲ್ಲಿ, ಈ ಕಾಲದಲ್ಲಿ, ಅಥವಾ ಈ ಅವಸ್ಥೆಯಲ್ಲಿ ಸುಖವಿರಬಹುದು. ಇನ್ನೊಂದು ಪ್ರದೇಶದಲ್ಲಿ, ಇನ್ನೊಂದು ಕಾಲ ದಲ್ಲಿ ಅಥವಾ ಇನ್ನೊಂದವಸ್ಥೆಯಲ್ಲಿ ಸುಖವು ಬಯಲಾಗಬಹುದು, ದುಃಖ ಪ್ರಾಪ್ತಿಯಾಗಬಹುದು. ಇಲ್ಲಿ “**ಸುಖಸ್ಯಾನಂತರಂ ದುಃಖಂ, ದುಃಖಸ್ಯಾ ನಂತರಂ ಸುಖಂ**”; ಪರಮಪದದಲ್ಲಿ ಹೀಗಲ್ಲವು, ಅವಿಚ್ಛಿನ್ನವಾಗಿ ಸರ್ವದೇಶ ಸರ್ವಕಾಲ ಸರ್ವಾವಸ್ಥೆಯಲ್ಲಿಯೂ ಪರಿಪೂರ್ಣಬ್ರಹ್ಮನ ಅನುಭವವು, ಪರಿಪೂರ್ಣ ವಾಗಿ ಭೋಗ್ಯವಾಗಿರುವದು. **ಶರ್ವ್ವದೇಶ ಶರ್ವ್ವಕಾಲ ಶರ್ವ್ವಾವಸ್ಥೆಗಳಿಲುಮ್ ಭೋಗ್ಯಮಾಗ** ಎಂದು ಹೇಳಿರುವದು **ಅನಂತ ಭೋಗ್ಯ** ವೆಂದೂ ಎಂದರೆ ಪರಿ ಪೂರ್ಣವಾಗಿ ಭೋಗ್ಯವೆಂದು ಹೇಳುವದರ ವ್ಯಾಖ್ಯಾನವು. ಆದುದರಿಂದ **ಪರಿ ಪೂರ್ಣ ಬ್ರಹ್ಮಾನುಭವ** ವೆಂಬುವವರಲ್ಲಿ ಪರಬ್ರಹ್ಮನೂ ಅನಂತಗಳಾದ ವಿಗ್ರಹ ಗುಣ ವಿಭೂತಿಚೇಷ್ಟಿತಗಳುಳ್ಳವನಾದುದರಿಂದ ಪರಿಪೂರ್ಣನೂ, ಭೋಗ್ಯವೂ ಸರ್ವದೇಶ ಸರ್ವಕಾಲ ಸರ್ವಾವಸ್ಥೆಯಲ್ಲೂ ಇರುವದರಿಂದ ಪರಿಪೂರ್ಣವಾದು ದೆಂಬಭಿಪ್ರಾಯವೂ ಶ್ರೀ ಯತಿವರ್ಯರು ಅನುಗ್ರಹಿಸಿರುವ ಶ್ರೀ ವೈಕುಂಠ ಗದ್ಯ ದಲ್ಲಿ ಶ್ರಿಯಃಪತಿಯು ವಿಗ್ರಹ ಗುಣ ವಿಭೂತಿ ಚೇಷ್ಟಿತಗಳಲ್ಲಿ ಪರಿಪೂರ್ಣನೆಂಬ ಭಾವವನ್ನೂ, “**ಸರ್ವ್ವದೇಶ ಸರ್ವ್ವಕಾಲ ಸರ್ವ್ವಾವಸ್ಥೋಚಿತಾತ್ಯಂತ ಶೇಷಭಾ ವಾಯ ಸ್ವೀಕೃತೋಽನುಜ್ಞಾತಶ್ಚ**” ಎಂಬ ಪ್ರಯೋಗವನ್ನೂ ಸಹ ಕಾಣ ಬಹುದು.

ಹೀಗೆ ಮುಕ್ತನಿಗೆ ಪರಿಪೂರ್ಣ ಬ್ರಹ್ಮಾನುಭವ ಉಂಟಾದರೆ, ಛಾಂದೋಗ್ಯ ಶ್ರುತಿಯು “**ನಿರಂಜನಃ ಪರಮಂ ಸಾಮ್ಯಮುಪೈತಿ**” ಎಂಬಲ್ಲಿ ಈಶ್ವರನೊಂದಿಗೆ

**ಪರಮ ಸಾಮ್ಯ ಶ್ರುತ್ಯಭಿಪ್ರಾಯಃ ; ಭಗವತ್ಸ್ವರೂಪಂ ಭೋಗ್ಯಮ್.**

**ಇವ್ವನುಭವಮ್ ಈಶ್ವರನುಕ್ಕುಮ್ ಇವನುಕ್ಕುಮ್ ಅತ್ಯಂತ ತುಲ್ಯಮಾಗೈಯಾಲೇ ಪರಮಸಾಮ್ಯಮ್ ಶೊಲ್ಲುಗಿರದು. (೧) "ಉಣರ್**

---

**ಪರಮಸಾಮ್ಯವನ್ನು** ಬೋಧಿಸುವದರಿಂದ, "**ತಥಾವಿಧ ಭಗವದನುಭವ ಜನಿತಾನವಧಿಕಾತಿಶಯ ಪ್ರೀತಿಕಾರಿತಾಶೇಷಾವಸ್ಥೋಚಿತಾಶೇಷ ಶೇಷತೈಕರತಿ ರೂಪ ನಿತ್ಯಕಿಂಕರೋ ಭವಾನಿ**" ಎಂದು ಹೇಳಿದುದು ಹೇಗೆ? ತಾನೇ **ಪರ**ಮಾತ್ಮನಿಗೆ ಸಮಾನನಾಗುವಾಗ ಪರಿಪೂರ್ಣ ಬ್ರಹ್ಮಾನುಭವವೆಂದರೇನು? ಎಂಬ ಶಂಕಾವಿಗೆ ಮುಂದಿನ ವಾಕ್ಯದಿಂದ ಸಮಾಧಾನ ಹೇಳುವವರಾಗಿ ಪರಮ ಸಾಮ್ಯವನ್ನು ಹೇಳುವ ಶ್ರುತ್ಯಭಿಪ್ರಾಯವನ್ನು ತಿಳಿಸುತ್ತಾರೆ.

**ಪರಮಸಾಮ್ಯವನ್ನು ಹೇಳುವ ಶ್ರುತಿಯಭಿಪ್ರಾಯವು, ಭಗವತ್ಸ್ವರೂಪವು ಭೋಗ್ಯವಾದುದು.**

---

**ಇವ್ವನುಭವಮ್** - ಈ ಭೋಗವೂ ಅದರಿಂದುಂಟಾಗುವ ಆನಂದವೂ ಸಹ ಇಲ್ಲಿ ಅಭಿಪ್ರಾಯವು, **ಇವನುಕ್ಕುಮ್** - ಈ ಮುಕ್ತನಿಗೂ, **ಈಶ್ವರನುಕ್ಕುಮ್** - ಸರ್ವೇಶ್ವರನಿಗೂ, **ಅತ್ಯಂತ ತುಲ್ಯಮಾಗೈಯಾಲೇ** - ಹೆಚ್ಚಾಗಿ ಸಮವಾದುದರಿಂದ, **ಪರಮಸಾಮ್ಯ**ವೆಂದು, **ಶೊಲ್ಲುಗಿರದು** - ಹೇಳುವಂಥಾದ್ದಾಗಿರುತ್ತದೆ. ಯಾವುದು ಎಂದರೆ "**ನಿರಂಜನಃ ಪರಮಂ ಸಾಮ್ಯ ಮುಪೈತಿ**" ಎಂಬ ಶ್ರುತಿಯಲ್ಲೂ, "**ಮಮ ಸಾಧರ್ಮ್ಯಮಾಗತಾಃ**" ಇತ್ಯಾದಿ **ಸ್ಮೃತಿಯಲ್ಲೂ ತೋರಿ**ಬರುವ ಪ್ರಮಾಣವು ಎಂದು ಇಟ್ಟುಕೊಳ್ಳತಕ್ಕದ್ದು. ಸರ್ವಜ್ಞತೆಯೂ **ಉಭಯತ್ರ ಸಾಧಾರಣವಾದುದರಿಂದಲೂ**, ಆ ಸಾರ್ವಜ್ಞತೆಯು ಅನುಭವಕ್ಕೆ **ಕಾರಣವಾಗಿ**, ತನ್ಮೂಲಕ ಆನಂದವೂ ಉಂಟಾಗುವದು ಇಬ್ಬರಿಗೂ **ಸಾಧಾರಣ**ವಾದುದರಿಂದಲೂ, ಆನಂದದಲ್ಲಿ ಸಾಮ್ಯವೆಂಬ ಭಾವವು ಈ ಪರಮಸಾಮ್ಯವೇನು ಇಬ್ಬರಿಗೂ ಎಲ್ಲಾ ವಿಧವಲ್ಲೂ ಸಮವೇ ಎಂದರೆ ಭೋಗ—ಆನಂದ ಮಾತ್ರದಲ್ಲೇ ವಿನಾ ಇತರ ವಿಷಯಗಳಲ್ಲಿಲ್ಲವು ; ಭಗವಂತನಿಗೆ ಈ ಸರ್ವವೂ ತನ್ನದಾಗಿ ಅದಲ್ಲಿ ಈ ಮುಕ್ತರೂ ಸೇರಿರುವದರಿಂದ ಆನಂದವು ; ಈ ದಾಸನಾದ ಮುಕ್ತನಿಗಾದರೋ ಎಲ್ಲವೂ ತನ್ನ ಸ್ವಾಮಿಯಾದ ಸರ್ವೇಶ್ವರನದೇ ಎಂಬ

---

(೧) ತಿರುವಾಯ್‌ಮೊಳಿ ೧. ೧. ೨.

ಮುಳುನಲಮ್" ಎನ್ರುವ್. (೨) "ನಿರಸ್ತಾತಿಶಯಾಹ್ಲಾದ ಸುಖಭಾ

---

ಆನಂದವು. ಇವೆರಡೂ ಅತ್ಯಂತ ತುಲ್ಯವೆಂಬ ಭಾವವು. **ಅತ್ಯಂತ ತುಲ್ಯಮಾಗ್ಯೆಯಾಲೇ** ಎಂದು ಹೇಳಿದುದರಿಂದಲೇ ಸರ್ವವಿಷಯದಲ್ಲೂ ತುಲ್ಯವಲ್ಲವೆಂಬುದು ತೋರಿಬರುತ್ತದೆ. ಈ ಇಬ್ಬರ ಆನಂದವು ಸಮವಾದುದರಿಂದ, **ಅತ್ಯಂತ ತುಲ್ಯ**ವೆಂದೂ **ಪರಮಸಾಮ್ಯ** ವೆಂದೂ ಹೇಳಲ್ಪಟ್ಟಿತು. ವ್ಯತ್ಯಾಸ ಯಾವ ಸಂದರ್ಭಗಳಲ್ಲೆಂಬುದು ಮುಂದೆ ಹೇಳಲ್ಪಡುತ್ತದೆ. ಭಗವತ್ಸ್ವರೂಪವು ತುಂಬಾ ಭೋಗ್ಯವಾದ.ದೆಂಬುದಕ್ಕೆ ನಮ್ಮಾಳ್ವಾರ್ರವರ ಪಾಶುರವನ್ನೂ ವಿಷ್ಣುಪುರಾಣ ಶ್ಲೋಕವನ್ನೂ ಉದಾಹರಿಸಿರುತ್ತಾರೆ ನಮ್ಮಾಳ್ವಾರ್ರವರ ತಿರುವಾಯ್‌ಮೊಳಿಯ ಎರಡನೆಯ ಪಾಶುರವು :—

> **ಮನನಕ ಮಲಮರ ಮಲರ್ಮಿಶೈ ಯೆಳುದರು ।**
> **ಮನನುಣರ್ವಳವಿಲ್ಲ ಪೊರಿಯುಣರ್ವವೈಯಿಲ ।**
> **ನಿನನುಣರ್ ಮುಳುನಲ ಮೆದಿರ್ನಿಗಳ್ ವಿನು ।**
> **ಮಿನನಿಲ ನೆನನುಯಿರ್ ಮಿಗುನರೈ ಯಿಲನೇ ॥**

ಇದರರ್ಥವೇನೆಂದರೆ :—ಮನಸ್ಸಿನ ಮಲಗಳಾದ ಕಾಮ, ಕ್ರೋಧ, ಲೋಭ, ಹರ್ಷ, ಮಾನ, ಮದ, ಅಗುಣ, ವಿಷಾದ ವೆಂಬ ಎಂಟನ್ನೂ ಕಳೆದುಕೊಂಡು, ಹಾಗೆ ಮಲಗಳು ನಾಶವಾಗುವದರಿಂದ ಪ್ರಕಾಶಿಸಿ ವೃದ್ಧಿ ಹೊಂದುವ, ಮಾನಸ ಜ್ಞಾನವಾದ ಯೋಗಬಲದಿಂದ ಪರಿಚ್ಛೇದಿಸುವ ಹಾಗೆ ತೋರುವನಾಗಿ, ಬಾಹ್ಯೇಂದ್ರಿಯ ಗೋಚರವಾದ ಪ್ರಕೃತಿಗಿಂತಲೂ ವಿಲಕ್ಷಣನಾಗಿ, ಹಾಗೆಯೇ ಈ ಅಣುತ್ವಾದಿ ಧರ್ಮಗಳುಳ್ಳ ಚೇತನನಿಗಿಂತಲೂ ವಿಲಕ್ಷಣನಾಗಿ, "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂದು ಹೇಳಿರುವ ಹಾಗೆ ಸಂಪೂರ್ಣ ಜ್ಞಾನಸ್ವರೂಪನೂ, ಸಂಪೂರ್ಣಾನಂದಸ್ವರೂಪನೂ ಆದ, ಭೂತ ಭವಿಷ್ಯದ್ವರ್ತಮಾನ ಕಾಲಗಳಲ್ಲೂ ನಿಸ್ಸಮಾಭ್ಯಧಿಕನಾದ, ಸರ್ವೇಶ್ವರನೀಗ ನನಗೆ ಧಾರಕನು. ಇಲ್ಲಿ ಮುಳು ಎಂಬುದು ಮಧ್ಯೆ ಇರುವದರಿಂದ, ಮುಳು ಉಣರ್ ಮುಳುನಲಮ್ ಎಂದು ಇಟ್ಟುಕೊಳ್ಳತಕ್ಕದ್ದು. ಇದರಭಿಪ್ರಾಯವೇನೆಂದರೆ, ಸರ್ವದೇಶ ಸರ್ವಕಾಲ ಸರ್ವಾವಸ್ಥೆಯಲ್ಲೂ ಅಪ್ರಕಾಶ ಸ್ವರೂಪವೇಯಾಗಲಿ, ತನಗೆ ಅನುಕೂಲವಲ್ಲದೇ ಇರುವ ಸ್ವರೂಪವಾಗಲಿ ಇಲ್ಲವೆಂಬ ಭಾವವು. ಈ ಅಭಿಪ್ರಾಯಗಳನ್ನು "ಯಥಾ ಸೈನ್ಧವ ಘನಃ" "ಒಂದು ಹರಳು ಉಪ್ಪಿನಲ್ಲಿ ಎಲ್ಲವೂ ಹೇಗೆ ಉಪ್ಪೋ

---

(೨) ವಿ. ಪು. ೬. ೫. ೫೯.

ವೈಕಲಕ್ಷಣಾ । ಭೇಷಜಂ ಭಗವತ್ಪ್ರಾಪ್ತಿ ರೇಕಾನ್ತಾತ್ಯಂತಿಕೀಮತಾ"
ಎನ್ರುವ್, ಶೊಲ್ಲುಗಿರಪಡಿಯೇ ಭಗವತ್ಸ್ವರೂಪವ್ ಭೋಗ್ಯವಾಗ

---

ಹಾಗೆಯೇ" "ಆನನ್ದೋ ಬ್ರಹ್ಮೇತಿ ವ್ಯಜಾನಾತ್" "ಪರಮಾತ್ಮ ಸ್ವರೂಪವೇ ಆನಂದವೆಂದು ತಿಳಿಯತಕ್ಕದ್ದು" ಇತ್ಯಾದಿ ಶ್ರುತಿಗಳು ಹೇಳುತ್ತವೆ.

ವಿಷ್ಣುಪುರಾಣ ಶ್ಲೋಕಾರ್ಥವು :—"ನಿರಸ್ತಾತಿಶಯ - ಯಾವುದರಿಂದ ಬೇರೇ ಸುಖದ ಅತಿಶಯವು ನಿರಸ್ತವಾಯಿತೋ, ತಡೆಯಲ್ಪಟ್ಟಿತೋ, ಎಂದರೆ ನಿರತಿಶಯವಾದ ಎಂಬರ್ಥವು, ಅಂತಹ, ಆಹ್ಲಾದಸುಖ - ಆಹ್ಲಾದರೂಪ ಸುಖ, ಆಹ್ಲಾದವೆಂದರೆ ಇನ್ನು ಬೇರೆ ಸುಖಾನುಭವ ತನಗೆ ಬೇಕಿಲ್ಲದ ಹಾಗೆ ಉತ್ಕರ್ಷವನ್ನು ಹೊಂದಿರುವ ಸುಖವು. ಇಂತಹ ಸುಖದ ಭಾವ ವೆಂದರೆ ಆಹ್ಲಾದ ಮಾತ್ರವೇ ಇರುವದೇ ವಿನಾ ಇಲ್ಲಿನ ಸುಖದ ಹಾಗೆ ದುಃಖನಿವೃತ್ತಿ ರೂಪವಾದುದಲ್ಲವೆಂಬ ತಾತ್ಪರ್ಯವು. ಇಲ್ಲಿಯ ಸುಖವಾದರೋ "ದುಃಖಾನ್ತಪ್ರಭವಂ ಸುಖಂ" ಎಂದೂ, "ದುಃಖಸ್ಯಾನಂತರಂ ಸುಖಂ" ಎಂದೂ ಮಹರ್ಷಿಯು ಹೇಳಿರುತ್ತಾರೆ. (ಮೋಕ್ಷ ೧೭೪) ಹಾಗಲ್ಲವು. ಆಹ್ಲಾದ ಸುಖಭಾವವೇ, ಆದುದರಿಂದಲೇ ಏಕಲಕ್ಷಣಾ - ಇದೊಂದೇ ಲಕ್ಷಣವಾಗಿ ಉಳ್ಳದ್ದು, ವಿಷಯಾನುಭವ ಮಾಡಿದಹಾಗೆಲ್ಲಾ, ಇನ್ನೂ ಬೇಕು ಇನ್ನೂ ಬೇಕೆಂಬಭಿಲಾಷೆಯನ್ನು ಹೇಗೆ ವೃದ್ಧಿಗೊಳಿಸುತ್ತದೋ, ಹಾಗೆ ಈ ಪರಬ್ರಹ್ಮಪ್ರಾಪ್ತಿಯಿಂದುಂಟಾಗುವ ಆಹ್ಲಾದವು ಅನುಭವದಿಂದ ವೃದ್ಧಿ ಹೊಂದುತ್ತದೆಂಬ ಭಾವವು. ಈ ಭಗವತ್ಪ್ರಾಪ್ತಿ ಎಂಬ ಭೇಷಜಂ - ಔಷಧವು, ಯಾರಿಗೆ ಔಷಧವೆಂದರೆ ಶ್ರೀ ಪರಾಶರರು ಹೇಳುತ್ತಾರೆ :—ಸಂಸಾರ ದುಃಖಾರ್ಕ ತಾಪತಾಪಿತ ಚೇತಸಾಂ - ಸಂಸಾರದ ದುಃಖವೆಂಬ ಸೂರ್ಯನ ತಾಪದಿಂದ ಬೆಂದುಹೋದ ಮನಸ್ಸುಳ್ಳವರಿಗೆ ಇದು ತಾಪಶಮನರೂಪವಾದ ಪರಮೌಷಧವೆಂಬ ಭಾವವು. ಆ ಪ್ರಾಪ್ತಿ ಎಂಥಾದ್ದೆಂದರೆ, ಏಕಾಂತಾ - ಪ್ರಯೋಜನಾಂತರದ ಗಂಧ ಕೂಡ ಇಲ್ಲದಿರುವಂಥಾದ್ದು ಮತ್ತು ಅತ್ಯಂತಿಕೀ - ಅಂತ್ಯವಿಲ್ಲದ ಹಾಗೆ ಇರುವಂಥಾದ್ದು ಎಂದರೆ ನಿತ್ಯವಾಗಿರುವಂಥಾದ್ದು. ಇಂತಹ ಭಗವತ್ಪ್ರಾಪ್ತಿಯು ಪರಮೌಷಧವೆಂಬುವದು, ಮತಾ - ನನ್ನಭಿಪ್ರಾಯವು. ಆ ಭಗವತ್ಪ್ರಾಪ್ತಿ, ಅದರಿಂದುಂಟಾಗುವ ಆಹ್ಲಾದಕ್ಕೆ ಎಂದಿಗೂ ಚ್ಯುತಿಯಿಲ್ಲವೆಂಬ ಭಾವವು ತೋರಿಬರುತ್ತದೆ" ಎನ್ರುವ್ - ಎಂದು, ಶೊಲ್ಲುಗಿರಪಡಿಯೇ - ಹೇಳಿರುವ ಹಾಗೆ, ಭಗವತ್ಸ್ವರೂಪವು ಭೋಗ್ಯವಾದುದಾಗುತ್ತದೆ. ಇಂತಹ ಭಗವತ್ಸ್ವರೂಪಾನುಭವದಲ್ಲಿ ಮುಕ್ತನ ಆನಂದವು ಭಗವಂತನಾನಂದಕ್ಕೆ ಸಮಾನವಾದ್ದುದು ಎಂಬ ತಾತ್ಪರ್ಯವು.

**ಪ್ರಾಪ್ತವರ್. ಮತ್ತುಳ್ಳವೈ ಭೋಗ್ಯಮಾಪ್ಪಡಿ ಯೆಙ್ಙನೇ ಎನ್ನಿಲ್ ? ರಾಜಮಹಿಷಿಕ್ಕು ರಾಜಾ ಭೋಗ್ಯನಾನಾಲ್ ಅವನುಕ್ಕು ಅಭಿಮತಙ್ಗಳಾಯ್ ಅವನುಡೈಯ ಭೋಗತ್ತುಕ್ಕುರುಪ್ಪಾನ ಭೋಗೋಪಕರಣ ಭೋಗಸ್ಥಾನಾದಿಗಳುಮ್ ಇವಳುಕ್ಕು ಅನುಕೂಲಮಾಯಿರುಕ್ಕುಮಾಪ್ಪೋಲೆ, ಇಙ್ಙುಮ್ ಭಗವತ್ಸ್ವರೂಪಾನುಬಂಧಿಗಳಾನವೈಯೆಲ್ಲಾಮ್**

---

ಹೀಗೆ ಈ ವಾಕ್ಯದಿಂದ ಭಗವತ್ಸ್ವರೂಪವು ಮುಕ್ತನಿಗೆ ಭೋಗ್ಯವೆಂದು ಹೇಳಲ್ಪಟ್ಟಿತು. ಆದರೆ ಇದರ ಹಿಂದಿನ ವಾಕ್ಯದಲ್ಲಿ ಅನಂತಗಳಾದ ಗುಣವಿಭೂತಿ ಚೇಷ್ಟಿತಗಳೊಂದರಲ್ಲೂ ನ್ಯೂನತೆಯಿಲ್ಲದ ಹಾಗೆ ಭೋಗ್ಯವಾಗಿರುತ್ತದೆಂದು ಹೇಳಲ್ಪಟ್ಟಿತಲ್ಲಾ ; ಈ ಮಿಕ್ಕ ಗುಣವಿಭೂತಿ ಚೇಷ್ಟಿತಗಳೂ ಕೂಡ ಹೇಗೆ ಭೋಗ್ಯವು ಎಂದು ಕೇಳಬಹುದು. ಅದಕ್ಕೆ ಒಂದು ಲೋಕದೃಷ್ಟಾಂತ ಮೂಲಕ ಉತ್ತರವನ್ನೀಯುತ್ತಾರೆ.

**ಮತ್ತುಳ್ಳವೈ** - ಭಗವತ್ಸ್ವರೂಪವಲ್ಲದೆ ಮಿಕ್ಕ ವಿಶೇಷಣಗಳಾಗಿರುವ ಗುಣವಿಭೂತಿ ಚೇಷ್ಟಿತಗಳೆಲ್ಲಾ, **ಭೋಗ್ಯಮಾಪ್ಪಡಿ ಎಙ್ಙನೇ ಎನ್ನಿಲ್** - ಹೇಗೆ ಭೋಗ್ಯವಾಗುತ್ತವೆ ? ಎಂದರೆ, **ರಾಜಮಹಿಷಿಕ್ಕು** - ರಾಜನ ಪಟ್ಟಮಹಿಷಿಗೆ, **ರಾಜಾ** – ರಾಜನು, ಭೋಗ್ಯನಾದರೆ, **ಅವನುಕ್ಕು** - ಆ ರಾಜನಿಗೆ, **ಅಭಿಮತಙ್ಗಳಾಯ್**-ಇಷ್ಟವಾದವುಗಳಾಗಿ, **ಅವನುಡೈಯ ಭೋಗತ್ತುಕ್ಕು**- ಆ ರಾಜನ ಭೋಗಕ್ಕೆ, **ಉರುಪ್ಪಾನ** - ಉಪಯುಕ್ತಗಳಾದ, **ಭೋಗೋಪಕರಣ** – ಭೋಗಸಾಮಗ್ರಿಗಳು, ವಾಹನ, ಧ್ವಜ, ಛತ್ರ, ಚಾಮರ, ಸಿಂಹಾಸನಾದಿಗಳು, **ಭೋಗಸ್ಥಾನಾದಿಗಳುಮ್** - ಉದ್ಯಾನವನ, ಪ್ರಾಸಾದ ಮೊದಲಾದವುಗಳು, **ಇವಳುಕ್ಕು**-ಈ ಮಹಾಪತಿವ್ರತೆಯಾದ ಪಟ್ಟಮಹಿಷಿಗೆ, **ಅನುಕೂಲಮಾಯಿರುಕ್ಕುಮಾಪ್ಪೋಲೆ** - ಅನುಕೂಲವಾಗಿರುವ ಹಾಗೆ ಎಂದರೆ ಸುಖಕರವಾಗಿರುವ ಹಾಗೆ, **ಇಙ್ಙುಮ್** - ಈ ಸಂದರ್ಭದಲ್ಲೂ, **ಭಗವತ್ಸ್ವರೂಪಾನುಬಂಧಿಗಳಾನವೈ** - ಭಗವಂತನ ಸ್ವರೂಪಕ್ಕೆ ಸಂಬಂಧಪಟ್ಟ ವಿಶೇಷಣಗಳಾದ ಗುಣವಿಭೂತಿ ಚೇಷ್ಟಿತಗಳೆಲ್ಲಾ, **ಭೋಗ್ಯಮಾಗಕ್ಕುರೈಯಿಲ್ಲೈ** - ಈ ಮುಕ್ತನಿಗೆ ಭೋಗ್ಯವಾಗಿರಲು ಏನೊಂದೂ ಕುಂದಕವಿರುವದಿಲ್ಲವು. ಒಬ್ಬ ರಾಜನ ಪಟ್ಟಮಹಿಷಿಗೆ ರಾಜನು ತುಂಬಾ ಭೋಗ್ಯವಾಗಿದ್ದರೆ, ರಾಜನ ಭೋಗಕ್ಕೆ ಬೇಕಾದ ಭೋಗೋಪಕರಣ ಭೋಗಸ್ಥಾನಗಳೆಲ್ಲಾ ಹೇಗೆ ಆಕೆಗೂ ಅನುಕೂಲವಾಗಿ, ಸುಖರೂಪವಾಗಿ, ಭೋಗರೂಪವಾಗಿರುತ್ತವೆಯೋ ಹಾಗೆಯೇ ಸರ್ವೇಶ್ವರನ

**ಭೋಗ್ಯವಾಗಕ್ಕುರೈ ಇಲ್ಲೈ. ಇಪ್ಪಡಿ ಸರ್ವಪ್ರಕಾರ ವಿಶಿಷ್ಟನಾಯ್ ಕ್ಕೊಂಡು ಸರ್ವೇಶ್ವರನ್ ಭೋಗ್ಯನೆನ್ರು ಮುಡಿವರ್ ಶ್ರುತಿ ಸ್ಮೃತ್ಯಾದಿ**

---

ಸ್ವರೂಪಕ್ಕೆ ಸೇರಿದ ಸಕಲ ವಿಶೇಷಣಗಳೂ ಕೂಡ ಭಗವತ್ಸ್ವರೂಪದೊಂದಿಗೆ ಭೋಗ್ಯಭೂತವಾದವುಗಳೇ ಎಂಬ ಭಾವವು. ರಾಜಭೋಗಗಳೂ ಭೋಗೋಪ ಕರಣಗಳೂ, ಭೋಗಸ್ಥಾನಗಳೂ ಕೂಡ ಪತಿವ್ರತೆಯಾದ ಪತ್ನಿಗೆ ಅನುಕೂಲವಾ ಗುತ್ತದೇ ವಿನಾ ದುಷ್ಟ ಸ್ತ್ರೀಯಾದ ಪತ್ನಿಯಲ್ಲಿ ವಿಪರೀತವಾದವುಗಳೇ ಆಗುತ್ತವೆ. ಮುಕ್ತನಿಗೂ ಪರಮೇಶ್ವರನಿಗೂ, ಪತಿಪತ್ನಿ ಸಂಬಂಧವಿರುವುದರಿಂದ ದೃಷ್ಟಾಂತವು ಉಪಪನ್ನವು ಇಲ್ಲಿ ಅನುಕೂಲವಾಗಿರುವಿಕೆಯೇ ಸುಖವೆಂದೂ ಭೋಗವೆಂದೂ ಹೇಳಿಸಿಕೊಳ್ಳಲ್ಪಡುತ್ತದೆ ರಾಜಪತ್ನಿಗೆ ರಾಜನೂ ರಾಜನಿಗೆ ಸಂಬಂಧಪಟ್ಟ ಭೋಗೋಪಕರಣ ಭೋಗಸ್ಥಾನಾದಿಗಳೇನೋ ಒಂದು ಕಾಲದಲ್ಲಿ ಭೋಗ್ಯವಾ ಗಿರಬಹುದು. ಅನಂತರ ವೃದ್ಧತೆಯುಂಟಾಗಿ ಜೀಸರ ಆಧವಾ ವ್ಯಾಧಿಯು ಪ್ರಾಪ್ತವಾದರೆ ಆಗ ಭೋಗ್ಯವಿಲ್ಲದೆ ಹೋಗಬಹುದು. ಹಾಗೆ ಎಂದಿಗೂ ಇಲ್ಲವು ಎಂಬಭಿಪ್ರಾಯವು ಪತಿವ್ರತಾ ಶಿರೋಮಣಿಯೂ ಕೂಡ ಹಾಗೆ ಎಂದಿಗೂ ಜಿಹಾಸೆಯನ್ನು ತೋರುವದಿಲ್ಲವ. ಪತಿವ್ರತಾ ಧರ್ಮಕ್ಕೆ ಪ್ರಥಮೋದಾಹರಣೆ ಯಾದ ಸೀತೆಯೇ ಹಾಗೆ ಹೇಳಿಕೊಂಡಿರುತ್ತಾಳೆ. ಕೌಸಲ್ಯೆಯು ನೊಸೆಯನ್ನು ಕುರಿತು ಹೇಳುತ್ತಾಳೆ. ಓ ಸೀತೆಯೇ ನಿನ್ನ ಪತಿಯು ರಾಜಕುಮಾರನೆಂದೆಣಿಸಿ ಸಮಸ್ತ ರಾಜಭೋಗಗಳನ್ನೂ ಅನುಭವಿಸುತ್ತಿರುವಾಗ ನೀನು ಆತನಿಗೆ ಶುಶ್ರೂ ಷಾದಿಗಳನ್ನು ಮಾಡುತ್ತಿದ್ದುದು ದೊಡ್ಡದಲ್ಲವು ಈಗ ವನಚಾರಿಯಾಗಿ ನಾರುಮುಡಿ ಯನ್ನುಟ್ಟು ಕಂದಮೂಲಾದಿಗಳನ್ನು ತಿನ್ನುತ್ತಾ ಪೃಥ್ವೀಶಯ್ಯನಾಗಿರುವಾಗಲೂ ಪತಿಯನ್ನು ತುಚ್ಛವಾಗಿ ಕಾಣದೆ ಶುಶ್ರೂಷಾದಿಗಳನ್ನು ಮಾಡುವದು ಯುಕ್ತವು, ಎನ್ನಲು, ಅದಕ್ಕೆ ಸೀತೆಯು ಹೇಳುತ್ತಾಳೆ:—

ಮಿತಂದದಾತಿ ಹಿ ಪಿತಾ ಮಿತಂ ಮಾತಾ ಮಿತಂ ಸುತಃ ।
ಅಮಿತಸ್ಯ ಚ ದಾತಾರಂ ಭರ್ತಾರಂ ಕಾನಪೂಜಯೇತ್ ॥

ಅಮಿತವಾಗಿ ಕೊಡುವ ದಾತೃವು ಭರ್ತಾ. ಅಂತವನನ್ನು ಯಾರೇ ಆಗಲಿ ಪೂಜಿಸದೇ ಇರುವರೇ? ಎಂದು ಉತ್ತರ ಹೇಳಿದ್ದಲ್ಲದೆ, ಶ್ರೀರಾಮನೊಂದಿಗೆ "ಯಸ್ತ್ವಯಾ ಸಹ ಸಸ್ವರ್ಗೋ ನಿರಯೋಯಂ ತ್ವಯಾ ವಿನಾ" ಎಂದು ಹೇಳಿರುವ ಹಾಗೆ ಇರುವ ಭೋಗಸ್ಥಾನವೇ ಸ್ವರ್ಗವು, ಆತನೊಂದಿಗಿಲ್ಲದಿರುವ ಸ್ಥಳವೇ ತನಗೆ ನರಕವು. ಇದು ಕಾಲ ಅವಸ್ಥೆಗಳಿಗೂ ಉಪಲಕ್ಷಣವು.

ಹೀಗೆ ಸರ್ವವಿಶೇಷಣಗಳೊಂದಿಗೆ ಯುಕ್ತನಾಗಿ ಸದಾ ಸರ್ವೇಶ್ವರನು ಭೋಗ ಭೂತನೆಂಬುದಕ್ಕೆ ಶಾಸ್ತ್ರಪ್ರಮಾಣಗಳುಂಟೆಂದು ಮುಂದೆ ತಿಳಿಸುತ್ತಾರೆ. **ಇಪ್ಪಡಿ**-ಹೀಗೆ ಮೇಲೆ ಉಪಪಾದಿಸಿದ ರೀತಿಯಲ್ಲಿ, **ಸರ್ವಪ್ರಕಾರ ವಿಶಿಷ್ಟನಾಯ್‌ಕ್ಕೊಂಡು**-ಸಮಸ್ತ ರೂಪಗುಣ ವಿಭವೈಶ್ವರ್ಯಾದಿ ವಿಶೇಷಗಳಿಂದ ಯುಕ್ತನಾಗಿ, ಲಕ್ಷ್ಮೀ ವಿಶಿಷ್ಟತೆಯೂ ಕೂಡ ಇದರಿಂದ ಹೇಳಿದಂತಾಯಿತು, **ಸರ್ವೇಶ್ವರನ್** - ಶ್ರೀ ವಾಸು ದೇವನು, **ಭೋಗ್ಯನು, ಎನ್ನುಮಿಡಂ** - ಎನ್ನುವ ಪ್ರಮಾಣವು, ಶ್ರುತಿ ಸ್ಮೃತಿ ಮೊದಲಾದವುಗಳು, ಇಲ್ಲಿ ಆದಿಶಬ್ದದಿಂದ ಇತಿಹಾಸ ಪುರಾಣಗಳೂ ಹೇಳಲ್ಪಟ್ಟವು, **ಪ್ರಸಿದ್ಧಮ್** - ಪ್ರಸಿದ್ಧವಾದುದು, ನಿರ್ವಿವಾದವಾಗಿ ಸ್ಥಾಪಿತವಾದುದು ಎಂಬ ಭಾವವು. ಈ ವಿಷಯದಲ್ಲಿ ಕೆಲವರು ಸಂದೇಹಪಟ್ಟು ಆತನು ನಿರ್ವಿಶೇಷನೆಂದು ಹೇಳುವದು ಸುತರಾಂ ಸರಿಯಲ್ಲವೆಂಬಭಿಪ್ರಾಯವು. ಶ್ರುತಿ ಪ್ರಮಾಣಗಳು ಯಾವುವೆಂದರೆ :—

೧. **"ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ"** (ತೈ. ಆನಂದ. ೧) ಮುಕ್ತಾತ್ಮನು, ಸರ್ವವಿಧವಾಗಿ ನೋಡುವ ಎಂದರೆ ಸಙ್ಕಲ್ಪಿಸುವ ಪರಬ್ರಹ್ಮನೊಂದಿಗೆ ಆತನ ಕಲ್ಯಾಣಗುಣಗಳೇ ಮೊದಲಾದವುಗಳನ್ನು ಭೋಗ್ಯವಾದುವಾಗಿ ಅನುಭವಿಸುವನು.

೨. **"ರಸಗ್ಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ"** (ತೈ. ಆನಂದ. ೭. ೧) ಈ ಮುಕ್ತನು ಆನಂದಸ್ವರೂಪನನ್ನು ಮತ್ತು ಆನಂದಗುಣಕನನ್ನು ಪ್ರಾಪ್ಯವಾಗಿ ಹೊಂದಿ, ನಿರತಿಶಯಾನಂದ ಹೊಂದಿದವನಾಗುವನು.

೩. **"ನಪಶ್ಯೋ ಮೃತ್ಯುಂ ಪಶ್ಯತಿ ನರೋಗನ್ನೋತ ದುಃಖತಾಂ ಸರ್ವಂ ಹ ಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಶಃ"** (ಛಾಂ. ೭. ೨೬. ೨) ಬ್ರಹ್ಮವಿತ್ತಾದ ಮುಕ್ತನು ಮರಣವನ್ನೇಯಾಗಲಿ, ರೋಗವನ್ನೇಯಾಗಲಿ, ಈ ಜಗತ್ತಿನಲ್ಲಿ ಕಾಣಬರುವ ಕ್ಲೇಶಗಳನ್ನೇಯಾಗಲಿ ಕಾಣುವದಿಲ್ಲವು; ಎಂದರೆ ಸಂಕಲ್ಪಮಾತ್ರದಿಂದಲೇ ಸಂಕಲ್ಪಿಸಿದುದನ್ನೆಲ್ಲಾ ಅನುಭವಿಸುವನು. ಜಗತ್ತೂ ಕೂಡ ಬದ್ಧನ ಹಾಗೆ ಈತನಿಗೆ ಪ್ರತಿಕೂಲವಲ್ಲವು. ಪಿತ್ತರೋಗಿಗೆ ಹಾಲು ಕಹಿ, ಆ ರೋಗವಿಲ್ಲದವನಿಗೆ ಹಾಲು ಹೇಗೆ ಭೋಗ್ಯವೋ ಹಾಗೆ ಎಂಬಭಿಪ್ರಾಯವು.

ಸ್ಮೃತಿಗಳು :—

೧. **"ಇದಂ ಜ್ಞಾನ ಮುಪಾಶ್ರಿತ್ಯ ಮಮಸಾಧರ್ಮ್ಯಮಾಗತಾಃ । ಸರ್ಗೇಽಪಿ ನೋಪಜಾಯನ್ತೇ ಪ್ರಳಯೇ ನವ್ಯಥನ್ತಿ ಚ"** ಈ ಮುಂದೆ ನಾನು ಉಪಪಾದಿಸಿ ಹೇಳುವ ಜ್ಞಾನವನ್ನಾಶ್ರಯಿಸಿ ಗುಣಾಷ್ಟಕ ಆವಿರ್ಭಾವ ಸ್ವಸ್ವರೂಪಾವಿರ್ಭಾವ ಇವುಗಳು ಉಂಟಾಗುವದರಿಂದ ನನ್ನೊಂದಿಗೆ ಸಮಾನವಾದ

**ಗಳಿಲೇ ಪ್ರಸಿದ್ಧಮ್. ಇವ್ವರ್ಥತ್ತೈ ಭೂಮಾಧಿಕರಣತ್ತಿಲೇ ಸಾಧಿತ್ತರುಳಿನಾರ್.**

---

ಭೋಗ, ಆನಂದವನ್ನು ಹೊಂದಿದವರು ಸೃಷ್ಟಿಯಲ್ಲಿ ಪುನಃ ಹುಟ್ಟುವದಿಲ್ಲವು, ಪ್ರಳಯಕ್ಕೆ ಸಿಕ್ಕಿ ಕ್ಲೇಶಪಡುವದಿಲ್ಲವು.

ಹೀಗೆ ಸರ್ವವಿಶೇಷಣಗಳಿಂದಲೂ ಯುಕ್ತನಾದ ಸರ್ವೇಶ್ವರನು ಮುಕ್ತನಿಗೆ ಪರಮಭೋಗ್ಯನಾಗಿರುವನು ಎಂದು ಹೇಳಿದುದಕ್ಕೆ ಶ್ರುತಿ ಸ್ಮೃತಿ ಪ್ರಮಾಣಗಳೇನೋ ಉಂಟು ಎಂದು ಒಪ್ಪತಕ್ಕದ್ದೇ. ಆದರೆ ಶ್ರೀ ಯತಿವರ್ಯರೂ ಹೀಗೆಯೇ ಅಭಿಪ್ರಾಯಪಟ್ಟಿದ್ದಾರೋ ? ಎಂದರೆ, ಅವರೂ ಶ್ರೀ ಭಾಷ್ಯದಲ್ಲಿ ಭೂಮಾಧಿಕರಣದಲ್ಲಿ ಹಾಗೆಯೇ ಉಪಪಾದಿಸಿರುತ್ತಾರೆಂದು ತಿಳಿಸುತ್ತಾರೆ.

**ಇವ್ವರ್ಥತ್ತೈ** - ಹೀಗೆ ಸರ್ವಪ್ರಕಾರ ವಿಶಿಷ್ಟನಾದ ಸರ್ವೇಶ್ವರನೇ ಭೋಗ್ಯಭೂತನೆಂಬಭಿಪ್ರಾಯವನ್ನು, **ಭೂಮಾಧಿಕರಣತ್ತಿಲೆ**-ವ್ಯಾಸಸೂತ್ರದ ಭೂಮಾಧಿಕರಣದ ಭಾಷ್ಯದಲ್ಲಿ, **ಸಾಧಿತ್ತು ಅರುಳಿನಾರ್** - ಸ್ಥಾಪಿಸಿ ಕೃಪೆಗೈದಿರುತ್ತಾರೆ. ಈ ಭೂಮಾಧಿಕರಣದ ಸೂತ್ರವು ಯಾವುದೆಂದರೆ :— **ಭೂಮಾ ಸಂಪ್ರಸಾದಾದಧ್ಯುಪದೇಶಾತ್** - ಭೂಮ ಶಬ್ದವಾಚ್ಯನು ಅಥವಾ ಭೂಮಗುಣ ವಿಶಿಷ್ಟನು ಪರಮಾತ್ಮನು ಜೀವಾತ್ಮನಲ್ಲವು ; ಏಕೆಂದರೆ ಈತನು, **ಸಂಪ್ರಸಾದಾಧಿ** - ಈ ಜೀವಾತ್ಮನಿಗಿಂತ ಅಧಿಕನೆಂದು, **ಉಪದೇಶಾತ್** - ಶ್ರುತಿಯಲ್ಲಿ ಉಪದೇಶಿಸಿರುವದರಿಂದ **ಭೂಮಾ** ಶಬ್ದಕ್ಕೆ ಅರ್ಥವೇನೆಂದರೆ :—**"ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸಭೂಮಾ"** "**ಯತ್ರ** - ಯಾವ ಪ್ರಸಿದ್ಧನಾದ ಪರಮಾತ್ಮನೆಂಬ ವಸ್ತುವು, **ಅನುಭೂಯಮಾನೇಸತಿ**-ಅನುಭವಿಸಲ್ಪಡಲಾಗಿ, ಆತನಿಗಿಂತ ಬೇರೆಯಾವುದೂ ನೋಡಲ್ಪಡುವದೂ ಇಲ್ಲವೋ, ಕೇಳಲ್ಪಡುವದೂ ಇಲ್ಲವೋ, ತಿಳಿಯಲ್ಪಡುವದೂ ಇಲ್ಲವೋ, ಅಂತಹ ವಸ್ತುವು ಭೂಮಾ ಎಂದು ಹೇಳಿಸಿಕೊಳ್ಳುತ್ತದೆ." ಮತ್ತು **"ಅಥ ಯತ್ರಾನ್ಯತ್ಪಶ್ಯತಿ ಅನ್ಯಚ್ಛೃಣೋತಿ ಅನ್ಯದ್ವಿಜಾನಾತಿ ತದಲ್ಪಂ"** "ಯಾವ ವಸ್ತುವನ್ನನುಭವಿಸಿದ ನಂತರ ಅದಕ್ಕಿಂತಲೂ ಬೇರೆಯಾದುದು ಕಾಣಬೇಕು, ಕೇಳಬೇಕು, ತಿಳಿಯಬೇಕೆಂದಾಗುತ್ತದೋ ಆ ವಸ್ತುವು ಅಲ್ಪವಾದುದು" (ಛಾಂ. ೭. ೨೪ ೧) ಎಂದು ಉಪನಿಷತ್ತು ಹೇಳುತ್ತದೆ. ಅನವಧಿಕಾತಿಶಯ ಸುಖರೂಪನಾದ ಪರಬ್ರಹ್ಮನನ್ನನುಭವಿಸಿದ ನಂತರ, ಇನ್ನ್ಯಾವದನ್ನೂ ಕೂಡ ಕಣ್ಣೆತ್ತಿ ಮುಕ್ತನು ನೋಡನು. ಆದುದರಿಂದ ಈ ಮುಕ್ತನೂ ಆತನ ವಿಭೂತಿಗೆ ಸೇರಿದವನಾಗಿ ಆತನ ಸ್ವರೂಪ

ದೊಂದಿಗೆ ಗುಣವಿಭೂತಿ ಐಶ್ವರ್ಯಗಳನ್ನೂ ಅನುಭವಿಸುವನಾಗಿ, ತದ್ವ್ಯತಿರಿಕ್ತವಾದವುಗಳೊಂದನ್ನೂ ಕೂಡ ಕಣ್ಣೆತ್ತಿ ನೋಡನು. ಏಕೆಂದರೆ ಮಿಕ್ಕಿದ್ದೆಲ್ಲವೂ ಅತಿ ತುಚ್ಛವಾದವು. ಈ ಮುಕ್ತ ದೆಶೆಯಲ್ಲಿ ಅನುಭವಿಸುವದೆಲ್ಲಾ ಅನುಕೂಲವಾದವುಗಳಾಗಿ ನಿರತಿಶಯ ಸುಖರೂಪವಾದವು, ಪ್ರತಿಕೂಲವೇ ಇಲ್ಲದುದರಿಂದ ದುಃಖ ಗಂಧವೂ ಇಲ್ಲವು.

ಆದರೆ ಈ ಜಗತ್ತೂ ಪರಮಾತ್ಮನ ವಿಭೂತಿಯಲ್ಲೇ ಅಂತರ್ಗತವಾದರೂ ಪರಮಾತ್ಮನಿಗಿಂತಲೂ ಬೇರೆಯಾದುದೇ ಇದರನುಭವವು ಪರಿಮಿತ ಸುಖರೂಪವಾಗಿಯೂ ದುಃಖಮಿಶ್ರವಾಗಿಯೂ ಇರುವಂಥಾದ್ದು, ಹೀಗಿರುವಂಥಾದ್ದೂ ಕೂಡ ಮುಕ್ತನಿಗೆ ಸುಖರೂಪವಾದುದು ಹೇಗೆ ಎಂಬಾಕ್ಷೇಪವು ತೋರಬಹುದು. ಇದಕ್ಕೆ ಹಿಂದೆ ಉದಾಹರಿಸಿರುವ ಶ್ರುತಿಯೇ ಸಮಾಧಾನವನ್ನು ಹೇಳುತ್ತದೆ. ಕರ್ಮವಶ್ಯನಾದವನು ಈ ಜಗತ್ತು ಪರಮಾತ್ಮನಿಗಿಂತ ಸಂಪೂರ್ಣವಾಗಿ ಬೇರೆಯಾದುದೆಂದು ಭಾವಿಸಿ ಅನುಭವಿಸುವದರಿಂದ, ಕರ್ಮಾನುರೂಪವಾಗಿ ಪರಿಮಿತ ಸುಖರೂಪವಾದುದಾಗಲಿ, ದುಃಖರೂಪವಾದುದಾಗಲಿ ಆಗುತ್ತದೆ. ಮುಕ್ತದೆಶೆಯಲ್ಲಿ ಈ ಕರ್ಮವೆಂಬ ವ್ಯಾಧಿಯು ತೊಲಗುವದರಿಂದ ಸರ್ವೇಶ್ವರನ ವಿಭೂತಿಯನ್ನೆಲ್ಲಾ ಸರ್ವೇಶ್ವರನೊಂದಿಗೆ ಸಾಕ್ಷಾತ್ಕರಿಸುವದರಿಂದ ನಿರತಿಶಯ ಸುಖವೇ ವಿನಾ ದುಃಖರೂಪವಲ್ಲವು. ಇದಕ್ಕೆ ಶ್ರೀಭಾಷ್ಯಕಾರರು ಕೊಟ್ಟ ದೃಷ್ಟಾಂತವು ಮೇಲೆ ಹೇಳಲ್ಪಟ್ಟಿತು. ಪಿತ್ತವ್ಯಾಧಿಪೀಡಿತನಿಗೆ ಹಾಲು ಕಹಿಯಾಗಿ ತೋರುತ್ತದೆ. ಆ ವ್ಯಾಧಿಯಿಂದ ನಿವೃತ್ತನಾದವನಿಗೆ ಹೇಗೆ ಅದೇ ಸ್ವಾದುವಾಗುತ್ತದೋ ಹಾಗೆ ಎಂಬ ಭಾವವು. ಈ ಸಂದರ್ಭದಲ್ಲೇ ಈ ಆಕ್ಷೇಪವು ತೋರಬಹುದಾದುದರಿಂದ ವಿವರಿಸಿರುತ್ತದೆ. ಸ್ವಾಮಿ ದೇಶಿಕರವರೇ ಮುಂದೆ ಚೆನ್ನಾಗಿ ಉಪಪಾದನೆ ಮಾಡುತ್ತಾರೆ.

ಇಂತಹ ನಿರತಿಶಯ ಭೋಗ್ಯತ್ವವು ಭಗವತ್ಸ್ವರೂಪ ಗುಣವಿಭೂತಿಗಳುಳ್ಳ ಭೋಗೋಪಕರಣ ಭೋಗಸ್ಥಾನಗಳನ್ನೂ ಉಳ್ಳ ದಿವ್ಯ ವೈಕುಂಠದಲ್ಲಿರುವದರಿಂದ ಇದಕ್ಕೆ ಪರಮಪದವೆಂಬ ಹೆಸರೆಂದು ತಿಳಿಸುವವರಾಗಿ, ಅಂತಹ ಭೋಗ್ಯತ್ವವಿರುವದರಿಂದ ಪರಮ ಪದಕ್ಕೆ ರೂಢಿಯಿಂದಲೂ ವ್ಯುತ್ಪತ್ತಿ ಮೂಲಕವಾಗಿಯೂ ಮೂರು ಅರ್ಥಗಳೆಂದು ತಿಳಿಸುತ್ತಾರೆ (೧) ನಿರತಿಶಯಾನಂದ ರೂಪವಾದ ಪ್ರಾಪ್ಯವಾದ ಭಗವತ್ಸ್ವರೂಪಕ್ಕೂ, (೨) ನಿರತಿಶಯಾನಂದ ಸ್ಥಾನವಾದ ದಿವ್ಯ ವೈಕುಂಠಕ್ಕೂ, (೩) ಅಂತಹ ಸ್ಥಳವನ್ನು ಸೇರಿ ಅಂತಹ ಪ್ರಾಪ್ಯವನ್ನು ಹೊಂದಿ ನಿರತಿಶಯಾನಂದವನ್ನು ಹೊಂದುವ ಮುಕ್ತನಿಗೂ ಪರಮಪದ ಶಬ್ದವು ಅನ್ವಯಿಸುತ್ತದೆಂದು ಉಪದೇಶಿಸುತ್ತಾರೆ.

## ಪರಮಪದ ಶಬ್ದಸ್ಯ ತ್ರಯಃ ಅರ್ಥಾಃ

ಇವತ್ತಿಲ್ ನಿರತಿಶಯಾನುಕೂಲತ್ತಾಲೆ ಪರಮ ಪ್ರಾಪ್ಯಮಾಗೈಯಾಲೆ ಭಗವತ್ಸ್ವರೂಪತ್ತೈ ಪರಮಪದಮೆಙ್ಗಿರದು. ಇಬ್ಭಗವತ್ಸ್ವರೂಪತ್ತಿನುಡೈಯ ಪರಿಪೂರ್ಣಾನುಭವಮ್ ಪೆರುವದು, ಭೋಗ್ಯತಮಮಾಯ್ ಸರ್ವೋತ್ತರಮಾಯ್ ಇರುಪ್ಪದೊರುಸ್ಥಾನ ವಿಶೇಷತ್ತಿಲೆ ಶೆನ್ರಾಲಾಗೈಯಾಲೇ, ಅನ್ದ ಸ್ಥಾನವಿಶೇಷತ್ತೈಯುಮ್ ಪರಮಪದಮ್

---

## ಪರಮಪದ ಶಬ್ದದ ಮೂರು ವಿಧವಾದ ಅರ್ಥಗಳು.

೧. **ಇವತ್ತಿಲ್** - ಈ ಪರಬ್ರಹ್ಮನ ದಿವ್ಯಾತ್ಮಸ್ವರೂಪ ವಿಗ್ರಹಗುಣ ವಿಭೂತ್ಯಾದಿಗಳ, **ನಿರತಿಶಯಾನುಕೂಲತ್ತಾಲೆ** - ಸರ್ವೋತ್ಕೃಷ್ಟ ಅನುಕೂಲ ಮೂಲಕವಾಗಿ, **ಪರಮಪ್ರಾಪ್ಯಮಾಗೈಯಾಲೆ** ಪರಮಪ್ರಾಪ್ಯವಾಗುವದರಿಂದ, ಯಾವದಕ್ಕಿಂತ ಉತ್ಕೃಷ್ಟವಾದುದಿಲ್ಲವೋ ಅದು **ಪರಮ** ವೆಂದು ಹೇಳಿಸಿಕೊಳ್ಳುತ್ತದೆ, **ಭಗವತ್ಸ್ವರೂಪತ್ತೈ**-ಭಗವಂತನ ಸ್ವರೂಪವನ್ನು, **ಪರಮಪದಮೆಙ್ಗಿರದು** - ಪರಮಪದವೆಂದು ಹೇಳುವದು. ಶ್ರಿಯಃಪತಿಗೂ ಪರಮಪದವೆಂಬ ಹೆಸರು. ಎಲ್ಲವೂ ಅನುಕೂಲವಾಗಿ ತನ್ಮೂಲಕ ನಿರತಿಶಯ ಸುಖರೂಪವಾಗಿ ಪರಮಪ್ರಾಪ್ಯವಾಗಿರುವದರಿಂದ **ಪರಮಪದ** ವೆಂದು ಆತನು ಹೇಳಲ್ಪಡುವನು. **ಪದ್ಯತೇ** ಎಂದರೆ **ಗಮ್ಯತೇ** - ಚೇತನನಿಂದ ಪ್ರಾಪ್ಯವಾಗಿ ಹೊಂದಲ್ಪಡುವನು, ಆದುದರಿಂದ ಪರಮಪದವೆಂಬ ಪ್ರಯೋಗವು.

೨. **ಇಬ್ಭಗವತ್ಸ್ವರೂಪತ್ತಿನುಡೈಯ** - ಈ ಭಗವತ್ಸ್ವರೂಪದ, ಪರಿಪೂರ್ಣಾನುಭವವನ್ನು, **ಪೆರುವದು** - ಹೊಂದುವದು, **ಭೋಗ್ಯತಮಮಾಗಿ**, **ಸರ್ವೋತ್ತರಮಾಯ್** - ಸರ್ವೋತ್ಕೃಷ್ಟವಾಗಿ, **ಇರುಪ್ಪದು** - ಇರಬೇಕಾದುದು, **ಒರು ಸ್ಥಾನವಿಶೇಷತ್ತಿಲ್**-ಒಂದು ಪ್ರಸಿದ್ಧವಾದ ಸ್ಥಾನದಲ್ಲಿ, **ಶೆನ್ರಾಲ್ ಆಗೈಯಾಲೇ** - ಸೇರಿದರೇನೆ ಪ್ರಾಪ್ತವಾಗುವದರಿಂದ, **ಅನ್ದ ಸ್ಥಾನವಿಶೇಷತ್ತೈಯುಮ್** - ಅಂತಹ ಸ್ಥಾನವಿಶೇಷವನ್ನೂ, **ಪರಮಪದ** ವೆಂದು, **ಎಙ್ಗಿರದು** - ಹೇಳುವದು. ಒಂದು ದೇಶವಿಶೇಷವು ಪ್ರಾಪ್ಯವಾದರೇನೇ ಭಗವಂತನ ಪರಿಪೂರ್ಣಾನುಭವವು ದೊರೆತು ಅದು ಪರಮ ಭೋಗ್ಯವಾಗುತ್ತದೆ. ಅಂತಹ ಸ್ಥಳವು ದಿವ್ಯ ವೈಕುಂಠವು, ಇದಕ್ಕೂ ಪರಮಪದವೆಂದು ಹೆಸರು.

ಎಙ್ಗಿರದು. ಇನ್ವನುಭವತ್ತುಕ್ಕು ಆಶ್ರಯಮಾಯ್‌ಕ್ಕೊಣ್ಡು ಅನುಭಾವ್ಯ ಮಾಗೈಯಾಲೇ ಭಗವದ್ವಿಭೂತಿ ಭೂತಮಾಯ್ ಜ್ಞಾನಾನಂದ ಲಕ್ಷಣ ಮಾನ ತನ್ನಸ್ವರೂಪತ್ತೈಯುಂ ಪರಮಪದಮ್ ಎಙ್ಗಿರದು. ಇವೈ ಮೂನ್ರುಕ್ಕುಂ ಮತ್ತುಮುಳ್ಳವತ್ತುಕ್ಕುಮ್ ಪ್ರಾಪ್ಯತ್ವಮಾತ್ರ ಮವಿಶಿಷ್ಟಮ್,

---

ಪದ್ಯತೇ ಅಸ್ಮಿನ್ ಎಂಬ ವ್ಯುತ್ಪತ್ತಿಮೂಲಕ, ಎಲ್ಲಿ ಪ್ರಾಪ್ಯದ ಪ್ರಾಪ್ತಿಯುಂಟೋ ಅದು ಪರಮಪದವು

೩. ಮೂರನೆಯ ಅರ್ಥವನ್ನು ಬೋಧಿಸುತ್ತಾರೆ. **ಇನ್ವನುಭವತ್ತುಕ್ಕು**- ಈ ಪರಿಪೂರ್ಣ ಬ್ರಹ್ಮಾನುಭವಕ್ಕೆ, **ಆಶ್ರಯಮಾಯ್‌ಕ್ಕೊಂಡು** - ಆಶ್ರಯ ವಾಗಿ, **ಅನುಭಾವ್ಯಮಾಗೈಯಾಲೇ** - ಅನುಭವಿಸಲು ಯೋಗ್ಯವಾದುದರಿಂದ, **ಭಗವದ್ವಿಭೂತಿ ಭೂತಮಾಯ್** - ಭಗವಂತನ ನಿಯಾಮ್ಯವರ್ಗಕ್ಕೆ ಸೇರಿದು ದಾಗಿ, **ಜ್ಞಾನಾನಂದ ಲಕ್ಷಣಮಾನ** - ಜ್ಞಾನತ್ವ ಆನಂದತ್ವಗಳೇ ಲಕ್ಷಣವಾಗಿ ಯುಳ್ಳ (ಸ್ವರೂಪವನ್ನು ನಿರ್ಧರಿಸುವ ಲಕ್ಷಣಗಳು ಇವು ಎಂಬ ಭಾವವು), **ತನ್ನ ಸ್ವರೂಪತ್ತೈಯುಮ್** - ಮುಕ್ತನಾದ ತನ್ನ ಸ್ವರೂಪವನ್ನೂ ಸಹ, **ಪರಮ ಪದಮ್ ಎಙ್ಗಿರದು** - ಪರಮಪದವೆಂದು ಹೇಳತಕ್ಕದ್ದಾಗಿದೆ ಗುಣಾಷ್ಟಕಾವಿ ರ್ಭಾವ ಸ್ವಸ್ವರೂಪಾವಿರ್ಭಾವಗಳುಳ್ಳ ಮುಕ್ತದಶೆಯಲ್ಲಿನ ತನ್ನ ಸ್ವರೂಪವು ಈಗ ಚನ್ನಾಗಿ ಪ್ರಕಾಶಿಸುವ ಸ್ಥಿತಿಯಲ್ಲಿದ್ದು, ಪರಿಪೂರ್ಣ ಬ್ರಹ್ಮಾನುಭವಕ್ಕೆ ಆಶ್ರಯ ವಾಗಿರುವದು, ತನ್ನ ಸ್ವರೂಪವೂ ಸಹ ಪರಮಪ್ರಾಪ್ಯವಾಗಿ ಅನುಭಾವ್ಯವಾದುದ ರಿಂದ ಪರಮಪದವೆಂಬ ಶಬ್ದವು ಇದಕ್ಕೂ ಅನ್ವಯಿಸುತ್ತದೆಂಬ ತಾತ್ಪರ್ಯವು.

**ಇವೈ ಮೂನ್ರುಕ್ಕುಮ್** - ಭಗವತ್ಸ್ವರೂಪ, ದಿವ್ಯವೈಕುಂಠ, ಮುಕ್ತಾತ್ಮ ಸ್ವರೂಪ, ಹೀಗೆ ಈ ಮೂರಕ್ಕೂ, **ಮತ್ತುಮುಳ್ಳವತುಕ್ಕುಮ್** - ಮತ್ತೂ ಮಿಕ್ಕವುಗಳಾದ ಕಲ್ಯಾಣಗುಣ, ವಿಭೂತಿ ಚೇಷ್ಟಿತಗಳಿಗೂ ಕೂಡ, **ಪ್ರಾಪ್ಯತ್ವ ಮಾತ್ರವೇ, ಅವಿಶಿಷ್ಟಮ್** - ವಿಶೇಷವಿಲ್ಲದುದು ಎಂದರೆ ಎಲ್ಲಕ್ಕೂ ಸಾಧಾರಣ ವಾದುದು ಈ ಮೂರರಲ್ಲೂ ಇರುವ ಭೋಗ್ಯಭಾವವು ಮಾತ್ರ ಭಗವತ್ಸ್ವರೂ ಪಕ್ಕೂ ಅದಕ್ಕೆ ಸಂಬಂಧಿಸಿದ ವಿಗ್ರಹಗುಣ ವಿಭೂತಿಗಳಿಗೂ ಸಮವೆಂದು ಹೇಳ ಲ್ಪಟ್ಟಿತು.

ನಿತ್ಯವಿಭೂತಿಯೇನೋ ನಿರತಿಶಯ ಸುಖರೂಪವಾಗಿ ಭೋಗ್ಯವಾದುದೆಂಬು ದನ್ನು ಒಪ್ಪತಕ್ಕದ್ದು. ಲೀಲಾವಿಭೂತಿಯು ಅನಿತ್ಯವಾದ ಅಲ್ಪಸುಖರೂಪವಾ ಗಿಯೂ ದುಃಖಬಾಹುಳ್ಯವುಳ್ಳದ್ದಾಗಿಯೂ ಇರುವದೆಂಬುದು ಪ್ರತ್ಯಕ್ಷಸಿದ್ಧವಾಗಿರು

## ಮುಕ್ತಸ್ಯ ಲೀಲಾವಿಭೂತಿರಪ್ಯನುಕೂಲಾ

**ಇಪ್ಪಡಿ ಭಗವತ್ಸ್ವರೂಪ ಗುಣವಿಗ್ರಹಾದಿಗಳುಮ್, ಶುದ್ಧ ಸತ್ತ್ವಾಶ್ರಯಮಾನ ನಿತ್ಯವಿಭೂತಿಯುಮ್, ಸ್ವಸ್ವರೂಪಮುಮ್ ಭೋಗ್ಯಮಾನಾಲುಮ್, ಪ್ರತಿಕೂಲಮಾಗ ಪ್ರತ್ಯಕ್ಷಾದಿ ಪ್ರಮಾಣ ಸಿದ್ಧಮಾಯ್ ಮುಮುಕ್ಷುವುಕ್ಕು ತ್ಯಾಜ್ಯಮಾಕ ಶಾಸ್ತ್ರಙ್ಗಳಿಲ್ ಶೊಲ್ಲಪ್ಪಟ್ಟ ಲೀಲಾವಿಭೂತಿಯಿಲ್ ಪದಾರ್ಥಙ್ಗಳ್ ಮುಕ್ತನುಕ್ಕು ಭೋಗ್ಯಮಾಗಕ್ಕಡವೋವೆನ್ನಿಲ್, ಅದಿಲುಮ್ ಕುರೈಯಿಲ್ಲೈ. ೧. ಪಿತ್ತೋಪಹತನುಕ್ಕು ಪ್ರತಿ**

---

ವಾಗ, ಮತ್ತು ಐಹಿಕವೆಲ್ಲಾ ತುಚ್ಛವಾಗಿ ಪ್ರಪನ್ನನಿಗೆ ತ್ಯಾಜ್ಯವೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವಾಗ ಮುಕ್ತನಿಗೆ ಅದೂ ಕೂಡ ಅನುಕೂಲವಾದುದು ಹೇಗೆ ಎಂಬಾಕ್ಷೇಪಣೆಯು ಯುಕ್ತವಾದುದೇ. ಆದಕ್ಕೆ ಸಮಾಧಾನವನ್ನು "**ಇಪ್ಪಡಿ**" ಎಂದಾರಂಭಿಸಿದ ವಾಕ್ಯದ ಮೂಲಕ ಸದೃಷ್ಟಾಂತವಾಗಿ ಮೂರು ನಿದರ್ಶನಗಳ ಮೂಲಕ ತಿಳಿಯಪಡಿಸುತ್ತಾರೆ.

### ಮುಕ್ತನಿಗೆ ಲೀಲಾವಿಭೂತಿಯೂ ಕೂಡ ಅನುಕೂಲ ರೂಪವಾದುದು.

**ಇಪ್ಪಡಿ** - ಹೀಗೆ, ಎಂದರೆ ಮೇಲೆ ಉಪಪಾದಿಸಿದ ರೀತಿಯಲ್ಲಿ, **ಭಗವತ್ಸ್ವರೂಪಗುಣ ವಿಗ್ರಹಾದಿಗಳುಮ್** - ಭಗವಂತನ ಸ್ವರೂಪ ದಿವ್ಯಮಂಗಳವಿಗ್ರಹ ಆತನ ಕಲ್ಯಾಣಗುಣಗಳು, ಆದಿ ಪದದಿಂದ ಐಶ್ವರ್ಯ ಚೇಷ್ಟಿತಗಳೂ ಸಂಗ್ರಹಿಸಲ್ಪಟ್ಟವು, ಮತ್ತು **ಶುದ್ಧ ಸತ್ತ್ವಾಶ್ರಯಮಾನ ನಿತ್ಯವಿಭೂತಿಯುಮ್** - ಶುದ್ಧ ಸತ್ತ್ವಕ್ಕೆ ಆಶ್ರಯವಾದ ನಿತ್ಯವಿಭೂತಿಯೂ, **ಸ್ವಸ್ವರೂಪಮುಮ್** - ಮುಕ್ತನಾದ ತನ್ನ ಸ್ವರೂಪವೂ ಸಹ, **ಭೋಗ್ಯಮಾನಾಲುಮ್** - ಭೋಗ್ಯವಾದುವು ಆದರೂ, **ಪ್ರತಿಕೂಲಮಾಗ** - ಅನಿತ್ಯ ಅಲ್ಪ ಸುಖ ಮತ್ತು ಬಹು ದುಃಖಯುಕ್ತವಾಗಿ ಹೀಗೆ ಪ್ರತಿಕೂಲವಾದುದೆಂದು, **ಪ್ರತ್ಯಕ್ಷಾದಿ ಪ್ರಮಾಣಸಿದ್ಧಮಾಯ್** - ಪ್ರತ್ಯಕ್ಷ ಮತ್ತು ಶಾಸ್ತ್ರಪ್ರಮಾಣಗಳಿಂದ ಸ್ಥಾಪಿತವಾಗಿ, **ತ್ಯಾಜ್ಯಮಾಗ** - ಹೀಗೆ ಬದ್ಧದೆಶೆಯಲ್ಲಿ ಐಹಿಕವೆಲ್ಲಾ ತ್ಯಾಜ್ಯವೆಂದು, **ಶೊಲ್ಲಪ್ಪಟ್ಟ** - ಹೇಳಲ್ಪಟ್ಟ, **ಲೀಲಾವಿಭೂತಿ**ಯಲ್ಲಿ ಪದಾರ್ಥಗಳು ಮುಕ್ತನಿಗೂ ಕೂಡ, **ಭೋಗ್ಯಮಾಗಕ್ಕಡವೋ ವೆನ್ನಿಲ್** - ಭೋಗ್ಯವಾದುವು ಆಗುವುವೋ ಎಂದರೆ, **ಅದಿಲುಮ್ ಕುರೈಯಿಲ್ಲೈ** - ಹಾಗೆ ಭೋಗ್ಯವಾದುವಾಗುವದಕ್ಕೇನೂ ನ್ಯೂನತೆಯಿಲ್ಲವು, ಎಂದರೆ

ಅವುಗಳೂ ಭೋಗ್ಯವಾದವುಗಳೇ ಎಂಬರ್ಥವು. ಐಹಿಕವೆಲ್ಲಾ ದುಃಖಮಯವಾದುದೆಂಬುದಕ್ಕೆ ಬೇರೆ ಪ್ರಮಾಣ ಬೇಕಿಲ್ಲವು ಪ್ರತ್ಯಕ್ಷದಿಂದಲೇ ಸಿದ್ಧವು. ಅನೇಕ ದುಃಖಸಂತತಿಗಳನ್ನು ಒಬ್ಬನು ತನ್ನ ಜೀವಮಾನದಲ್ಲಿ ಅನುಭವಿಸಿರಬಹುದು. ಆದರೆ ಐಹಿಕದಲ್ಲಿರುವ ಅಲ್ಪಸುಖದಿಂದ ಭ್ರಾಂತನಾಗಿ ಈ ಎಲ್ಲಾ ದುಃಖಗಳನ್ನೂ ಮರೆತುಹೋಗುವನು. ಸಂಸಾರದುಃಖವೆಂಬ ಸೂರ್ಯನ ತಾಪದಿಂದ ತಪಿಸಿ ಹೋಗಿದ್ದರೂ ಈ ಅಲ್ಪಸುಖರೂಪ ಶೈತ್ಯೋಪಚಾರದಿಂದ ಮರೆಯುವನು ಆದುದರಿಂದ ಶಾಸ್ತ್ರಪ್ರಮಾಣದಿಂದಲೂ ಅದು ದುಃಖಮಯವಾದುದೆಂದು ತಿಳಿಯಬಹುದು. ಶಾಸ್ತ್ರವೇನು ಹೇಳುತ್ತದೆ ಎಂದರೆ :—

"ಯಾವಜ್ಜೀವತಿ ತಾವಚ್ಚ ದುಃಖೈರ್ನಾನಾವಿಧೈಃ ಪ್ಲುತಃ ।
ತಂತುಕಾರಣ ಪಕ್ಷ್ಮೌಘೈರಾಸ್ತೇ ಕಾರ್ಪಾಸ ಬೀಜವತ್ ॥
ದ್ರವ್ಯನಾಶೇ ತಥೋತ್ಪತ್ತೌ ಪಾಲನೇಚ ಸದಾನೃಣಾಂ ।
ಭವಂತ್ಯನೇಕ ದುಃಖಾನಿ ತಥೈವೇಷ್ಟ ವಿಪತ್ತಿಷು ॥
ಯದ್ಯತ್ಪ್ರೀತಿಕರಂ ಪುಂಸಾಂವಸ್ತು ಮೈತ್ರೇಯ ಜಾಯತೇ ।
ತದೇವದುಃಖ ವೃಕ್ಷಸ್ಯ ಬೀಜತ್ವ ಮುಪಗಚ್ಛತಿ ॥"

(ವಿ. ಪು. ೬. ೫. ೫೩-೫) ಹತ್ತಿಯ ಬೀಜವು ಹೇಗೆ ಬಿಡಿಸಲು ಕಷ್ಟವಾಗಿರುವದೋ ಹಾಗೆ ಜೀವವಿರುವವರೆಗೂ ನಾನಾವಿಧವಾದ ಕ್ಲೇಶಗಳಲ್ಲಿ ಮುಳುಗಿರುವನು. ದ್ರವ್ಯನಾಶದಲ್ಲೂ, ದ್ರವ್ಯವನ್ನು ಗಳಿಸುವದರಲ್ಲೂ, ಅದನ್ನು ರಕ್ಷಿಸುವದರಲ್ಲೂ ಮನುಷ್ಯರು ನಾನಾವಿಧ ದುಃಖಗಳನ್ನನುಭವಿಸುವರು. ಹಾಗೆಯೇ ಇತರ ಇಷ್ಟವಾದವುಗಳ ವಿಘಾತದಲ್ಲೂ ಅನೇಕ ಕ್ಲೇಶಗಳುಂಟು. ಮನುಷ್ಯರಿಗೆ ಯಾವುದು ಪ್ರೀತಿಕರವಾಗಿ ತೋರುವ ವಸ್ತು ಉಂಟೋ, ಓ ಮೈತ್ರೇಯರೇ, ಅದೇ ಮುಂದೆ ದುಃಖವೆಂಬ ವೃಕ್ಷಕ್ಕೆ ಬೀಜವಾಗಿ ಪರಿಣಮಿಸುತ್ತದೆ ಎಂದು ಹೇಳಿರುತ್ತದೆ. ಹಾಗೆಯೇ ಗೀತೆಯಲ್ಲೂ,

"ಯೇಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವತೇ ।
ಆದ್ಯಂತವಂತಃ ಕೌಂತೇಯ ನತೇಷು ರಮತೇ ಬುಧಃ ॥" (೫. ೨೨)

ವಿಷಯ ಸುಖಗಳೆಲ್ಲಾ ಕಾಲಾಂತರದಲ್ಲಿ ದುಃಖರೂಪ ಫಲವನ್ನೇ ಕೊಡತಕ್ಕವುಗಳೇ, ಮತ್ತು ಅವುಗಳಿಗೆ ಆದಿ, ಅಂತ್ಯಗಳಿರುವದರಿಂದ ಅಸ್ಥಿರವಾದವು. ತತ್ತ್ವವನ್ನು ತಿಳಿದ ಪಂಡಿತನು ಅವುಗಳಲ್ಲಿ ರಮಿಸುವದಿಲ್ಲವು. ಹೀಗೆ ಅನೇಕ ಶಾಸ್ತ್ರ ಪ್ರಮಾಣಗಳೂ ಉಂಟೆಂಬ ಭಾವವು ಹೀಗೆ ಪ್ರತ್ಯಕ್ಷಸಿದ್ಧವಾಗಿಯೂ ಶಾಸ್ತ್ರಗಳಿಂದ ವೇದ್ಯವಾಗಿಯೂ ಇದೆ ಎಂಬ ತಾತ್ಪರ್ಯವು. ಹೀಗಿದ್ದರೂ ಇವೆಲ್ಲವೂ ಮುಕ್ತನಿಗೆ ಮಾತ್ರ ಅನುಕೂಲವಾಗಿವೆ ಎಂದು ಹೇಳಲು ಏನೊಂದೂ ಅಭ್ಯಂತರ

**ಕೂಲಮಾನ ಪಾಲ್, ಪಿತ್ತಮ್ ಶಮಿತ್ತಾಲ್ ಅನುಕೂಲಮಾಪ್ಪೋಲು ವುಮ್. ೨. ಸಾರ್ವಭೌಮುನಾನ ಪಿತಾವಿನುಡೈಯ ಶಿರೈಕ್ಕೂಡಮ್, ಶಿರೈಕ್ಕಿಡಕ್ಕಿರ ರಾಜಕುಮಾರನುಕ್ಕು ಅಪ್ಪೋದು ಪ್ರತಿಕೂಲಮಾಯ್, ರಾಜಾ ಶಿರೈ ಕೂಡತ್ತಿಲ್ ನಿನ್ರುಮ್ ಪುರಪ್ಪಡವಿಟ್ಟುಗನ್ದು ತುಲ್ಯಭೋಗ ನಾಗ ವೈತ್ತವಳವಿಲ್ ಶಿರೈಕ್ಕೂಡಮಾನ ಕೋಪ್ಪುಕ್ಕುಲೈಯಾದಿರುಕ್ಕ**

---

ವಿಲ್ಲವು. ಅದು ಹೇಗೆ ಎಂದರೆ ಎರಡು ದೃಷ್ಟಾಂತಗಳ ಮೂಲಕ ತಿಳಿಸುತ್ತಾರೆ

೧. **ಪಿತ್ತೋಪಹತನುಕ್ಕು** - ಪಿತ್ತಾಧಿಕ್ಯ ಜಾಡ್ಯದಿಂದ ಪೀಡಿತನಾದ ವನಿಗೆ, **ಪ್ರತಿಕೂಲಮಾನ ಪಾಲ್** - ಕಹಿಯಾಗಿ ತೋರುವದರಿಂದ ಸೇರದ ಹಾಲು, **ಪಿತ್ತಂ ಶಮಿತ್ತಾಲ್** - ಪಿತ್ತವು ಶಮನವಾದರೆ, **ಅನುಕೂಲಮಾಪ್ಪೋಲುವುಮ್** - ರುಚಿಯಾಗಿ ಸೇರುವ ಹಾಗೂ ; ಹಾಲು ಪಿತ್ತಜಾಡ್ಯವುಳ್ಳವ ನಿಗೆ ಕಹಿಯಾಗಿ ತೋರುತ್ತದೆ. ಹಾಲು ಕಹಿಯೋ ? ಅಲ್ಲವು. ಜಾಡ್ಯವಿರು ವದರಿಂದ ಹಾಗೆ ತೋರುತ್ತದೆ ಆ ರೀತಿಯಲ್ಲೇ ಈ ಲೀಲಾವಿಭೂತಿಯ ವಸ್ತು ಗಳು ವಾಸ್ತವವಾಗಿಯೂ ಪ್ರತಿಕೂಲವಾದವುಗಳಾಗಿ ದುಃಖಪ್ರದಗಳಲ್ಲವು, ಕರ್ಮ ವೆಂಬ ವ್ಯಾಧಿಯಿಂದ ಹಾಗೆ ತೋರುತ್ತವೆ. ಕರ್ಮವು ನಶಿಸಿಹೋದರೆ, ಅವುಗಳು ಪ್ರತಿಕೂಲಗಳಲ್ಲವು; ಅವುಗಳಿಗೆ ಸಹಜವಾದ ಅನುಕೂಲತ್ವದಿಂದ ಯುಕ್ತವಾಗಿಯೇ ತೋರುವುವು ಆದುದರಿಂದ ಸಂಸಾರದಶೆಯಲ್ಲಿ ಪ್ರತಿಕೂಲಗಳೇ ವಿನಾ ಮುಕ್ತ ದಶೆಯಲ್ಲಿ ಅನುಕೂಲವಾದವುಗಳೇ ಎಂಬ ತಾತ್ಪರ್ಯವು. ಈ ಹಾಲಿನ ದೃಷ್ಟಾಂ ತದಲ್ಲಿ ಪದಾರ್ಥವೇನೋ ಅನುಕೂಲವಾದುದು, ಉಪಾಧಿ ಇರುವ ತನಕ ಪ್ರತಿ ಕೂಲ, ಉಪಾಧಿ ತೊಲಗಿದರೆ ಅನುಕೂಲವಾಗುತ್ತದೆ. ಈ ದೃಷ್ಟಾಂತವೇನೋ ಒಪ್ಪತಕ್ಕದ್ದೇ ಆದರೆ ಕೆಲವು ಪದಾರ್ಥಗಳು ಪ್ರತಿಕೂಲವಾಗಿಯೇ ತೋರು ತ್ತವಲ್ಲಾ, ಈ ಕಾರಾಗೃಹವು ಪ್ರತಿಕೂಲವಾದುದೆಂದು ಎಲ್ಲರೂ ಒಪ್ಪತಕ್ಕ ದ್ದಾಗಿರುತ್ತದೆ. ಅದು ಹೇಗೆ ಅನುಕೂಲವೆಂದಾಕ್ಷೇಪಿಸಿದರೆ, ಅದೂ ಕೂಡ ಅನು ಕೂಲವಾಗುತ್ತದೆಂದು ಈ ಎರಡನೆಯ ದೃಷ್ಟಾಂತವನ್ನುಪಪಾದಿಸುತ್ತಾರೆ.

೨. **ಸಾರ್ವಭೌಮುನಾನ ಪಿತಾವಿನುಡೈಯ** - ಚಕ್ರವರ್ತಿಯಾದ ತನ್ನ ತಂದೆಯ, **ಶಿರೈಕ್ಕೂಡಮ್** - ವಿಭೂತಿಗೆ ಸೇರಿದ ಕಾರಾಗೃಹವು, **ಶಿರೈಕಿಡಕ್ಕಿರ**- ಸಜಾ ಅನುಭವಿಸುತ್ತಿರುವ, ರಾಜಕುಮಾರನಿಗೆ, **ಅಪ್ಪೋದು** - ಆ ಶಿಕ್ಷಾನುಭವ ಸಮಯದಲ್ಲಿ, **ಪ್ರತಿಕೂಲಮಾಯ್** - ಪ್ರತಿಕೂಲವಾದುದಾಗಿ, **ರಾಜಾ**- ಚಕ್ರ ವರ್ತಿಯು, **ಶಿರೈಕೂಡತ್ತಿಲ್ ನಿನ್ರುಮ್**-ಕಾರಾಗೃಹದಿಂದ, **ಪುರಪ್ಪಡವಿಟ್ಟು**-

ನಮ್ಮಾಳ್ವಾರ್ರವರು ತಮ್ಮನ್ನು ಒಬ್ಬ ನಾಯಿಕೆಯ ಹಾಗೆ ಭಾವಿಸಿಕೊಂಡು ನಾಯಕನಾದ ಸರ್ವೇಶ್ವರನು ತನಗೆ ಮುಖ ತೋರಿಸಿ ಒಲಿಯದ ಬಳಿಕ "ಮೂರಾರ್ಳ ಕವರಾದ ಮಣಿಮಾಮೈಕುರ ವಿಲಮೋ" ತನ್ನ ಸೊಗಸಾದ ದೇಹಕಾಂತಿಯಿಂದ ತನಗೇನು ಪ್ರಯೋಜನವೆಂದು ಪ್ರಥಮಪಾಶುರದಲ್ಲೂ, ಎರಡನೆಯ ಪಾಶುರದಲ್ಲಿ "ಮಣಿಮಾಯರ್ಳ ಕವರಾದ ಮಡನೆಂಜಾರ್ಕ್ಕುರೈ ವಿಲಮೋ" ವಿಧೇಯವಾದ ನನ್ನ ಮನಸ್ಸಿನಿಂದ ತನಗೇನು ಪ್ರಯೋಜನವೆಂದೂ, ಮೂರನೆಯ ಪಾಶುರದಲ್ಲಿ "ನೆಡುಮಾಯರ್ಳ ಕವರಾದ ನಿರೈವಿನಾರ್ಕ್ಕುರೈ ವಿಲಮೋ" ತನ್ನ ಸ್ತ್ರೀತ್ವ ಪೂರ್ತಿಯಿಂದ ತನಗೇನು ಪ್ರಯೋಜನವೆಂದೂ, ನಾಲ್ಕನೆಯ ಪಾಶುರದಲ್ಲಿ "ಶರೈಯಿನಾರ್ ಕವರಾದ ತಳಿರ್ ನಿರತ್ತಾರ್ಕ್ಕುರೈ ವಿಲಮೋ" ಚಿಗರಿನ ಹಾಗೆ ಮನೋಹರವಾದ ತನ್ನ ಕಾಂತಿಯಿಂದ ತನಗೇನು ಪ್ರಯೋಜನವೆಂದೂ, ಐದನೆಯದರಲ್ಲಿ "ಅಳಿಮಿಕ್ಕಾರ್ಳ ಕವರಾದ ವರಿವಿನಾರ್ಕ್ಕುರೈ ವಿಲಮೋ" ತನ್ನ ಜ್ಞಾನದಿಂದ ತನಗೇನು ಪ್ರಯೋಜನವೆಂದೂ, ಆರನೆಯದರಲ್ಲಿ "ಕಿರಿಯಮರ್ಳ್ಳ ಕವರಾದ ಕಿಳರೊಳಿಯಾರ್ಕ್ಕುರೈ ನಿಲಮೋ" ತನ್ನ ಲಾವಣ್ಯದಿಂದೇನು ಪ್ರಯೋಜನವೆಂದೂ, ಏಳನೆಯದರಲ್ಲಿ "ವಳರೊಳಿಯರ್ಳ ಕವರಾದ ವರಿವಳೈಯಾರ್ಕ್ಕುರೈ ವಿಲಮೋ" ತನಗೆ ಬಳೆ ಮೊದಲಾದ ಆಭರಣಗಳಿಂದೇನು ಪ್ರಯೋಜನವೆಂದೂ, ಎಂಟನೆಯದರಲ್ಲಿ "ವಿರಿಪುಕುಳರ್ಳ ಕವರಾದ ಮೇಕಲೈಯಾರ್ಕ್ಕುರೈ ವಿಲಮೋ" ತನಗೆ ಒಳ್ಳೇ ವಸ್ತ್ರಗಳಿಂದೇನು ಪ್ರಯೋಜನವೆಂದೂ, ಒಂಭತ್ತನೆಯದರಲ್ಲಿ ಹಾಗೆಯೇ ತನಗೆ ದೇಹದಿಂದೇನು ಪ್ರಯೋಜನವೆಂದೂ, ಹತ್ತನೆಯದರಲ್ಲಿ ಈ ಆತ್ಮಾವಿಂದ ತಾನೇ ಏನು ಪ್ರಯೋಜನವೆಂದೂ, ಹೇಳಿಕೊಂಡಿರುತ್ತಾರೆ. ಇದರಿಂದ ಸರ್ವೇಶ್ವರ ಸಾನ್ನಿಧ್ಯದಿಂದ ಇವೆಲ್ಲಾ ಅನುಕೂಲವೆಂದೂ, ಇಲ್ಲದಿದ್ದರೆ ಇವೆಲ್ಲಾ ಪ್ರತಿಕೂಲವೆಂಬ ಭಾವವು. ಜ್ಞಾನನಿಧಿಗಳಾದ ಯಾಮುನೇಯರೂ ಈ ಅಭಿಪ್ರಾಯವನ್ನೆಲ್ಲಾ

**ನದೇಹಂ ನಪ್ರಾಣಾ ನ್ನಚ ಸುಖ ಮಶೇಷಾಭಿಲಷಿತಂ ।**
**ನ ಚಾತ್ಮಾನಂ ನಾನ್ಯತ್ಕಿಮಪಿ ತವಶೇಷತ್ವ ವಿಭವಾತ್ ।**
**ಬಹಿರ್ಭೂತಂ ನಾಥಕ್ಷಣಮಪಿ ಸಹೇಯಾತು ಶತಧಾ ।**
**ವಿನಾಶಂ ತತ್ಸತ್ಯಂ ಮಧುಮಥನ ವಿಜ್ಞಾಪನ ಮಿದವ್ ॥೫೭॥**

ಎಂಬದಾಗಿ ಒಂದೇ ಶ್ಲೋಕದಲ್ಲೇ ಸಂಗ್ರಹಿಸಿರುತ್ತಾರೆ. ಇದರರ್ಥವೇನೆಂದರೆ :–

**ಹೇ ನಾಥ** - ಓ ಸ್ವಾಮಿಯೇ, **ತವ** - ಭಕ್ತನಾದ ದಾಸನಲ್ಲಿ ಪರಮ ಕರುಣೆಯುಳ್ಳ ನಿನ್ನ, **ಶೇಷತ್ವ ವಿಭವಾತ್** - ಕಿಂಕರಭಾವದ ಫಲಭೂತವಾದ ಕೈಂಕರ್ಯವೆಂಬ ಸಮೃದ್ಧಿಗಿಂತಲೂ, **ಬಹಿರ್ಭೂತಂ** - ಹೊರಗಾದ, ಎಂದರೆ ನಿನ್ನ

ಕೈಂಕರ್ಯಕ್ಕನುಪಯುಕ್ತವಾದ, ಯಾವಾಗ ನೀನು ಎಲ್ಲಕ್ಕೂ ಸ್ವಾಮಿಯೋ, ಆದುದರಿಂದ ದಾಸನಾದ ನನಗೂ ನೀನು ಸ್ವಾಮಿಯು : ಈ ದಾಸತ್ವಕ್ಕೆ ಕೈಂಕರ್ಯ ಮಾಡುವದೇ ಫಲವು, ಅಂತಹ ಕೈಂಕರ್ಯಕ್ಕೆ ಉಪಯೋಗವಾಗದ **ಅಶೇಷಾಭಿಲಷಿತಂ** ಸಾರ್ವತ್ರಿಕವಾಗಿ ಎಲ್ಲರಿಂದಲೂ ಅಪೇಕ್ಷಿಸಲ್ಪಡುವ ಅಥವಾ ನಿನ್ನ ಶೇಷತ್ವದ ಮಹಿಮೆಯನ್ನರಿಯದವರಿಂದ ಅಪೇಕ್ಷಿಸಲ್ಪಡುವ, **ದೇಹಂ** - ನನ್ನ ದೇಹವನ್ನೂ, **ಕ್ಷಣಮಪಿ** - ಒಂದು ಕ್ಷಣವಾಗಲಿ, **ನಸಹೇ** - ನಾನು ಸಹಿಸಲಾರೆನು ಎಂದರೆ ಅಂತಹ ಶರೀರವು ನನಗೆ ಬೇಕಾಗಿಲ್ಲವೆಂಬ ಭಾವವು ; ಆದರೆ ಪ್ರಾಣವಿರುವದಕ್ಕಾಗಿಯಲ್ಲವೇ ದೇಹವು, ಪ್ರಾಣವಿರುವದಕ್ಕಾಗಿಯಾದರೂ ದೇಹ ಬೇಡವೇ ಎಂದರೆ ಅನುಪಯೋಗವಾದ ಪ್ರಾಣವೂ ಬೇಕಿಲ್ಲವೆಂದು ಹೇಳುತ್ತಾರೆ ; ಹಾಗೆಯೇ, **ಪ್ರಾಣಾನ್ ನ ಸಹೇ** - ಪ್ರಾಣಗಳನ್ನೂ ಸಹಿಸಲಾರೆನು ಎಂದರೆ ಪ್ರಾಣಗಳೂ ಬೇಕಿಲ್ಲವು ಎಂದು ಹೇಳಿಬಿಟ್ಟರು. ಆಗಲಿ, ಪ್ರಾಣಗಳು ಮುಖ್ಯವಾಗಿ ಸುಖಾನುಭವಕ್ಕಾಗಿ ಬೇಕಾದವು ; ಸುಖಕ್ಕಾಗಿಯಾಗಲಿ ಬೇಡವೋ ಎಂದರೆ, ಸರ್ವೇಶ್ವರನಿಗೆ ಅನುಪಯುಕ್ತವಾದ ಸುಖವನ್ನು ಬಿಡಬೇಕು ಎಂದು ಹೇಳುತ್ತಾರೆ; **ನಚ ಸುಖಂ ಸಹೇ** - ಅಂತಹ ಸುಖವನ್ನೂ ಕೂಡ ಸಹಿಸಲಾರೆನು, ಮತ್ತು **ನಚಾತ್ಮಾನಂ ಸಹೇ** - ನನ್ನ ಆತ್ಮಸ್ವರೂಪವನ್ನೂ ಕೂಡ ಸಹಿಸಲಾರೆನು. **ಅನ್ಯತ್ಕಿಮಪಿ** - ಈ ಮೇಲೆ ಹೇಳಿದ ದೇಹಾದಿಗಳಿಗಿಂತಲೂ ಬೇರೆಯಾದ ಪತ್ನೀ ಪುತ್ರಾದಿಗಳೇನು, ಗೃಹಾರಾಮಾದಿಗಳೇನು ಇವುಗಳು ಯಾವುದೊಂದನ್ನೂ, **ನ ಸಹೇ** - ಸಹಿಸಲಾರೆನು ಹೀಗೆ ಇವುಗಳು ನಿನ್ನ ಕೈಂಕರ್ಯಕ್ಕೆ ಅನುಪಯೋಗವಾದವುಗಳಾದರೆ, **ಶತಧಾ ವಿನಾಶಂ ಯಾತು** - ನೂರು ಭಾಗವಾಗಿ ನಾಶವನ್ನು ಹೊಂದಲಿ, **ತತ್ಸತ್ಯಂ** – ಅದು ನಾಲಿಗೆಯ ತುದಿಯ ಮಾತಲ್ಲವು, ಸತ್ಯವಾದ ಹೇಳಿಕೆಯು, ಹೇ ಮಧುಸೂದನನೇ, **ಇದಂ ವಿಜ್ಞಾಪನಂ** - ಇದೀಗ ನನ್ನ ವಿಜ್ಞಾಪನೆಯು ; ಅಥವಾ **ತದಿದಂ ವಿಜ್ಞಾಪನಂ** ಅಂತಹ ಈ ವಿಜ್ಞಾಪನೆಯು, **ಸತ್ಯಂ** - ಸತ್ಯವಾದುದು ಎಂಬಭಿಪ್ರಾಯವು.

ಆದುದರಿಂದ ಲೀಲಾವಿಭೂತಿಯಲ್ಲಿರುವ ಸರ್ವ ವಸ್ತುಗಳೂ ಮುಕ್ತನಿಗೆ ಅನುಕೂಲವಾಗಿಯೇ ತೋರುವದರಿಂದ ಭೋಗ್ಯವಾದವುಗಳೇ. ಆದರೆ ಅಲ್ಪಾನುಕೂಲವಾಗಿಯೂ ಪ್ರತಿಕೂಲವಾಗಿಯೂ ತೋರುತ್ತವಲ್ಲಾ ಎಂದರೆ ಹಾಗೆ ತೋರುವದು ಕರ್ಮ ಪ್ರತಿಬಂಧದಿಂದ ಎಂದರಿಯತಕ್ಕದ್ದು ಎಂಬ ತಾತ್ಪರ್ಯವು

ಆದರೆ ಒಂದೇ ಪದಾರ್ಥವು ಬದ್ಧರಿಗೆ ಪ್ರತಿಕೂಲವಾಗಿಯೂ, ಮುಕ್ತರಿಗೆ ಅನುಕೂಲವಾಗಿಯೂ ಇರುವದೆಲ್ಲಾದರೂ ಉಂಟೇ ಎಂದರೆ ಅದು ಭಗವದಿಚ್ಛಾ ಸಿದ್ಧವೆಂದು ಹೇಳುತ್ತಾರೆ. ಒಬ್ಬನಿಗೆ ದೇಹವು ಅನುಕೂಲವಾಗಿಯೂ, ಇನ್ನೊಬ್ಬ

**ಭಗವತ್ ಸಂಶ್ಲೇಷಮಿನ್ರಿಕ್ಕೇ ತಾರ್ ನಿನ್ರಪ್ಪೋದು ಕರ್ಮಾನುರೂಪ ಮಾಗ ತನುಕ್ಕು ಪ್ರತಿಕೂಲಮಾಯು ಮಲ್ಪಾನುಕೂಲಮಾಯುಮ್ ತೋಟ್ರಿನ ಲೀಲಾವಿಭೂತಿಯಿಲ್ ಪದಾರ್ಥಂಗಳ್ ಮುಕ್ತನಾಯ್ ನಿರ ನ್ತರ ಭಗವದನುಭವಮ್ ಪಣ್ಣುಗಿರವನುಕ್ಕು ನಿರತಿಶಯ ಭೋಗ್ಯವರ್ಗ**

---

ನಿಗೆ ಪ್ರತಿಕೂಲವಾಗಿಯೂ ಆಗಬಹುದು ವೃಷ್ಯಾನ್ನವು ಯೌವನಸ್ಥನಿಗೆ ಬಹು ಭೋಗ್ಯವಾಗಿಯೂ, ಪರಿಣಾಮಶೂಲೆಯಿಂದ ಪೀಡಿತನಿಗೂ, ಪಿತ್ತರೋಗಿಗೂ ಅದು ವಿಷಪ್ರಾಯವಾಗಿಯೂ ಪರಿಣಮಿಸಬಹುದು. ದ್ರವ್ಯವು ಒಬ್ಬನಿಗೆ ಭಗವದ್ಭಾಗವತ ಕೈಂಕರ್ಯದ್ವಾರಾ ವಿಶೇಷ ಶ್ರೇಯಸ್ಸಿಗೂ, ಹೆಂಗಸು, ದ್ಯೂತ, ಪಾನಾದಿಗಳ ದ್ವಾರಾ ಅನೇಕ ದುಃಖಗಳಿಗೂ ಕಾರಣವಾಗಬಹುದು ಇದಕ್ಕೆ ಶ್ರುತಿ ಪ್ರಮಾಣವು ಹೇಗೆಂದರೆ:—"**ನವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ, ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ**" "ಗಂಡನು ತಾನು ಹೆಂಡತಿಗೆ ಪ್ರಿಯನಾಗಬೇಕೆಂಬ ಸಂಕಲ್ಪದಿಂದ ಪ್ರಿಯನಾಗುವದೇ ಇಲ್ಲವು, ಆದರೆ ಪರಮಾತ್ಮನ ಸಂಕಲ್ಪದಿಂದ ಗಂಡನು ಹೆಂಡತಿಗೆ ಪ್ರಿಯನಾಗುವನಾಗುತ್ತಾನೆ" ಎಂದು ಪ್ರಾರಂಭಿಸಿ, "**ನವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ, ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ**" "ಸರ್ವವೂ ಓ ಮೈತ್ರೇಯಿಯೇ, ಸಙ್ಕಲ್ಪಮಾತ್ರದಿಂದ ಪ್ರಿಯವಾದವುಗಳಾಗುವದಿಲ್ಲ, ಪರಮಾತ್ಮನ ಸಂಕಲ್ಪದಿಂದೀಗ ಅವೆಲ್ಲಾ ಪ್ರಿಯವಾದವುಗಳಾಗುವುವು" ಎಂದು ಶ್ರುತಿಯು ಘೋಷಿಸುತ್ತದೆ. ಇದೆಲ್ಲಾ ಭಗವತ್ಸಙ್ಕಲ್ಪಾಧೀನವಾದುದರಿಂದ, ಬದ್ಧರಿಗೆ ಅಲ್ಪಾನುಕೂಲವಾಗಿರುವದು ಅಥವಾ ಪ್ರತಿಕೂಲವಾಗಿರುವದು, ಮುಕ್ತರಿಗೆ ಪೂರ್ಣಾನುಕೂಲವಾಗಿರಬಹುದೆಂಬುದು ನಿಸ್ಸಂದೇಹವೆಂದು ಹೇಳುತ್ತಾರೆ

**ಭಗವತ್ಸಂಶ್ಲೇಷ ಮಿನ್ರಿಕ್ಕೇ** - ಭಗವಂತನೊಂದಿಗೆ ಸಾಯುಜ್ಯವಲ್ಲದೇ ಎಂದರೆ ಭಗವತ್ಪ್ರಾಪ್ತಿಯಿಲ್ಲವೆ, **ತಾರ್ ನಿನ್ರಪ್ಪೋದು** - ತಾನು ಇರುವಾಗ ಎಂದರೆ ಬದ್ಧದೆಶೆಯಲ್ಲಿ ಲೀಲಾವಿಭೂತಿಯಲ್ಲಿರುವಾಗ, **ಕರ್ಮಾನುರೂಪಮಾಗ** - ತನ್ನ ಕರ್ಮಾನುಗುಣವಾಗಿ, **ತನಕ್ಕು** - ತನಗೆ, **ಪ್ರತಿಕೂಲವಾಗಿಯೂ, ಅಲ್ಪಾನು ಕೂಲವಾಗಿಯೂ, ತೋತ್ತಿನ** - ತೋರುವ, ಲೀಲಾವಿಭೂತಿಯಲ್ಲಿನ ಪದಾರ್ಥಗಳು, **ಭಗವದನುಭವಮ್ ಪಣ್ಣುಗಿರ ವಿವನುಕ್ಕು** - ಮುಕ್ತದೆಶೆಯಲ್ಲಿ ಪರಿಪೂರ್ಣ ಬ್ರಹ್ಮಾನುಭವವನ್ನು ಮಾಡಿಕೊಂಡಿರುವ ಇವನಿಗೆ, **ನಿರತಿಶಯ ಭೋಗ್ಯವರ್ಗತ್ತಿಲೇ** - ನಿರತಿಶಯವಾಗಿ ಭೋಗ್ಯವಾಗಿರುವವುಗಳ ಕೋಟಿಯಲ್ಲಿ,

ತ್ತಿಲೆ ಶೇರುಗೈ (ಶೊರುಗೈ) ಯುಪಪನ್ನಮ್.

ಇಪ್ಪಡಿ ಬದ್ಧರುಕ್ಕು ಪ್ರತಿಕೂಲಮಾಯುಮ್ ಅಲ್ಪಾನುಕೂಲಮಾಯುಮ್, ಕರ್ಮಬಂಧಮಿಲ್ಲಾದಾರ್ಕ್ಕು ಅನುಕೂಲ ಸ್ವಭಾವಮಾಯುಮ್ ಇರುಕ್ಕೈ, ಅಪ್ಪದಾರ್ಥಙ್ಗಳುಕ್ಕು ಭಗವದಿಚ್ಛಾ ಸಿದ್ಧಮ್.

ಸರ್ವಪ್ರಕಾರಯುಕ್ತ ಶ್ರೀಮನ್ನಾರಾಯಣ ಏವ ಪ್ರಾಪ್ಯಃ

---

ಇಪ್ಪಡಿ ಸ್ವೇಚ್ಛಾಸಿದ್ಧಮಾನ ಆನುಕೂಲ್ಯತ್ತೈಯುಡೈತ್ತಾನ ತರ್ಣ ಪ್ರಕಾರಙ್ಗಳೆಲ್ಲಾತ್ತೋಡುಮ್ ಕೂಡಿನ ಶ್ರೀಮಾನಾನ ನಾರಾಯಣ

---

ಶೇರುಗೈ - ಸೇರುವದು, ಉಪಪನ್ನಮ್ - ಸಮಂಜಸವಾದುದೇ; ಶೊರುಗೈ ಎಂದು ಪಾಠವಾದರೂ, ಸೇರಿಸಿಬಿಡುವದು ಎಂಬುದೇ ಅರ್ಥವು. ಲೀಲಾವಿಭೂತಿ ಪದಾರ್ಥಗಳೆಲ್ಲಾ ಮುಕ್ತನಿಗೆ ಭೋಗ್ಯವರ್ಗದಲ್ಲಿ ಸೇರಿದ ಹಾಗೆಯೇ ತೋರುತ್ತ ವೆಂಬ ಭಾವವು.

ಇಪ್ಪಡಿ - ಈ ಮೇಲೆ ಉಪಪಾದಿಸಿದ ರೀತಿಯಲ್ಲಿ, ಬದ್ಧರಿಗೆ ಪ್ರತಿಕೂಲವಾಗಿಯೂ, ಕೊಂಚ ಅನುಕೂಲವಾಗಿಯೂ ಇರುವಂಥಾದ್ದು, ಕರ್ಮಬಂಧಮಿಲ್ಲಾದಾರ್ಕ್ಕು - ಕರ್ಮಬಂಧವಿಲ್ಲದ ಮುಕ್ತರಿಗೆ, ಅನುಕೂಲ ಸ್ವಭಾವವುಳ್ಳವುಗಳಾಗಿ, ಅಪ್ಪದಾರ್ಥಙ್ಗಳುಕ್ಕು ಇರುಕ್ಕೈ - ಆ ಪದಾರ್ಥಗಳಿಗೆ ಅಂತಹ ಸ್ಥಿತಿಯು ಅಥವಾ ಇರೋಣವು, ಭಗವದಿಚ್ಛಾಸಿದ್ಧಮ್ - ಭಗವಂತನ ಸಂಕಲ್ಪದಿಂದ ಉಂಟಾಗತಕ್ಕದ್ದಾಗಿರುತ್ತದೆ ಪದಾರ್ಥಗಳೆಲ್ಲಾ ಸ್ವಾಮಿಸಂಕಲ್ಪದಿಂದ ಅನುಕೂಲವಾದುವುಗಳೇ; ಆದರೆ ಕರ್ಮಬಲದಿಂದ ಬಾಧಕಗಳು ಎಂಬ ತಾತ್ಪರ್ಯವು.

ನಿರ್ವಿಶೇಷ ಬ್ರಹ್ಮವಲ್ಲದೆ ಸವಿಶೇಷನಾದ ಸ್ವರೂಪ ರೂಪಗುಣ ವಿಭೂತಿ ಮೊದಲಾದವುಗಳಿಂದ ಯುಕ್ತನಾದ ಶ್ರಿಯಃಪತಿಯೇ ಪ್ರಾಪ್ಯನೆಂದು ಈ ರಹಸ್ಯಗಳಲ್ಲಿ ಎಲ್ಲಿಯಾದರೂ ತೋರಿಬರುತ್ತದೋ ಎಂದರೆ ಹಾಗೆ ತೋರಿಬರುತ್ತದೆಂದು ಉಪದೇಶಿಸುತ್ತಾರೆ.

ಸರ್ವಪ್ರಕಾರಗಳಿಂದಲೂ ಯುಕ್ತನಾದ ಶ್ರೀಮನ್ನಾರಾಯಣನೇ ಪ್ರಾಪ್ಯನು.

---

ಇಪ್ಪಡಿ - ಮೇಲೆ ಹೇಳಿದ ರೀತಿಯಲ್ಲಿ, ಸ್ವೇಚ್ಛಾಸಿದ್ಧಮಾನ - ತನ್ನ ಸಂಕಲ್ಪ ಮೂಲಕ ಪ್ರಾಪ್ತವಾದ, ಆನುಕೂಲ್ಯತ್ತೈಯುಡತ್ತಾನ - ಆನುಕೂ

**ಪ್ರಾಪ್ಯನೆನ್ನುಮಿಡತ್ತಿಲ್ ತಿರುಮನ್ತ್ರತ್ತಿಲುಮ್ ದ್ವಯತ್ತಿಲುಮ್ ಚತುರ್ಥ್ಯನ್ತ ಪದಙ್ಗಳಿಲೇ ಅಭಿಪ್ರೇತಮ್. ಮುನ್ಪುಶೊನ್ನ ಕೈಙ್ಕರ್ಯಮ್**

ಲ್ಯತೆಯನ್ನು ಹೊಂದಿದ, **ಶ್ರೀಮಾನಾನ ನಾರಾಯಣನ್** - ಲಕ್ಷ್ಮೀಯುಕ್ತನಾದ ನಾರಾಯಣನು, **ಪ್ರಾಪ್ಯನೆನ್ನುಮಿಡತ್ತಿಲ್** - ಪ್ರಾಪ್ಯನು ಎನ್ನುವ ಸಂದರ್ಭದಲ್ಲಿ ಪ್ರಮಾಣವು, **ತಿರುಮನ್ತ್ರತ್ತಿಲುಮ್** - ಮೂಲಮಂತ್ರದಲ್ಲೂ, **ದ್ವಯತ್ತಿಲುಮ್** - ದ್ವಯಮಂತ್ರದಲ್ಲೂ, ಇರುವ, **ಚತುರ್ಥ್ಯಂತ ಪದಙ್ಗಳಿಲೇ** - ಚತುರ್ಥಿಯು ಕೊನೆಯಲ್ಲಿರುವ ಪದಗಳಾದ **ನಾರಾಯಣಾಯ** ಎಂಬ ಶಬ್ದಗಳಲ್ಲಿ, ಎಂದರೆ ಮೂಲಮಂತ್ರದ **ನಾರಾಯಣಾಯ** ಎಂಬ ಪದದಲ್ಲೂ, ದ್ವಯಮಂತ್ರದ **ಶ್ರೀಮತೇ ನಾರಾಯಣಾಯ** ಎಂಬ ಪದದಲ್ಲೂ, **ಅಭಿಪ್ರೇತಮ್** - ತೋರಿಬರುತ್ತದೆ ಇಲ್ಲಿ ಸ್ವೇಚ್ಛಾಸಿದ್ಧಮಾನ ಎಂದು ಏಕೆ ಹೇಳಲ್ಪಟ್ಟಿತು ಎಂದರೆ ಪರೇಚ್ಛಾಸಿದ್ಧವಾದುದಾದರೆ ಸರ್ವೇಶ್ವರನಿಗಿಂತಲೂ ಉತ್ಕೃಷ್ಟವಾದುದು ಇನ್ನೊಂದು ವಸ್ತು ಉಂಟೆಂದಾಗುತ್ತದೆ. ಅದು ಅಸಂಗತವಾದುದೆಂದು ತಿಳಿಸುವದಕ್ಕಾಗಿ **ಸ್ವೇಚ್ಛಾಸಿದ್ಧಮಾನ** ವೆಂಬ ಪ್ರಯೋಗವು ನಾರಾಯಣ ಶಬ್ದದಲ್ಲಿರುವ ನಾರ ಶಬ್ದವು ನಿತ್ಯನಾಗಿರುವ ಸರ್ವ ಚಿದಚಿತ್ತನ್ನೂ ಬೋಧಿಸುತ್ತದೆ. ಇವುಗಳಿಗೆಲ್ಲಾ ಆಧಾರನಾಗಿಯೂ, ಮತ್ತು ಅವುಗಳನ್ನೆಲ್ಲಾ ಶರೀರವಾಗಿ ಹೊಂದಿ ಅವುಗಳಿಗೆ ಆತ್ಮಾವಾಗಿರುವದರಿಂದ, ನಾರಾಯಣಶಬ್ದದಿಂದ ಸರ್ವಪ್ರಕಾರ ಯುಕ್ತನೆಂಬ ಭಾವವು ತೋರಿಬರುತ್ತದೆ ಈ ನಾರಾಯಣ ಶಬ್ದವು ಚತುರ್ಥ್ಯಂತ ಪದವಾದುದರಿಂದ ಈ ಮುಕ್ತನು ಮಾಡುವ ಸರ್ವ ವಿಧ ಕೈಂಕರ್ಯವೂ ಶ್ರೀಮನ್ನಾರಾಯಣನಿಗೇನೇ ಎಂಬಭಿಪ್ರಾಯವು ತೋರಿಬರುತ್ತದೆ ಇದರಿಂದ ಸರ್ವಪ್ರಕಾರ ಯುಕ್ತನಾದ ಶ್ರೀಮನ್ನಾರಾಯಣನಿಗೆ ಮಾಡುವ ಸರ್ವ ವಿಧ ಕೈಂಕರ್ಯಗಳೂ ಕಾರ್ಯರೂಪವಾಗುವದಕ್ಕೆ, ಕಾರಣವು ಪರಿಪೂರ್ಣಬ್ರಹ್ಮಾನುಭವವಾದುದರಿಂದ, ಈ ಚತುರ್ಥ್ಯಂತ ನಾರಾಯಣ ಶಬ್ದಗಳು ಪರಿಪೂರ್ಣ ಬ್ರಹ್ಮಾನುಭವವನ್ನೂ ಬೋಧಿಸುತ್ತವೆ ಎಂದು ತಿಳಿಯತಕ್ಕದ್ದು.

ಆದರೆ ಶ್ರೀ ಯತಿವರ್ಯರು ದ್ವಯವಿವರಣರೂಪವಾದ ಶ್ರೀ ವೈಕುಂಠ ಗದ್ಯದಲ್ಲಿ ಪ್ರಾಪ್ಯದ ಫಲವು ಶ್ರೀಮನ್ನಾರಾಯಣನಿಗೆ ಕೈಂಕರ್ಯ ಮಾಡುವದೇ ಎಂದು ಹೇಳಿರುತ್ತಾರೆ ಹಾಗೆಯೇ ಶರಣಾಗತಿ ಗದ್ಯದಲ್ಲಿ ಈ ಕೈಂಕರ್ಯವು ಪ್ರೀತಿಕಾರಿತವೆಂದು ತಿಳಿಸಿರುತ್ತಾರೆ ಇವುಗಳಲ್ಲಿ ಪರಿಪೂರ್ಣಾನುಭವ ವಿಷಯವು ಏಕೆ ಹೇಳಲಿಲ್ಲವೆಂದರೆ, ಯಾವಾಗ ಪರಿಪೂರ್ಣಾನುಭವದಿಂದುಂಟಾಗುವ ಪ್ರೀತಿವಿಶೇಷವೂ

**ಇಪ್ಪಡಿ ಪರಿಪೂರ್ಣಾನುಭವತ್ತಾಲೆ ಪಿರನ್ದ ಪ್ರೀತಿವಿಶೇಷತ್ತುಕ್ಕು ಪರೀವಾಹನೆನ್ನುಮಿಡತ್ತೈ ಗದ್ಯತ್ತಿಲೆ ಪಲಕಾಲಮ್ ಅರುಳಿಚ್ಚೆಯ್ದಾರ್.**

---

ಅದರ ಪರೀವಾಹವಾದ ಕೈಂಕರ್ಯಗಳೂ ಹೇಳಲ್ಪಟ್ಟಿವೆ, ಆಗ ಪರಿಪೂರ್ಣಾನುಭವವೂ ಸಹ ಹೇಳಲ್ಪಟ್ಟಿತೆಂಬದಾಗಿ ಭಾವಿಸತಕ್ಕದ್ದೆಂದು ಹೇಳುತ್ತಾರೆ. ಹೀಗೆ ಪರಬ್ರಹ್ಮನಿಗೆ ಮಾಡುವ ಸರ್ವವಿಧ ಕೈಂಕರ್ಯಗಳಿಗೂ ಕಾರಣವು ಪರಿಪೂರ್ಣ ಬ್ರಹ್ಮಾನುಭವದಿಂದ ಉಂಟಾದ ಪರಮಪ್ರೀತಿಯೆಂದು ಶ್ರೀ ಭಾಷ್ಯಕಾರರವರು ಉಪಪಾದಿಸಿರುತ್ತಾರೆಂಬದಾಗಿ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.

**ಮುನ್ಬು ಶೊನ್ನ** - ಹಿಂದೆ **ಉತ್ತರಕೃತ್ಯಾಧಿಕಾರದಲ್ಲಿ** ಪುರುಷಾರ್ಥವಾಗಿ ಹೇಳಲ್ಪಟ್ಟ, **ಕೈಙ್ಕರ್ಯಮ್**-ಸರ್ವೇಶ್ವರನಿಗೆ ಮಾಡುವ ಕೈಂಕರ್ಯವು, **ಪರಿಪೂರ್ಣ** ಪರಬ್ರಹ್ಮಾನುಭವದಿಂದ, **ಪಿರನ್ದ**-ಹುಟ್ಟಿದ, **ಪ್ರೀತಿವಿಶೇಷತ್ತುಕ್ಕು**-ಪ್ರೀತಿವಿಶೇಷಕ್ಕೆ, **ಪರೀವಾಹಮ್**-ಕೋಡಿಯಾಗಿ ಉಕ್ಕಿಬರುವ ಪ್ರವಾಹವು, **ಎನ್ನುಮಿಡತ್ತೈ** - ಎನ್ನುವ ಪ್ರಕರಣವನ್ನು, **ಗದ್ಯತ್ತಿಲೇ** - ಶರಣಾಗತಿ ಗದ್ಯದಲ್ಲಿ, **ಪಲ ಕಾಲಮ್** - ಸ್ವಲ್ಪ ಕಾಲ, **ಅರುಳಿಚ್ಚೆಯ್ದಾರ್** - ಕೃಪಯಾ ಉಪದೇಶಿಸಿರುತ್ತಾರೆ. ಅಲ್ಲಿ ಹೇಳಿರುವದೇನೆಂದರೆ:—"**ತಥಾವಿಧ ಭಗವದನುಭವ ಜನಿತಾನವಧಿಕಾತಿಶಯ ಪ್ರೀತಿಕಾರಿತಾಶೇಷಾವಸ್ಥೋಚಿತಾಶೇಷ ಶೇಷತೈಕ ರತಿರೂಪ ನಿತ್ಯಕಿಙ್ಕರೋ ಭವಾನಿ**" ಹಿಂದಿನ ವಾಕ್ಯದಲ್ಲಿ ಉಪಪಾದಿಸಲ್ಪಟ್ಟಂಥಾ ಪರಿಪೂರ್ಣ ಭಗವದನುಭವದಿಂದುಂಟಾದ, ಅವಧಿಯಿಲ್ಲದ ಅತಿಶಯವಾದ ಪ್ರೀತಿಯಿಂದ ಎಂದರೆ ಭಕ್ತಿಯಿಂದ ಮಾಡಲ್ಪಟ್ಟ, ಭಗವಂತನ ಸಮಸ್ತ ಅವಸ್ಥಾವಿಶೇಷಗಳಿಗೂ ಯೋಗ್ಯವಾದ ತನ್ನ ದಾಸತ್ವದಲ್ಲೇ ಮುಖ್ಯಾಸಕ್ತಿಯುಳ್ಳ, ಕೈಂಕರ್ಯವನ್ನು ಮಾಡುವವನಾಗುವೆನು ಎಂಬರ್ಥವು. ಇದರ ತಾತ್ಪರ್ಯವೇನೆಂದರೆ, ನಿನ್ನ ಪರಿಪೂರ್ಣಾನುಭವದಿಂದ ನಿನ್ನಲ್ಲಿ ಅವಧಿಯಿಲ್ಲದಿರುವ ವಿಶ್ವಾಸಾತಿಶಯವು ಉಂಟಾಗಿ, ಆ ಪ್ರೀತ್ಯತಿಶಯವು ನಿನಗೆ ಸದಾ ದಾಸಭೂತನಾಗಿರುವ ನನ್ನಲ್ಲಿ, ನಿನಗೆ ಸರ್ವಾವಸ್ಥೆಯಲ್ಲಿಯೂ ತತ್ತದವಸ್ಥೆಗೆ ಉಚಿತವಾದ ಸರ್ವವಿಧ ಕೈಂಕರ್ಯಗಳನ್ನೂ ಎಸಗುವ ಹಾಗೆ ನಿನ್ನ ಅನುಗ್ರಹ ಉಂಟಾಗಲಿ ಎಂಬುದು. ಹೀಗೆ ಕೈಂಕರ್ಯವು ಭಗವದನುಭವದಿಂದುತ್ಪನ್ನವಾದುದರಿಂದ, **ನಾರಾಯಣಾಯ** ಎಂಬ ಪದದ ಚತುರ್ಥಿಯಲ್ಲಿ ತೋರುವ ಕೈಂಕರ್ಯದಿಂದ ಪರಿಪೂರ್ಣಬ್ರಹ್ಮಾನುಭವವು ಅಭಿಪ್ರೇತವು ಎಂದು ಹೇಳಲ್ಪಟ್ಟಿತು.

ಆದರೆ ಭಗವದಭಿಮತಾನುಗುಣವಾದ ಕೈಙ್ಕರ್ಯಪರ್ಯಂತವಾದುದು ಈ ಪರಿ

## ಮುಕ್ತಸ್ಯ ಜಕ್ಷಣ ಕ್ರೀಡನಾದೀನಾಂ ಕೈಙ್ಕರ್ಯಾನ್ತರ್ಭಾವ ಕಥನಮ್

ಮು (ಕ್ತಿ) ಕ್ತ ದಶೈಯಿಲೇ ಶ್ರುತಿಸಿದ್ಧಮಾನ ಜಕ್ಷಣಾದಿಗಳುಮ್

---

ಪೂರ್ಣ ಬ್ರಹ್ಮಾನುಭವವು, ಎಂದು ಹೀಗೆ ಹೇಳಿದುದಾದರೆ. ಸತತ್ರ ಪರ್ಯೇತಿ ಜಕ್ಷತ್ಕ್ರೀಡನ್ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ” (ಛಾಂ. ೮. ೧೨. ೩) ಎಂದರೆ ಆ ಪ್ರಾಪ್ತನಾದ ಜೀವಾತ್ಮನು ಪರಮಾತ್ಮನನ್ನು ಹೊಂದಿ ಆತನ ಸುತ್ತಲೂ ಅನುಸಂಚರಿಸುತ್ತಾ ಆತನನ್ನನುಭವಿಸ ವನು ಸ್ತ್ರೀಯರಿಂದಲೂ ವಾಹನಗಳಿಂದಲೂ, ಜ್ಞಾತಿಗಳಿಂದಲೂ ಸೇರಿದವನಾಗಿ ರಮಿಸುವನು ಎಂದರೆ ಸರ್ವೇಶ್ವರನ ಸಙ್ಕಲ್ಪಾಧೀನನಾಗಿ ತನ್ನ ಇಷ್ಟಾನುಸಾರ ಸರ್ವ ವಿಧ ಭೋಗಗಳನ್ನೂ ಅನುಭವಿಸುವನೆಂದು ಶ್ರುತಿಯು ಹೇಳುತ್ತದೆಯಲ್ಲಾ ಮತ್ತು ಇನ್ನೊಂದು ಕಡೆಯಲ್ಲೂ ಅದೇ ಉಪನಿಷತ್ತು “ಸಯದಿ ಪಿತೃಲೋಕ ಕಾಮೋ ಭವತಿ, ಸಙ್ಕಲ್ಪಾದೇವಾಸ್ಯ ಪಿತರಸ್ಸಮುತ್ತಿಷ್ಠನ್ತಿ” “ಯಾವಾಗ ಮುಕ್ತನಾಗುವನೋ ಆಗ ತನ್ನ ಹಿಂದಿನ ಜನ್ಮ ಸಂತತಿಗಳ ಪಿತೃವರ್ಗವನ್ನೆಲ್ಲಾ ನೋಡಬೇಕೆಂಬ ಅಪೇಕ್ಷೆಯುಂಟಾದರೆ, ಆ ಪಿತೃವರ್ಗವೆಲ್ಲಾ ಈತನ ಸಙ್ಕಲ್ಪದಿಂದಲೇ ಪ್ರಾಪ್ತರಾಗುವರು, ಅವರಿಂದ ಯುಕ್ತನಾಗಿ ಪೂಜಿಸಲ್ಪಡುವನೆಂದೂ ಪ್ರಾರಂಭಿಸಿ ಹೇಳಿ, ಕೊನೆಗೆ “ಯಂ ಯಮನ್ತ ಮಭಿಕಾಮೋ ಭವತಿ, ಯಂ ಕಾಮಯತೇ, ಸೋಽಸ್ಯ ಸಙ್ಕಲ್ಪಾದೇವ ಸಮುತ್ತಿಷ್ಠತಿ” “ಈ ಮುಕ್ತನಿಗೆ ಯಾವ ಯಾವ ಅನ್ತಾನ್ ಎಂದರೆ ಫಲದಲ್ಲಿ ಅಭಿರುಚಿಯೋ, ಯಾವುದು ಅಪೇಕ್ಷಿತವೋ, ಅವೆಲ್ಲಾ ಆತನ ಸಙ್ಕಲ್ಪಮಾತ್ರದಿಂದಲೇ ಪ್ರಾಪ್ತವಾಗುತ್ತದೆ” ಎಂದು ಮುಗಿಸಿರುತ್ತದೆ ಹೀಗೆ ಸರ್ವ ವಿಧ ಭೋಗಗಳೂ ಅನುಭವಗಳೂ ಹೇಳಲ್ಪಟ್ಟಿರುವಾಗ, ಕೈಂಕರ್ಯಪರ್ಯಂತವಾದ ಭಗವದನುಭವವೇ ಪ್ರಾಪ್ತಿ ಕೇಗಾಗುತ್ತದೆಂದು ಪ್ರಶ್ನಿಸಿದರೆ ಅದಕ್ಕೆ ಸಮಾಧಾನವನ್ನು ಮುಂದಿನ ವಾಕ್ಯದಿಂದುಪದೇಶಿಸುತ್ತಾರೆ.

**ಮುಕ್ತನಿಗುಂಟಾಗುವ ಜಕ್ಷಣ ಕ್ರೀಡನಾದಿಗಳೆಲ್ಲಾ ಭಗವತ್ಕೈಙ್ಕರ್ಯದಲ್ಲೇ ಅಂತರ್ಭೂತಗಳು.**

---

**ಮುಕ್ತದಶೈಯಿಲೇ** - ಮುಕ್ತನಾಗಿರುವ ಅವಸ್ಥೆಯಲ್ಲಿ, ಮುಕ್ತಿದಶೈಯಿಲೇ ಎಂಬ ಪಾಠವಾದರೆ, ಮುಕ್ತಿಯನ್ನು ಹೊಂದಿರುವ ಅವಸ್ಥೆಯಲ್ಲಿ ಎಂಬರ್ಥವು, **ಶ್ರುತಿಸಿದ್ಧಮಾನ** - ಛಾಂದೋಗ್ಯದ ಅಷ್ಟಮ ಪ್ರಪಾಠಕ ಮೂರನೆಯ.

**ಜ್ಞಾತ್ಯಾದಿ ಸಂಪಾದನಙ್ಗಳು ಮೆಲ್ಲಾಮ್ ಪುಣ್ಯಪಾಪರೂಪ ಕರ್ಮ ನಿರಪೇಕ್ಷ ಭಗವದಿಚ್ಛಾನುಗುಣ ಸ್ವೇಚ್ಛಾಮೂಲಙ್ಗಳಾಗೈಯಾಲೇ ಕರ್ಮಫಲ ಮನ್ರಿಕ್ಕೇ ಅನುಭವ ಪರೀವಾಹಮಾನ ಕೇವಲ ಕೈಙ್ಕರ್ಯತ್ತಿಲೇ ಅಂತರ್ಭೂತಙ್ಗಳ್.**

---

ಖಂಡದಲ್ಲಿ **"ಜಕ್ಷತ್ಕ್ರೀಡನ್ ರಮಮಾಣಃ"** ಎಂದು ಮೇಲೆ ಉದಾಹರಿಸಿರುವ ಶ್ರುತಿಪ್ರಮಾಣವುಳ್ಳ, **ಜಕ್ಷಣಾದಿಗಳುಮ್** - ಊಟ ಮೊದಲಾದವುಗಳೂ, **ಆದಿ** ಶಬ್ದದಿಂದ ಆಟ ಮೊದಲಾದವು ಸಂಗ್ರಹಿಸಲ್ಪಟ್ಟವು. **ಜ್ಞಾತ್ಯಾದಿ ಸಂಪಾದನಙ್ಗಳುಮೆಲ್ಲಾಮ್** - ಆ ಶ್ರುತಿ ವಾಕ್ಯದಲ್ಲೇ **"ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ"** ಎಂದು ಹೇಳಿರುವ ಹಾಗೆ, ಜ್ಞಾತಿಗಳೊಂದಿಗೆ ಸಮಾಗಮ ಮೊದಲಾದವುಗಳೆಲ್ಲಾ, ಇಲ್ಲಿ ಆದಿ ಪದದಿಂದ, ಸ್ತ್ರೀಗಳ, ವಾಹನಗಳ ಪ್ರಾಪ್ತಿಯು ಹೇಳಲ್ಪಟ್ಟಿತು, ಎಲ್ಲಾಮ್ ಎಂಬುವದರಿಂದ ಮಾತಾ, ಭಾರ್ಯಾ, ಭ್ರಾತಾ, ಗೀತವಾದಿತ್ರ ಮೊದಲಾದವುಗಳ ಪ್ರಾಪ್ತಿಯು ಸೂಚಿಸಲ್ಪಟ್ಟಿತು, ಹೀಗೆ ಇವೆಲ್ಲವೂ ಪುಣ್ಯಪಾಪವೆಂಬ ಎರಡು ವಿಧವಾದ **ಕರ್ಮ**ಗಳ, **ನಿರಪೇಕ್ಷ**-ಮೂಲಕವಲ್ಲದ, **ಭಗವದಿಚ್ಛಾನುಗುಣ** - ಭಗವಂತನ ಇಷ್ಟಾನುಸಾರವಾದ, **ಸ್ವೇಚ್ಛಾ ಮೂಲಙ್ಗಳಾಗೈಯಾಲೇ** - ತನ್ನ ಇಷ್ಟವೇ ಮೂಲಕಾರಣವಾಗಿ ಉಳ್ಳವುಗಳಾದುದರಿಂದ, ಈ ಭೋಗಗಳೆಲ್ಲಾ, **ಕರ್ಮಫಲಮನ್ರಿಕ್ಕೇ** - ಕರ್ಮಫಲಗಳಲ್ಲದೇ, **ಅನುಭವ ಪರೀವಾಹಮಾನ** - ಪರಿಪೂರ್ಣ ಬ್ರಹ್ಮಾನುಭವದ ಪ್ರವಾಹರೂಪವಾದ, **ಕೇವಲ ಕೈಙ್ಕರ್ಯತ್ತಿಲೇ** - ಕೇವಲ ಕೈಂಕರ್ಯದಲ್ಲೇ, **ಅಂತರ್ಭೂತಙ್ಗಳ್** - ಅಡಗಿದವು, ಸೇರಿದವು ಆ ಊಟ ಆಟಗಳೂ, ಇತರ ಭೋಗಗಳೂ, ತಾಯಿ, ತಂದೆ, ಭಾರ್ಯಾ, ಭ್ರಾತಾ, ಮುಂತಾದವರುಗಳ ಸಮಾಗಮವೂ, ಅದರಿಂದುಂಟಾಗುವ ಹರ್ಷವೂ, ಇವೆಲ್ಲಕ್ಕೂ ಭಗವದನುಭವದಿಂದುಂಟಾದ ಕೈಂಕರ್ಯದಲ್ಲೇ ಪರ್ಯವಸಾನವೆಂದು ಹೇಳಲ್ಪಟ್ಟಿತು. ಹೇಗೆಂದರೆ ಮುಕ್ತದೆಶೆಯಲ್ಲಿ ಈತನಿಗೆ ಪುಣ್ಯಪಾಪರೂಪ ಕರ್ಮ ಸಂಬಂಧಕ್ಕೆ ಕಾರಣವೇ ಇರುವದಿಲ್ಲವು. **"ಯಥೇಷೀಕಾ ತೂಲಮಗ್ನೌ ಪ್ರೋತಂ ಪ್ರದೂಯೇತ, ಏವಂ ಹಾಸ್ಯಸರ್ವೇ ಪಾಪ್ಮಾನಃ ಪ್ರದೂಯಂತೇ"** ಎಂದು ಹೇಳಿರುವ ಹಾಗೆ ಪುಣ್ಯಪಾಪಗಳೆಲ್ಲವೂ ಬೆಂಕಿಯಲ್ಲಿ ಬಿದ್ದ ಊಬಿನ ಹತ್ತಿಯಂತೆ ದಗ್ಧವಾಗಿ ಹೋಗಿಬಿಡುತ್ತವೆ ಹೀಗಿರುವಾಗ ಈತನಿಗೆ ಪ್ರಾಪ್ತವಾಗುವ, ಶ್ರುತಿಯು ಹೇಳಿರುವ, ಸರ್ವ ವಿಧ ಭೋಗಗಳೂ ಕರ್ಮಫಲವಲ್ಲವು. **ಸಸ್ವರಾಡ್ಭವತಿ** ಎಂದು ಹೇಳಿರುವ ಹಾಗೆ ಕರ್ಮವಶ್ಯನಲ್ಲದೆ, ಸರ್ವೇಶ್ವರನ ಇಷ್ಟಾ

**ಪರಬ್ರಹ್ಮಪ್ರಾಪ್ತೇಃ ಸಿದ್ಧಾನ್ತೇಷು ನಿರ್ಣೀತೋರ್ಥಃ.**

**ಆಗೈಯಾಲ್ ಪ್ರಾಪ್ತಿಯಾಯಿತ್ತದು ಯಥಾಭಿಮತ ಕೈಙ್ಕರ್ಯ ಪರ್ಯಂತ ಪರಿಪೂರ್ಣಬ್ರಹ್ಮಾನುಭವ (ಮೆನ್ರದಾಯಿತ್ತು) ಮ್.**

**ಪರಿಪೂರ್ಣಬ್ರಹ್ಮಾನುಭವಸ್ಯ ನಿತ್ಯತ್ವಂ ಪ್ರಮಾಣಾನಿಚ.**

**ಇವ್ವನುಭವಮುಣ್ಡಾನಾಲ್ ಪಿನ್ಬೊರುಕಾಲತ್ತಿಲುಮ್ ಅಳಿಯಾದೆ**

ನುಸಾರವಾಗಿ ತಾನೂ ತನ್ನ ಸಂಕಲ್ಪದಿಂದ ತನಗೆ ಇಷ್ಟವಾದ ಭೋಗಗಳನ್ನು ಅನುಭವಿಸುವನು. ಸರ್ವೇಶ್ವರನು ಹೇಗೆ ತನ್ನ ಇಷ್ಟಾನುಸಾರ ಭೋಗಗಳನ್ನನುಭವಿಸಿ ಪ್ರೀತನಾಗುವನೋ, ಹಾಗೆಯೇ ತನ್ನ ಪ್ರಿಯಭಕ್ತನಾದ ಮುಕ್ತನೂ ಕೂಡ ಈ ಮೇಲೆ ಹೇಳಿದ ಭೋಗಗಳನ್ನನುಭವಿಸುವದರಿಂದ ಶ್ರಿಯಃಪತಿಯು ಸುಪ್ರೀತನಾಗುವನು. ಹೀಗೆ ಭಗವದಭಿಮತಾನುವರ್ತಿಯಾಗಿದ್ದುಕೊಂಡು ಮಾಡುವ ಈತನ ಸರ್ವವಿಧ ವ್ಯಾಪಾರ ಭೋಗಾದಿಗಳಿಂದ ಭಗವಂತನು ಸುಪ್ರೀತನಾಗಿ ಆನಂದಿಸುವದರಿಂದ ಭಗವತ್ಕೈಂಕರ್ಯದಲ್ಲೇ ಇವೂ ಅಂತರ್ಭೂತಗಳೆಂದು ಹೇಳುವದರಲ್ಲೇನೂ ವಿರೋಧವಿಲ್ಲವೆಂಬ ಭಾವವು.

**ಪರಬ್ರಹ್ಮಪ್ರಾಪ್ತಿ ಎಂಬುವದಕ್ಕೆ ಸಿದ್ಧಾನ್ತದಲ್ಲಿ ನಿರ್ಣಯಿಸಲ್ಪಟ್ಟ ಅರ್ಥವು.**

ಅರ್ಥಪಂಚಕ ವಿವರಣೆಯಲ್ಲಿ ಪರಬ್ರಹ್ಮ ಪ್ರಾಪ್ತಿರೂಪ ಫಲವು ಅವುಗಳಲ್ಲಿ ಒಂದೆಂದೂ, ಆ ಫಲದ ಸ್ವರೂಪವು ಮುಂದೆ ಪ್ರಾಪ್ತ ಸ್ಥಳದಲ್ಲಿ ತಿಳಿಸಲ್ಪಡುವದೆಂದೂ, ಹೇಳಲ್ಪಟ್ಟಿತ್ತು. ಆ ಪರಬ್ರಹ್ಮಪ್ರಾಪ್ತಿ ಎಂಬುದು ಎಂಥಾದ್ದೆಂದು ಈಗ ತಿಳಿಸುತ್ತಾರೆ. ಈಗ ಪರಿಪೂರ್ಣ ಬ್ರಹ್ಮಾನುಭವದಿಂದುಂಟಾದ ಪ್ರೀತ್ಯತಿಶಯವು ಕೈಂಕರ್ಯರೂಪವಾಗಿ ಪರಿಣಮಿಸುತ್ತದೆಂದು ಹೇಳಿದುದರಿಂದ. ಈ ಕೈಂಕರ್ಯಪರ್ಯಂತವಾದ ಪರಿಪೂರ್ಣಬ್ರಹ್ಮಾನುಭವವೇ ಪರಬ್ರಹ್ಮಪ್ರಾಪ್ತಿ ಎಂದು ಹೇಳಿಸಿಕೊಳ್ಳುತ್ತದೆಂದುಪದೇಶಿಸುತ್ತಾರೆ.

**ಆಗೈಯಾಲ್** - ಆದುದರಿಂದ, **ಪ್ರಾಪ್ತಿಯಾಯಿತ್ತದು** - ಪರಬ್ರಹ್ಮಪ್ರಾಪ್ತಿ ಎಂದು ಹೇಳಿಸಿಕೊಳ್ಳುವದು, ಯಾವುದೆಂದರೆ :—**ಯಥಾಭಿಮತ** - ಭಗವಂತನ ಇಷ್ಟಕ್ಕನುಸಾರವಾದ, ಕೈಂಕರ್ಯಪರ್ಯಂತವಾದ, ಪರಿಪೂರ್ಣ ಬ್ರಹ್ಮಾನುಭವವು.

**ನ್ನುಮಿಡನ್, (೧) "ಪ್ರಾಪ್ಯತೇ ಪರಮಂ ಧಾಮ ಯತೋನಾವರ್ತತೇ ಯತಿಃ", (೨) "ಮಾಮುಪೇತ್ಯ ಪುನರ್ಜನ್ಮ ದುಃಖಾಲಯ ಮಶಾಶ್ವ**

---

## ಪರಿಪೂರ್ಣಬ್ರಹ್ಮಾನುಭವದ ನಿತ್ಯತ್ವವೂ, ಪ್ರಮಾಣಗಳೂ ಸಹ.

ಸರ್ವೇಶ್ವರ ಕೃಪೆಯಿಂದ ಒಂದಾನೊಂದು ಕಾಲದಲ್ಲಿ ಪರಿಪೂರ್ಣ ಬ್ರಹ್ಮಾನುಭವವು ಲಭಿಸಿದುದಾದರೆ, ತದನಂತರ ಅದಕ್ಕೆ ಎಂದಿಗೂ ಚ್ಯುತಿ ಇಲ್ಲವೆಂದು ಹೇಳಲುದ್ಯುಕ್ತರಾಗಿ ಕೆಲವು ಪ್ರಮಾಣಗಳನ್ನು ಉದಾಹರಿಸಿರುತ್ತಾರೆ. **ಇವ್ವನುಭವಮುಣ್ಡಾನಾಲ್** ಈ ಪರಿಪೂರ್ಣ ಬ್ರಹ್ಮಾನುಭವವು ಭಗವದನುಗ್ರಹದಿಂದ ಲಭಿಸಿದುದಾದರೆ, **ಪಿನ್ಬೊರುಕಾಲತ್ತಿಲುಮ್** - ಅನಂತರ ಯಾವುದೊಂದು ಕಾಲದಲ್ಲೂ, **ಅಳಿಯಾದು** - ನಾಶವಾಗುವದಿಲ್ಲವು, **ಎನ್ನುಮಿಡಮ್** - ಎನ್ನುವ ಸಂದರ್ಭವು, (೧) "**ಯತಿಃ** - ಬ್ರಹ್ಮನಿಷ್ಠನಾದ ಸನ್ಯಾಸಿಯು, **ಯತಃ** - ಯಾವ ದಿವ್ಯ ವೈಕುಂಠದಿಂದ, **ನಾವರ್ತತೇ** - ಪುನಃ ಈ ಪ್ರಾಕೃತ ಲೋಕಕ್ಕೆ ಬರುವದಿಲ್ಲವೋ, ಅಂತಹ, **ಪರಮಂಧಾಮ** - ಸರ್ವೋತ್ಕೃಷ್ಟವಾದುದರಿಂದ ಪರಮಪದವೆಂದು ಹೇಳಿಸಿಕೊಳ್ಳುವ ಸ್ಥಾನವು, ಹೊಂದಲ್ಪಡುತ್ತದೆ." (೨) "**ಮಹಾತ್ಮಾನಃ** - ಸರ್ವೋತ್ಕೃಷ್ಟವಾದ ಮನಸ್ಸುಳ್ಳವರು, ಎಂದರೆ ಯಥಾವಸ್ಥಿತವಾದ ನನ್ನ ಸ್ವರೂಪದ ಜ್ಞಾನವುಳ್ಳವರಾಗಿ, ನನ್ನಲ್ಲೇ ಅತ್ಯಂತ ಭಕ್ತಿವಿಶ್ವಾಸಗಳನ್ನುಳ್ಳವರಾಗಿ, ನಾನಿಲ್ಲದೆ ಆತ್ಮಧಾರಣೆಯನ್ನು ಮಾಡಲಶಕ್ತರಾದವರಾಗಿ, ನನ್ನಲ್ಲೇ ಸೇರಿದ ಮನಸ್ಸುಳ್ಳವರು ಎಂಬರ್ಥವು, ಇಂತಹ, **ಪರಮಾಂ ಸಂಸಿದ್ಧಿಂಗತಾಃ** - **ಸರ್ವೋತ್ಕೃಷ್ಟವಾದ** ಶ್ರೇಯೋರೂಪವಾದ ತನ್ನ ಪ್ರಾಪ್ತಿಯನ್ನು ಹೊಂದಿದವರು, **ಮಾಂ ಉಪೇತ್ಯ** - ನನ್ನನ್ನು ಹೊಂದಿದ ನಂತರ, **ದುಃಖಾಲಯಂ** - ಸರ್ವವಿಧ ದುಃಖಗಳಿಗೂ ತೌರುಮನೆಯಾದ, **ಅಶಾಶ್ವತಂ** - ಅಸ್ಥಿರವಾದ, **ಪುನರ್ಜನ್ಮವನ್ನು, ನಾಪ್ನುವಂತಿ**-ಹೊಂದುವದಿಲ್ಲವು. **ಆಬ್ರಹ್ಮಭುವನಾಲ್ಲೋಕಾಃ**-**ಬ್ರಹ್ಮಾಂಡೋದರದಲ್ಲಿರುವ** ಬ್ರಹ್ಮಲೋಕಪರ್ಯಂತವಾದ ಸಮಸ್ತ ಲೋಕದ ಜನರೂ ಹೇ ಅರ್ಜುನನೇ, **ಪುನರಾವರ್ತಿನಃ** - ಪುನಃ ಹಿಂತಿರುಗಿ ಬರತಕ್ಕವರು ಎಂದರೆ ಅಲ್ಲಿಂದ ಪುನಃ ಈ ಲೋಕಕ್ಕೇ ಬರಬೇಕಾಗುತ್ತದೆ ಎಂಬ ಭಾವವು, ಓ ಕುಂತೀ ಪುತ್ರನೇ, **ಮಾಮುಪೇತ್ಯತು** - ನನ್ನನ್ನಾಶ್ರಯಿಸಿ ನನ್ನನ್ನು ಹೊಂದಿದವರಾದರೋ, ನಾನು ಸರ್ವಜ್ಞನಾಗಿ, ಸತ್ಯಸಂಕಲ್ಪನಾಗಿ, ಸಮಸ್ತ ಜಗತ್ತುಗಳ

---

(೧) ಅಹಿ. ೩೭. ೨೬. (೨) ಗೀ. ೮-೧೫. ೧೬.

**ತವ್ । ನಾಪ್ನುವಂತಿ ಮಹಾತ್ಮಾನ ಸ್ಸಂಸಿದ್ಧಿಂ ಪರಮಾಂಗತಾಃ ॥ ಆಬ್ರಹ್ಮ ಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ । ಮಾಮುಪೇತ್ಯತು ಕೌನ್ತೇಯ ಪುನರ್ಜನ್ಮ ನವಿದ್ಯತೇ ॥",** (೩) **"ಯದಾಸ ಕೇವಲೀ ಭೂತಷ್ಷಡ್ವಿಂಶ ಮನುಪಶ್ಯತಿತದಾ ಸಸರ್ವಸಿದ್ಧತ್ವಾತ್ಪುನರ್ಜನ್ಮ ನವಿಂದತಿ ॥"** (೪) **"ಗತ್ವಾಗತ್ವಾ ನಿವರ್ತಂತೇ ಚಂದ್ರಸೂರ್ಯಾದಯೋಗ್ರಹಾಃ ।**

ಉತ್ಪತ್ತಿ ಸ್ಥಿತಿಲಯಗಳನ್ನೇ ಲೀಲೆಯಾಗುಳ್ಳವನಾಗಿ, ಪರಮ ಕಾರುಣಿಕನಾಗಿ, ಯಾವಾಗಲೂ ಒಂದೇ ವಿಧವಾಗಿರುವವನಾದುದರಿಂದಲೇ, ನನ್ನನ್ನು ಹೊಂದಿದವರಿಗೆ, **ಪುನರ್ಜನ್ಮ ನ ವಿದ್ಯತೇ** - ಪುನರ್ಜನ್ಮವಿಲ್ಲವು," ಈ ಸಂದರ್ಭದಲ್ಲಿ **"ನ ಚ ಪರಮ ಪುರುಷ ಸ್ಸತ್ಯಸಂಕಲ್ಪೋಽತ್ಯರ್ಥ ಪ್ರಿಯಂ ಜ್ಞಾನಿನಂ ಲಬ್ಧ್ವಾ ಕದಾಚಿದಾವರ್ತಯಿಷ್ಯತಿ"** ಎಂದರೆ ಸತ್ಯಸಂಕಲ್ಪನಾದ ಪರಮಪುರುಷನು ತನಗೆ ಅತ್ಯಂತ ಪ್ರಿಯನಾದ ಜ್ಞಾನಿಯನ್ನು ಹೊಂದಿದವನಾಗಿ ಎಂದಿಗೂ ಆತನಿಗೆ ಆವರ್ತಿಯನ್ನುಂಟುಮಾಡುವದಿಲ್ಲವೆಂದು, ಶ್ರೀ ಯತಿವರ್ಯರು ಅಪ್ಪಣೆ ಕೊಡಿಸಿರುತ್ತಾರೆ (೩) **"ಯದಾ** - ಯಾವಾಗ, **ಸಃ** - ಆ ಮುಕ್ತನು, **ಕೇವಲೀಭೂತಃ** - ಪ್ರಕೃತಿಸಂಬಂಧವಿಲ್ಲದವನಾಗಿ, **ಷಡ್ವಿಂಶಂ** - ೨೬ನೆಯ ತತ್ವವಾದ ಪರಮಾತ್ಮನನ್ನು, ಸಾಂಖ್ಯರ ವಿಭಾಗ ಪ್ರಕಾರ ೨೪ ಅಚಿತ್ತತ್ವಗಳು, ೨೫ನೆಯ ತತ್ವವು ಜೀವಾತ್ಮನು, ೨೬ನೆಯ ತತ್ವವು ಪರಮಾತ್ಮನು, **ಅನುಪಶ್ಯತಿ** - ಸಾಕ್ಷಾತ್ಕರಿಸಿ ಅನುಭವಿಸುವನೋ, **ತದಾ** - ಆಗ, **ಸಃ** - ಆ ಆತ್ಮನು, **ಸರ್ವಸಿದ್ಧತ್ವಾತ್** - ಪರಿಪೂರ್ಣ ಬ್ರಹ್ಮಾನುಭವದಿಂದ ಸರ್ವವಿಧ ಭೋಗವೂ ಉಂಟಾಗುವದರಿಂದ, **ಪುನರ್ಜನ್ಮ ನ ವಿಂದತಿ** - ಪುನರ್ಜನ್ಮವನ್ನು ಹೊಂದುವದಿಲ್ಲವು. ಇದು ಶ್ರೀ ಭೀಷ್ಮರು ಹೇಳುವ ಜನಕ ಯಾಜ್ಞವಲ್ಕ್ಯ ಸಂವಾದದಲ್ಲಿ, ಮಿಥಿಲಾಧಿಪನಿಗೆ ಯಾಜ್ಞವಲ್ಕ್ಯರುಪದೇಶವು." ಈ ಸಂದರ್ಭದಲ್ಲಿ **"ನ ಚ ಪರಬ್ರಹ್ಮಾನುಭವೈಕ ಸ್ವಭಾವಸ್ಯ ತದೇಕ ಪ್ರಿಯಸ್ಯ ಅನವಧಿಕಾನನ್ದಂ ಬ್ರಹ್ಮಾನುಭವತೋಽನ್ಯಾಪೇಕ್ಷಾ"** "ಪರಿಪೂರ್ಣ ಬ್ರಹ್ಮಾನುಭವವನ್ನೇ ಸದಾ ಮಾಡಿಕೊಂಡು, ಆ ಪರಮಾತ್ಮನೊಬ್ಬನಲ್ಲೇ ಪರಿಪೂರ್ಣ ಪ್ರೀತಿ ಇರುವವನಿಗೆ ಅನವಧಿಕಾನಂದ ಸ್ವರೂಪನಾದ ಪರಬ್ರಹ್ಮನ ಅನುಭವಕ್ಕಿಂತ ಬೇರೆ ಯಾವುದರಲ್ಲೂ ಅಪೇಕ್ಷೆಯಿರುವದಿಲ್ಲವು" ಎಂದು ಶ್ರೀ ಯತಿವರ್ಯರು ಹೇಳಿರುತ್ತಾರೆ. (೪) **"ಚಂದ್ರಸೂರ್ಯಾದಯೋ ಗ್ರಹಾಃ** - ಚಂದ್ರಸೂರ್ಯರೇ ಮೊದಲಾದ ಗ್ರಹ

(೩) ಭಾರತ ಶಾನ್ತಿ ೩೭೮—೫೧. (೪) ವಿ. ಪು ೧. ೬. ೪೦.

**ಅದ್ಯಾಪಿ ನನಿವರ್ತನ್ತೇ ದ್ವಾದಶಾಕ್ಷರ ಚಿನ್ತಕಾಃ॥" (೫) "ವಾಯಿನಾಲ್ ನಮೋನಾರಣಾವೆನ್ರು ಮತ್ತಕತ್ತಿಡೈಕ್ಕೈಗಳ್ಳೈಕ್ಕೂಪ್ಪಿ ಪ್ಪೋಯಿನಾಲ್ ಪಿನ್ನೈ ಇತ್ತಿಶೈಕ್ಕೆನ್ರುಮ್ ಪುಕ್ಕೈಕೊಡುಕ್ಕಿಲುಮ್ ಪೋಗವಿಟ್ಟಾರೇ" ಇತ್ಯಾದಿಗಳಿಲೇ ಪ್ರಸಿದ್ಧಮ್.**

---

ಗಳು, **ಗತ್ವಾ ಗತ್ವಾ** - ತಮ್ಮತಮ್ಮ ಅಧಿಕಾರಗಳನ್ನು ಹೊಂದಿದವರಾಗಿ, **ಕೊನೆಗೆ** ಪ್ರಳಯಕಾಲದಲ್ಲಿ, **ನಿವರ್ತನ್ತೇ** - ತಮ್ಮ ಸ್ಥಾನದಿಂದ ಹಿಂತಿರುಗುವರು, ಸ್ಥಾನ ಭ್ರಷ್ಟರಾಗುವರು, ಇಲ್ಲಿ ಚಂದ್ರಸೂರ್ಯರನ್ನು ಮುಖ್ಯವಾಗಿ ಹೇಳಿರುವದು, ಅವರು ಕಾಲನಿಯಾಮಕರಾಗಿರುವದರಿಂದ ; ಹಾಗೆ ಹೇಳಿರುವದು ಚತುರ್ಮುಖ ಬ್ರಹ್ಮ ಮೊದಲಾದವರಿಗೂ ಕೂಡ ಉಪಲಕ್ಷಣವು ; ಹೀಗೆ ಅನೇಕರಿಗೆ ಜನ್ಮ ಸಂತತಿಗಳುಂಟು ; ಇನ್ನು ಯಾರಿಗೆ ಪುನರಾವರ್ತಿಯಿಲ್ಲವೆಂದರೆ ಹೇಳುತ್ತಾರೆ, **ದ್ವಾದಶಾಕ್ಷರ ಚಿನ್ತಕಾಃ** - ದ್ವಾದಶಾಕ್ಷರ ಮಂತ್ರವನ್ನು ಜಪಿಸುವವರು, **ಅದ್ಯಾಪಿ** - ಈಗಲೂ ಕೂಡ, **ನ ನಿವರ್ತನ್ತೇ** - ಹಿಂತಿರುಗಿ ಈ ಲೋಕಕ್ಕೆ ಬಂದು ಜನ್ಮವನ್ನೆತ್ತುವದಿಲ್ಲವು, ಎಂದರೆ ದಿವ್ಯವೈಕುಂಠದಲ್ಲೇ ಸದಾ ಇರುವರೆಂಬ ಭಾವವು, ದ್ವಾದಶಾಕ್ಷರ ಮಂತ್ರವು ಶ್ರೀ ವಾಸುದೇವ ಮಂತ್ರವು, ಹನ್ನೆರಡು ಅಕ್ಷರಗಳುಳ್ಳ ಮಂತ್ರವು ; ಇದನ್ನೇ ನಾರದರು ಪ್ರಹ್ಲಾದರಿಗೆ ಬೋಧಿಸಿದುದು ; ದ್ವಾದಶಾಕ್ಷರವೆಂದು ಹೇಳಿದುದು ಇತರ ಮಂತ್ರಗಳಾದ ಅಷ್ಟಾಕ್ಷರ ಮಂತ್ರ ಮತ್ತು ವಿಷ್ಣು ಷಡಕ್ಷರ ಮಂತ್ರಗಳಿಗೂ ಉಪಲಕ್ಷಣವು ಇಲ್ಲಿ ಅದ್ಯಾಪಿ ಎಂದು ಹೇಳಿರುವದರಿಂದ ಸೃಷ್ಟಿ ಮೊದಲುಗೊಂಡು ಇಂದಿನವರೆಗೂ ಅವರಿಗೆ ಪುನರಾವೃತ್ತಿ ಇಲ್ಲವೆಂದು ಹೇಳಿದುದರಿಂದ ಎಂದಿಗೂ ಅವರಿಗೆ ಪುನರಾವರ್ತಿ ಇಲ್ಲವೆಂಬ ಭಾವವು. (೫) "**ವಾಯಿನಾಲ್ ನಮೋನಾರಣಾವೆನ್ರು** - ಬಾಯಿಗೆ ಸಾರ್ಥಕ್ಯವಾಗಿ, ಬಾಯಿಯಿಂದ **ನಮೋ ನಾರಾಯಣಾ** ಎಂದು ಮೂಲ ಮಂತ್ರವನ್ನು ಜಪಿಸಿ, ಇದು ವಾಚಕ ಕೈಙ್ಕರ್ಯವು, **ಮತ್ತಕತ್ತಿಡೈಕ್ಕೈಗಳ್ಳೈಕ್ಕೂಪ್ಪಿ** - ತಲೆಗೂ ಕೈಗಳಿಗೂ ಸಾರ್ಥಕ್ಯವಾಗಿ, ಮಸ್ತಕದ ಮಧ್ಯದಲ್ಲಿ ಎಂದರೆ ತಲೆಯ ಮೇಲುಭಾಗದಲ್ಲಿ ಕೈಗಳನ್ನು ಜೋಡಿಸಿ ಅಂಜಲಿ ರೂಪದಲ್ಲಿ ನಮಸ್ಕಾರ ಮಾಡಿ, ಇದು ಕಾಯಿಕ ಕೈಙ್ಕರ್ಯವು, **ಪೋಯಿನಾಲ್**-ಹೀಗೆ ಕಾಲಯಾಪನೆಯನ್ನು ಮಾಡಿ ದೇಹತ್ಯಾಗ ಮಾಡಿದರೆ, ನಿತ್ಯ ವಿಭೂತಿಯ ಪ್ರಾಪ್ತಿಯುಂಟಾಗುವದರಿಂದ, **ಪಿನ್ನೈ**-ಪುನಃ **ಇದ್ದಿಶೈಕ್ಕು** - ಈ ಲೀಲಾವಿಭೂತಿಯ ಕಡೆಗೆ, **ಎನ್ರುಮ್** - ಎಂದಿಗೂ, ಯಾವ

---

(೫) ಪೆರಿಯ ತಿರುಮೊಳಿ ೪. ೫. ೨.

ಗಲೂ, ಪಿಣ್ಕೈ ಕೊಡುಕ್ಕಿಲುಮ್ - ಯಾರ ಜಾಮೀನನ್ನು ಕೊಟ್ಟರೂ, ಪೋಗ ವೊಟ್ಟಾರ್ - ಹೋಗಲು ಸಮ್ಮತಿಸುವದಿಲ್ಲವು; ಬಾಯಿಯಲ್ಲಿ ಮೂಲ ಮಂತ್ರ ವನ್ನುಚ್ಚರಿಸಿ ಸಕೃತ್ ಶರಣಾಗತಿಯನ್ನು ಮಾಡಿದವರಿಗೆ ದಿವ್ಯವೈಕುಂಠ ಪ್ರಾಪ್ತಿ ಯುಂಟಾಗುತ್ತದೆ. ಅವರಿಗೆ ಆಮೇಲೆ ಏನು ಸಮಾಧಾನವನ್ನು ಹೇಳಿ, ಯಾವ ಜಾಮೀನನ್ನು ಕೊಟ್ಟು ನೀವು ಲೀಲಾವಿಭೂತಿಗೆ ಸ್ವಲ್ಪಕಾಲ ಹೋಗಿ ಬನ್ನಿ, ಪುನಃ ಇಲ್ಲಿಗೆ ಕರೆದುಕೊಳ್ಳುವೆವು, ಇದರಲ್ಲಿ ಸಂದೇಹ ಬೇಡವೆಂದು ಹೇಳಿದರೂ ಅವರು ಎಂದಿಗೂ ಸಮ್ಮತಿಸರು, ಅಲ್ಪಕಾಲೀನವಾದ ಈ ಶರಣಾಗತ್ಯನುಷ್ಠಾನದಿಂದ ನಿರಂತರ ದಿವ್ಯವೈಕುಂಠ ಪ್ರಾಪ್ತಿಯುಂಟಾಗಿ ಪುನರಾವರ್ತಿಯನ್ನು ಎಂದಿಗೂ ಅಪೇಕ್ಷಿಸುವದಿಲ್ಲವೆಂಬ ಭಾವವು. ಇದು ಪಾಶುರದ ಉತ್ತರಾರ್ಧವು. ಪೂರ್ವಾರ್ಧ ವೇನೆಂದರೆ :—

"ಶೀಯಿನಾರ್ ಚಿರನ್ದೆರಿಯ ಪುಣ್ ಮೇಲ್
ಚೆನ್ರು ಲಿರಿಕ್ಕುಳ ಪ್ಪಿರುನ್ದೆಜ್ಞುಮ್ ।
ಈಯಿನಾಲರಿಪ್ಪುಣ್ಡು ಮಯಙ್ಗಿ
ಯೆಲ್ಲೈವಾಯ್ ಚ್ಚೆನ್ರು ಚೇರ್ವದನ್ಮುನ್ನಮ್ ॥"

ಒಂದು ಹುಣ್ಣು ಎದ್ದು ಕಿಂತುಕೊಂಡು, ಬಾತು, ಅದರ ಮೇಲೆ ನೊಣ ಕೂತು, ಅದರ ಬಾಧೆ ಉರಿ ಸಹಿಸುವದಕ್ಕಾಗದೆ ಮೂರ್ಛೆ ಹೊಂದಿ ಚರಮ ದೆಶೆಯು ಪ್ರಾಪ್ತವಾಗಿ ದೇಹಾವಸಾನ ಪ್ರಾಪ್ತವಾಗುವದಕ್ಕೆ ಮುಂಚಿತವಾಗಿ, ನಾವು ನಮೋ ನಾರಾಯಣ ಎಂದು ಹೇಳಿ ಶರಣಾಗತಿಯನ್ನನುಷ್ಠಿಸಿ ಪರಮಪದ ವನ್ನು ಹೊಂದುವದು ಲೇಸು. ಅಂತಹ ದಿವ್ಯ ವೈಕುಂಠವು ದೊರೆತ ನಂತರ ಈ ತುಚ್ಛವಾದ ಲೀಲಾವಿಭೂತಿಗೆ ಹಿಂತಿರುಗಿ ಬರಲು ಎಂದಿಗೂ ನಾವು ಸಮ್ಮತಿಸಲಾ ರೆವು ಎಂಬುದು ಈ ಪಾಶುರಾರ್ಥವು." ಇತ್ಯಾದಿಗಳಿಲೆ - ಇವೇ ಮೊದಲಾದ ಪ್ರಮಾಣಗಳಲ್ಲಿ, ಪ್ರಸಿದ್ಧವು. ಹೀಗೆ ಮುಕ್ತನಿಗೆ ಶ್ರುತಿಯು, "ನ ಚ ಪುನರಾ ವರ್ತತೇ" ಎಂದುಪದೇಶಿಸಿದ ರೀತಿಯಲ್ಲಿ ಪುನರಾವೃತ್ತಿಗೆ ಅವಕಾಶವೇ ಇಲ್ಲವೆಂದು ಹೇಳಿರುತ್ತಾರೆ ಈ "ದುಃಖಾಲಯ ಮಶಾಶ್ವತಮ್" ಎಂಬದಾಗಿ ಹೇಳಿರುವ ಈ ಮರ್ತ್ಯಲೋಕವನ್ನು ಮುಕ್ತನು ಎಂದಿಗೂ ಅಪೇಕ್ಷಿಸುವದಿಲ್ಲವು. ಸರ್ವೇಶ್ವ ರೇನಾದರೂ ಕಾರಣದಿಂದ ಅಲ್ಲಿಂದ ಕಳುಹಿಸಿಬಿಡುವನೋ ಎಂದರೆ, ಭಕ್ತನ ವಿಷ ಯದಲ್ಲಿ ಅಪಾರ ಕಾರುಣ್ಯ ಮಹೋದಧಿಯಾದವನು, ಭಕ್ತನು ಪರಮಪದಕ್ಕೆ ಬಂದಾನೇ ಎಂಬ ಅವಸರ ಪ್ರತೀಕ್ಷೆಯಲ್ಲಿದ್ದವನು, ಆ ಭಕ್ತನಿಗೆ ಮುಕ್ತಿಯನ್ನಿತ್ತು, ಅವನಿಗೆ ಪುನಃ ಅತಿ ದುಸ್ಸಹವಾದ ದುಃಖವನ್ನುಂಟುಮಾಡಿ ಅಲ್ಲಿಂದ ಓಡಿಸಿಬಿಡು ವನೇ ? ಆದುದರಿಂದ ಪುನರಾವೃತ್ತಿ ಶಙ್ಕಾವಿಗೆ ಕಾರಣವೇ ಇರುವದಿಲ್ಲವೆಂದು

## ಮುಕ್ತಸ್ಯ ಪ್ರಾಕೃತಲೋಕ ಸಂಚಾರೋ ನಪುನರಾವೃತ್ತಿಃ.

## ಭಗವತ್ಕೈಙ್ಕರ್ಯಾಂತರ್ಭೂತವಾನ ಸ್ವಚ್ಛಂದ ವಿಹಾರತ್ವಾತ್

ಹೇಳಿ, ಸಙ್ಗ್ರಹ ಶ್ಲೋಕದಲ್ಲಿರುವ "ನಿವೃತ್ತಿಕಥೋಜ್ಝಿತಂ" ಎಂಬುವದರ ಉಪಪಾದನವನ್ನು ಪೂರೈಸಿರುತ್ತಾರೆ ಈ ಲೀಲಾ ವಿಭೂತಿಯಲ್ಲೇ ಇರುವ ಕಾರ್ಯರೂಪವಾದ ಲೋಕಗಳಿಂದ ಪುನರಾವರ್ತಿ ಇದ್ದರೂ, ಈ ಲೀಲಾವಿಭೂತಿಯನ್ನತಿಕ್ರಮಿಸಿ, ಪ್ರಕೃತಿಸಂಬಂಧವಿಲ್ಲದ ತ್ರಿಪಾದ್ವಿಭೂತಿಯಿಂದ ಪುನರಾವರ್ತಿಯಿಲ್ಲವೆಂಬ ತಾತ್ಪರ್ಯವು.

ಆದರೆ, "**ಸಸ್ವರಾಡ್ಭವತಿ ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ**" (ಛಾಂ ೭. ೨೫ ೨) "ಆ ಮುಕ್ತನು ಅಕರ್ಮವಶ್ಯನಾಗುವನು, ಆತನಿಗೆ ಎಲ್ಲಾ ಲೋಕದಲ್ಲೂ ಇಷ್ಟಾನುಸಾರ ಸಂಚಾರ ಉಂಟಾಗಬಹುದು" ಎಂದು ಹೇಳುವದರಿಂದ ಈ ಲೀಲಾವಿಭೂತಿಗೂ ಕೂಡ ಬಂದು ಸಂಚರಿಸಬಹುದು ಎಂದು ಶ್ರುತಿಯು ಹೇಳುತ್ತದೆ. ಹಾಗೆಯೇ ತೈತ್ತರೀಯ ಭೃಗುವಲ್ಲಿಯಲ್ಲೂ, (೧೦-೫) "**ಇಮಾನ್ ಲೋಕಾನ್ ಕಾಮಾನ್ನೀಕಾಮರೂಪ್ಯನುಸಂಚರನ್**" ಎಂದರೆ "ಈ ಮುಕ್ತನು ವಿಕಾರಗಳಿಗೆ ಒಳಪಟ್ಟ ಈ ಲೋಕವೇ ಮೊದಲಾದ ಬಹ್ಮೇಂದ್ರಾದಿ ಅಧಿಕಾರಿಗಳ ಮಂಡಲಗಳಾಗಿರುವ ಲೋಕಗಳಲ್ಲಿ ಸಂಚರಿಸಿ, ಅಲ್ಲಿನ ಸಮಸ್ತ ಭೋಗಗಳನ್ನೂ ಅನುಭವಿಸುವನು" ಎಂದು ಹೀಗೆಲ್ಲಾ ಹೇಳಿರುವದರಿಂದ ಈ ಲೋಕದ ಉಪಭೋಗಗಳೂ ಕೂಡ ಆ ಮುಕ್ತನ ಇಷ್ಟಾನುಸಾರ ಈತನಿಗೆ ಲಭಿಸಬಹುದೆಂದು ಹೇಳಿರುತ್ತದೆಯಲ್ಲಾ ಎಂದರೆ, ಅದಕ್ಕೆ ಮುಂದಿನ ವಾಕ್ಯದಿಂದ ಸಮಾಧಾನ ಹೇಳುವವರಾಗಿ ಅಂತಹ ಸಂದರ್ಭದಲ್ಲಿ ಈತನು ಕರ್ಮವಶ್ಯನಲ್ಲದುದರಿಂದ ಸರ್ವವೂ ಈತನಿಗೆ ಅನುಕೂಲವಾಗಿಯೇ ಆದವುಗಳಾಗಿ ಬಂಧವಿಲ್ಲದೆ ತನ್ನಿಷ್ಟಾನುಸಾರ ಸಮಸ್ತ ಭೋಗಾನುಭವವಾಗುವದರಿಂದ, ಆಗಲೂ ಪುನರಾವರ್ತಿಯಿಲ್ಲವೆಂದೇ ತಿಳಿಯತಕ್ಕದ್ದೆಂದುಪದೇಶಿಸುತ್ತಾರೆ.

**ಮುಕ್ತನ ಲೀಲಾವಿಭೂತಿಯ ಸಂಚಾರವು ಪುನರಾವೃತ್ತಿಯಾಗುವದಿಲ್ಲವು.**

**ಭಗವತ್ಕೈಙ್ಕರ್ಯಾಂತರ್ಭೂತವಾನ** – ಭಗವಂತನ ಕೈಂಕರ್ಯದಲ್ಲೇ ಅಡಗಿರುವ, **ಸ್ವಚ್ಛಂದ ವಿಹಾರತ್ವಾತ್** - ತನ್ನಿಷ್ಟಾನುಸಾರವಾದ ವಿಹಾರದಲ್ಲಿ, ಭೋಗದಲ್ಲಿ, ಲೀಲಾವಿಭೂತಿಯಲ್ಲಿ, **ಪ್ರಕನ್ನಾಲುಮ್** - ಪ್ರವೇಶಿಸಿದರೂ, ಇವ್ವ

**ಲೀಲಾವಿಭೂತಿಯಿಲೆ ಪುಕನ್ದಾಲುಮ್ ಇವ್ವನುಭವ ಸಙ್ಕೋಚಾದಿಗಳ್ ಪಿರವಾಮೈಯಾಲೇ ಪುನರಾವರ್ತ್ತಿ ಯಿಲ್ಲೈ ಎಙ್ಗಿರದು.**

**ಅಪಕೃಷ್ಟ ಶರೀರಾದಪಿ ಮುಕ್ತಿಸ್ಸಾಧ್ಯಾ. ನಮುಕ್ತೌ ತಾರತಮ್ಯ ಪ್ರಸಂಗಃ.**

---

**ಇಪ್ಪಡಿ ಉತ್ತರಾವಧಿಯಿಲ್ಲಾದ ಯಿವ್ವನುಭವಮ್ ಪೆರುವಾರ್ಕ್ಕು**

---

**ನುಭವ ಸಙ್ಕೋಚಾದಿಗಳ್** - ಈ ಪರಿಪೂರ್ಣ ಬ್ರಹ್ಮಾನುಭವದಲ್ಲಿ, ನ್ಯೂನತೆಗಳು, **ಪಿರಾಮೈಯಾಲೇ** - ಉಂಟಾಗದೇ ಇರುವದರಿಂದ, ಪುನರಾವರ್ತಿಯು ಆಗಲೂ ಇಲ್ಲವು, **ಎಙ್ಗಿರದು** - ಎಂದು ಹೇಳತಕ್ಕದ್ದಾಗಿರುತ್ತದೆ. ಹಿಂದೆ ಭಗವತ್ಪ್ರೀಣನವನ್ನುಂಟುಮಾಡುವ ಈತನ ಸರ್ವ ಭೋಗಗಳೂ ಭಗವತ್ಕೈಂಕರ್ಯದಲ್ಲೇ ಅಂತರ್ಭೂತಗಳೆಂದು ಹೇಳಲ್ಪಟ್ಟಿತು. ಅದನ್ನನುಸರಿಸಿ ಇಲ್ಲಿಯೂ ಕೂಡ ಭಗವತ್ಕೈಂಕರ್ಯಾಂತರ್ಭೂತವಾದ ಸ್ವಚ್ಛಂದವಿಹಾರವೆಂದು ಹೇಳಲ್ಪಟ್ಟಿತು. ಇಂತಹ ಉಪಭೋಗಗಳೆಲ್ಲಾ ಸ್ವಚ್ಛಂದವೆಂದು ಹೇಳಿದುದರಭಿಪ್ರಾಯವು, ಕರ್ಮಮೂಲಕವಾಗಿ ಅಲ್ಲವೆಂದು ಹೇಳುವದಕ್ಕಾಗಿ ಎಂದು ತಿಳಿಯತಕ್ಕದ್ದು ಇವು ಸ್ವಚ್ಛಂದವಾದರೂ, ಭಗವಂತನ ಇಷ್ಟಕ್ಕೆ ವಿರೋಧವಾದುದಲ್ಲವೆಂಬ ತಾತ್ಪರ್ಯವು. **ಲೀಲಾವಿಭೂತಿಯಿಲೆ ಪುಕನ್ದಾಲುಮ್** - ಎಂದು ಹೇಳುವದರಲ್ಲಿ ಮೇಲೆ ಉದಾಹರಿಸಿರುವ "**ಇಮಾನ್ ಲೋಕಾನ್**" ಎಂಬ ಮತ್ತು "**ಕಾಮಚಾರೋ ಭವತಿ**" ಎಂಬ ಶ್ರುತ್ಯರ್ಥಗಳು ಅನುಸಂಧೇಯಗಳು, ಇಲ್ಲಿ **ಸಙ್ಕೋಚಾದಿ** ಎಂಬಲ್ಲಿ **ಆದಿ** ಶಬ್ದದಿಂದ ಅನುಭವದ ಅಭಾವ ತನ್ಮೂಲಕ ಭಗವತ್ಕೈಂಕರ್ಯ ವಿಚ್ಛೇದಗಳು ಗ್ರಹಿಸಲ್ಪಟ್ಟವು.

**ಹೀನ ಜನ್ಮದಿಂದಲೂ ಕೂಡ ಮುಕ್ತಿ ಸಾಧ್ಯವು. ಆದರೆ ಮುಕ್ತಿಯಲ್ಲಿ ತಾರತಮ್ಯವಿಲ್ಲವು.**

---

**ಇಪ್ಪಡಿ** - ಮೇಲೆ ಉಪಪಾದಿಸಿದ ಸ್ವರೂಪವುಳ್ಳ, **ಉತ್ತರಾವಧಿಯಿಲ್ಲದ**- ಉತ್ತರಕಾಲಾವಧಿಯಿಲ್ಲದ ಎಂದರೆ ನಿತ್ಯವಾದ, **ಯಿವ್ವನುಭವಮ್** - ಈ ಕೈಂಕರ್ಯಪರ್ಯಂತವಾದ ಪರಿಪೂರ್ಣ ಬ್ರಹ್ಮಾನುಭವವನ್ನು, **ಪೆರವಾರ್ಕ್ಕು** - ಹೊಂದುವವರಿಗೆ, **ಅನ್ತಿಮ ಶರೀರಮ್** - ಕೊನೆಯ ಪ್ರಾಕೃತ ಶರೀರವು, **ದೇವ ಮನುಷ್ಯಾದಿಗಳಿಲ್** - ದೇವತೆಯ ಶರೀರವೋ, ಮನುಷ್ಯಶರೀರವೋ, ಆದಿ

**ಅನ್ತಿಮ ಶರೀರಮ್ ದೇವ ಮನುಷ್ಯಾದಿಗಳಿಲ್ ಇನ್ನದಿಲೆ ಎನ್ರು ತೆರಿ**

ಶಬ್ದದಿಂದ, ಪಕ್ಷಿ ಮೃಗಾದಿ ಶರೀರಗಳಲ್ಲಿ, **ಇನ್ನದಿಲೆ** - ಇಂತಾದ್ದರಲ್ಲೇ, **ಎನ್ರು**- ಎಂಬದಾಗಿ, **ತೆರಿಯಾದು** - ಗೊತ್ತಾಗುವದಿಲ್ಲವು ; ಎಂದರೆ ಇಂತಹ ಶರೀರದಿಂದಲೇ ಮುಕ್ತಿಯು, ದೇವತೆಗಳಿಗೆ ಮನುಷ್ಯರಿಗೆ ಮಾತ್ರವೇ ಮುಕ್ತಿಯು, ಇತರ ಜಂತುಗಳಿಗಿಲ್ಲವೆಂಬುದಿಲ್ಲವು ಸರ್ವೇಶ್ವರನಿಗೆ ಕೃಪೆ ಬಂದರೆ ಯಾವ ಶರೀರದಿಂದಲೇಯಾಗಲಿ ಮುಕ್ತಿಯು ಪ್ರಾಪ್ತವಾಗಬಹುದು ಎಂಬ ತಾತ್ಪರ್ಯವು. ಮೋಕ್ಷವು ಮನುಷ್ಯಶರೀರದಿಂದಲಾಗಲಿ, ದೇವಶರೀರದಿಂದಲಾಗಲಿ ಅಥವಾ ತಿರಕ್ಕುಗಳ ಶರೀರಗಳಿಂದಲಾಗಲಿ ಪ್ರಾಪ್ತವಾಗಬಹುದು ಗಜೇಂದ್ರನಿಗೂ, ಜಟಾಯುವಿಗೂ, ಜಾಂಬವಾನನಿಗೂ ತಿರ್ಯಗ್ಜಂತು ಶರೀರಗಳೇ ಅಂತಿಮ ಶರೀರಗಳಾದವು ವಿದುರನಿಗೆ ಶೂದ್ರದೇಹವೇ ಅಂತಿಮಶರೀರವಾಯಿತು. ಹಾಗೆಯೇ ಶ್ರೀ ಭಾಗವತದಲ್ಲಿ (೨. ೭. ೪೬)

> "ತೇವೈ ವಿದನ್ತ್ಯತಿತರನ್ತಿ ಚ ದೇವಮಾಯಾಂ
> ಸ್ತ್ರೀ ಶೂದ್ರ ಹೂಣ ಶಬರಾ ಅಪಿ ಪಾಪ ಜೀವಾಃ ।
> ಯದ್ಯದ್ಭುತ ಕ್ರಮಪರಾಯಣ ಶೀಲಶಿಕ್ಷಾ
> ಸ್ತಿರ್ಯಗ್ಗಣಾ ಅಪಿಕಿಮುಶ್ರುತ ಧಾರಣಾಯೇ ॥"

ಸ್ತ್ರೀಯರೂ, ಶೂದ್ರರೂ, ಹೂಣರೂ, ಪಾಪಕೃತ್ಯಗಳಿಂದ ಜೀವಿಸುವ ಶಬರರೂ ಸಹ ಈ ಪ್ರಾಕೃತ ಶರೀರವನ್ನು ತ್ಯಜಿಸಿ ಸರ್ವೇಶ್ವರನನ್ನು ಹೊಂದಬಹುದು. ಹೇಗೆ ಹೊಂದಬಹುದು ಎಂದರೆ, **ಅದ್ಭುತಕ್ರಮನಾದ** ತ್ರಿವಿಕ್ರಮಾವತಾರಿಯನ್ನೇ ಪರಾಯಣವೆಂದರೆ **ಉತ್ಕೃಷ್ಟವಾದ** ಪ್ರಾಪ್ಯ ಪ್ರಾಪಕ ಆಧಾರವಾಗಿವುಳ್ಳ ಮಹಾಭಾಗವತರ ಶೀಲದಲ್ಲಿ ಶಿಕ್ಷೆಯುಳ್ಳವರಾದರೆ ಎಂದರೆ ಭಾಗವತರನ್ನು ಇವರುಗಳು ಆಶ್ರಯಿಸಿದರೆ ಆಗ ಮುಕ್ತಿಯನ್ನು ಹೊಂದಬಹುದು. ಮತ್ತು ಅಂತಹ ಭಾಗವತ ಸಂಶ್ರಯಣವುಳ್ಳ ತಿರ್ಯಗ್ಗಣಗಳೂ ಕೂಡ ಮುಕ್ತಿ ಹೊಂದಬಹುದು ಹೀಗಿರುವಲ್ಲಿ **ಕಿಮುಶ್ರುತಧಾರಣಾಯೇ** - ಈ ತಿರ್ಯಕ್ಕುಗಳಿಗಾದರೋ ಶ್ರುತವಾದ ಅರ್ಥವನ್ನು ಧರಿಸುವ ಶಕ್ತಿಯಿಲ್ಲವು, ಅಂತಹ ಶಕ್ತಿಯುಳ್ಳ ಬ್ರಾಹ್ಮಣ ಮೊದಲಾದ ಮನುಷ್ಯರ ವಿಷಯದಲ್ಲಿ ಹೇಳತಕ್ಕದ್ದೇನಿರುತ್ತದೆ. ಹೀಗೆ ಅಂತಿಮ ಶರೀರವು ತಿರ್ಯಗಾದಿ ಶರೀರವಾದರೂ ಆಗಬಹುದೆಂದು ಹೇಳಲ್ಪಟ್ಟಿರುತ್ತದೆ. **"ಪಶುರ್ಮನುಷ್ಯಃ ಪಕ್ಷೀವಾ ಯೇಚ ವೈಷ್ಣವ ಸಂಶ್ರಯಾಃ । ತೇನೈವ ತೇ ಪ್ರಯಾಸ್ಯಂತಿ ತದ್ವಿಷ್ಣೋಃ ಪರಮಂ ಪದಮ್** ॥" ಎಂದೂ ಹೇಳಿರುವದರಿಂದ, ಮಹಾ

**ಯಾದು. ಬ್ರಹ್ಮಾದಿಗಳುಕ್ಕುಮ್ ಮೋಕ್ಷಮುಣ್ಡು. ಅಪ್ಪಡಿಯೇ**

ಭಾಗವತೋತ್ತಮನನ್ನು ಆಶ್ರಯಿಸಿದ ಪಶುವಾಗಲಿ, ಮನುಷ್ಯನಾಗಲಿ, ಪಕ್ಷಿಯಾಗಲಿ ಪರಮಪದವನ್ನು ಹೊಂದುತ್ತದೆಂದು ಹೇಳಿರುವದರಿಂದ, ಈ ಶರೀರಗಳೆಲ್ಲಾ ಅಂತಿಮ ಶರೀರಗಳಾಗಬಹುದೆಂಬ ತಾತ್ಪರ್ಯವು.

ಪ್ರಪತ್ತ್ಯುಪಾಯಕ್ಕೆ ಹೇಗೆ ಉತ್ಕೃಷ್ಟಾಪಕೃಷ್ಟ ಶರೀರದ ನಿಯಮವಿಲ್ಲವೋ ಭಕ್ತ್ಯುಪಾಯಕ್ಕೂ ಕೂಡ ಹಾಗೆಯೇ ಎಂದು ತಿಳಿಯತಕ್ಕದ್ದು. ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆಲ್ಲಾ ಉಪಾಸನಕ್ಕೆ ಯೋಗ್ಯತೆಯಿರುವದರಿಂದ ಪ್ರಾರಬ್ಧ ಕಳೆದ ನಂತರ ಮುಕ್ತಿಯುಂಟು. ಇನ್ನು ದೇವತೆಯ ಶರೀರದಿಂದಲೂ ಮುಕ್ತಿಯುಂಟೋ ಎಂದರೆ, **ತದುಪರ್ಯಪಿ ಬಾದರಾಯಣ ಸ್ಸಂಭವಾತ್** (೧. ೩. ೨೫) ಎಂಬ **ಸೂತ್ರದಲ್ಲಿ, ತತ್** - ಆ ಪರಬ್ರಹ್ಮೋಪಾಸನವು, **ಉಪರ್ಯಪಿ ಸಂಭವತಿ** - ದೇವಾದಿಗಳಲ್ಲೂ ಉಂಟು ; ಏಕೆಂದರೆ ಅವರಿಗೂ ಕೂಡ ಅರ್ಥಿತ್ವ ಸಾಮರ್ಥ್ಯಗಳು ಇರುವದರಿಂದ ಅವರಿಗೂ ಉಂಟೆಂದು ಬಾದರಾಯಣರು ಅಂಗೀಕರಿಸುತ್ತಾರೆಂದು ಹೇಳಿರುವದರಿಂದ ದೇವತೆಗಳಿಗೂ ಮುಕ್ತಿಯುಂಟಾದುದರಿಂದ ದೇವಶರೀರವೂ ಅಂತಿಮ ಶರೀರವಾಗಬಹುದು. ಈ ಕಾರಣಗಳಿಂದ ಯಾವ ಶರೀರದಿಂದ ಮುಕ್ತಿ ಎಂದು ಗೊತ್ತಾಗಿ ಹೇಳಲು ಸಾಧ್ಯವಿಲ್ಲವೆಂಬ ಭಾವವು. ಮನುಷ್ಯ ಶರೀರದಿಂದಲೇ ಮುಕ್ತಿ ಎಂದು ಕೆಲವರು ಭಾವಿಸಬಹುದು, ಏಕೆಂದರೆ ಉಪಾಸನೆಗೆ ಅಧಿಕಾರಿಯು ಮನುಷ್ಯನೇ ವಿನಾ ಇತರರಲ್ಲವೆಂಬಭಿಪ್ರಾಯದಿಂದ ಹಾಗೆ ಹೇಳುತ್ತಾರೆ ದೇವತೆಗಳೂ ಅಧಿಕಾರಿಗಳೆಂದು ಹೇಳುವದಕ್ಕಾಗಿ, **ಬ್ರಹ್ಮಾದಿಗಳುಕ್ಕು ಮೋಕ್ಷಮುಂಡು** ಎಂದು ಹೇಳಿದರು. ಆದರೂ ಉಪಾಸನ ಮಾತ್ರವೇ ಮೋಕ್ಷಕ್ಕೆ ಕಾರಣವಲ್ಲವಾದುದರಿಂದ, ತಿರ್ಯಗ್ಗಣ ಮೊದಲಾದವೂ ಕೂಡ ಮೋಕ್ಷವನ್ನು ಹೊಂದಬಹುದೆಂದು ಹಿಂದೆ ಹೇಳಲ್ಪಟ್ಟಿತು. ಹೀಗೆ ಮೋಕ್ಷಕ್ಕೆ ಅಂತಿಮ ಶರೀರ ನಿಯಮವಿಲ್ಲವೆಂದು ಹೇಳಿದ ನಂತರ ಚತುರ್ಮುಖ ಬ್ರಹ್ಮಾದಿ ದೇವತೆಗಳಿಗೂ ಮೋಕ್ಷ ಉಂಟೆಂದು ತಿಳಿಸುತ್ತಾರೆ:—**ಬ್ರಹ್ಮಾದಿಗಳುಕ್ಕುಮ್** - ಚತುರ್ಮುಖ ಬ್ರಹ್ಮ ಮೊದಲಾದ ದೇವತೆಗಳಿಗೂ, ಆದಿ ಶಬ್ದದಿಂದ ರುದ್ರೇಂದ್ರಾದಿ ದೇವತೆಗಳೆಲ್ಲಾ ಹೇಳಲ್ಪಟ್ಟರು. ಉಪಾಸನವು ಮೋಕ್ಷವನ್ನು ಹೊಂದುವದಕ್ಕೆ ಒಂದು ಒಳ್ಳೇ ಉಪಾಯವೆಂದು ಹೇಳಲ್ಪಟ್ಟು, ದೇವತೆಗಳೂ, ಮನುಷ್ಯರಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರಾದ ಉತ್ಕೃಷ್ಟ ಮನುಷ್ಯರೇ ಯೋಗ್ಯರಾಗಿರುವಲ್ಲಿ ಯಾವ ದೇಹದಿಂದಲಾಗಲಿ ಮೋಕ್ಷವು ಸಿದ್ಧಿಸುತ್ತದೆಯೇ ಎಂಬ ಸಂದೇಹದಲ್ಲಿ ಯಾವ ಶರೀರದಿಂದಲೇ

(೧) "ಧರ್ಮವ್ಯಾಧಾ ದಯೋಽಪ್ಯನ್ಯೇ ಪೂರ್ವಾಭ್ಯಾಸಾಜ್ಜುಗುಪ್ಸಿತೇ । ವರ್ಣಾವರತ್ವೇ ಸಂಪ್ರಾಪ್ತಾಸ್ಸಂಸಿದ್ಧಿಂ ಶ್ರಮಣೀಯಥಾ" ಎನ್ರು ಮಹರ್ಷಿಗಳ್ ಶೊನ್ನಾರ್‌ಗಳ್.

---

ಆಗಲಿ ಉತ್ಕೃಷ್ಟಾಪಕೃಷ್ಟ ನಿಯಮವಿಲ್ಲದೆ ಆಗಬಹುದೆಂದು ಹೇಳಲ್ಪಟ್ಟಿತು. ಹೀಗೆಲ್ಲಾದರೂ ಉಂಟೇ ಎಂದರೆ ಇದಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ. **ಅನ್ಯೇ ಧರ್ಮವ್ಯಾಧಾದಯೋಽಪಿ** - ಇತರರಾದ ಧರ್ಮವ್ಯಾಧರೇ ಮೊದಲಾದವರೂ ಕೂಡ, **ಜುಗುಪ್ಸಿತೇ** - ಮನಸ್ಸಿಗೆ ಅಸಹ್ಯವಾದ, **ವರ್ಣಾವರತ್ವೇ** - ನೀಚವರ್ಣದಲ್ಲಿ ಹುಟ್ಟಿರುವವು, ಸಂಭವಿಸಿರುವಾಗ ಎಂದು ಇಟ್ಟುಕೊಳ್ಳತಕ್ಕದ್ದು, **ಪೂರ್ವಾಭ್ಯಾಸಾತ್** - ಹಿಂದಿನ ಜನ್ಮದಲ್ಲಿ ಮಾಡಿದ ಉಪಾಸನ ಫಲದಿಂದ, **ಸಂಸಿದ್ಧಿಮ್** - ಮೋಕ್ಷಫಲವನ್ನು. **ಶ್ರಮಣೀಯಥಾ** - ಶಬರಿಯು ಹೇಗೆ ಹೊಂದಿದಳೋ ಹಾಗೆ, **ಸಂಪ್ರಾಪ್ತಾಃ** - ಹೊಂದುತ್ತಾರೆ." ಎನ್ರು - ಎಂಬದಾಗಿ, **ಮಹರ್ಷಿಗಳ್** - ಮಹರ್ಷಿಗಳು, **ಶೊನ್ನಾರ್‌ಗಳ್** - ಹೇಳಿರುತ್ತಾರೆ. ನೀಚಶರೀರದಿಂದ ಮೋಕ್ಷವು ಯುಕ್ತವೋ ಎಂದರೆ, ಇದಕ್ಕೆ ಸಮಾಧಾನವನ್ನು ಹೇಳುತ್ತಾರೆ; ಅಂತವರಿಗೆ ಅವರು ಮಾಡಿರುವ ಭಕ್ತಿಯೋಗ ಉಪಾಸನಗಳಿಂದ ಮೋಕ್ಷವು ಸಿದ್ಧಿಸಿರಬೇಕು; ಆದರೆ ಅವರಿಗೆ ಇನ್ನೂ ಪ್ರಾರಬ್ಧವು ಕಳೆಯಲಿಲ್ಲವಾದುದರಿಂದ ಈ ಹೀನಜನ್ಮವನ್ನು ಎತ್ತಬೇಕಾಗಿ ಬಂತು, ಈ ಪ್ರಾರಬ್ಧವು ಕಳೆದ ಒಡನೆಯೇ ಪೂರ್ವಾಭ್ಯಾಸದ ಫಲವಾಗಿ ಮೋಕ್ಷವುಂಟಾಗುವದರಲ್ಲೇನೂ ವಿರೋಧವಿಲ್ಲವು. ಹಾಗೆಯೇ ಪ್ರಪತ್ತ್ಯನುಷ್ಠಾನ ಮಾಡಿದ ಮಹಾಭಾಗವತನ ಸಂಬಂಧವು ಪರಮಸುಕೃತಪರಿಪಾಕದಿಂದ ಹೀನಜನ್ಮವುಂಟಾದ ಮನುಷ್ಯನಿಗಾಗಲಿ ತಿರ್ಯಗ್ಜಂತುವಿಗಾಗಲಿ ಪ್ರಾಪ್ತವಾಗಬಹುದು; ಅದರಿಂದ ಮೋಕ್ಷಪ್ರಾಪ್ತಿಯುಂಟಾಗಬಹುದು. ಆದುದರಿಂದಲೇ ಶ್ರೀ ಯಾಮುನೇಯರು "**ತವದಾಸ್ಯ ಸುಖೈಕಸಜ್ಗಿನಾಂ ಭವನೇಷ್ವಸ್ತ್ವಪಿ ಕೀಟಜನ್ಮಮೇ**" ಎಂಬುದರಿಂದ ಮಹಾಭಾಗವತನ ಮನೆಯಲ್ಲಿ ಕೀಟಜನ್ಮವೂ ಕೂಡ ಉತ್ತಾರಕವೆಂದುಪದೇಶಿಸಿದರು. ಧರ್ಮವ್ಯಾಧನ ವೃತ್ತಾಂತವೇನೆಂದರೆ:—ಒಬ್ಬ ಬ್ರಾಹ್ಮಣನು ವೃದ್ಧ ಮಾತಾಪಿತೃಗಳಿದ್ದರೂ, ಅವರ ಶುಶ್ರೂಷೆಯಲ್ಲಿ ನಿರತನಾಗದೆ ಕರ್ಮನಿಷ್ಠಾದಿಗಳಿಂದ ಯುಕ್ತನಾಗಿ ಮಹಾತೇಜಸ್ವಿಯಾಗಿದ್ದನು. ಒಂದು ದಿನ ಭಿಕ್ಷಾರ್ಥಿಯಾಗಿ ಪಕ್ಕದ ಗ್ರಾಮಕ್ಕಾಗಿ ತೆರಳಿ ಮಾರ್ಗಾಯಾಸದಿಂದ ಒಂದು ಮರದ ಕೆಳಗೆ ವಿಶ್ರಮಿಸಿಕೊಂಡನು. ಒಂದು

---

(೧) ವಿ. ಧ ೧೧೨. ೨೯.

ಪಕ್ಷಿಯು ಆತನ ಮೇಲೆ ವಿಷ್ಟಿಸಿದುದರಿಂದ, ಬ್ರಾಹ್ಮಣನು ಕೋಪದಿಂದ ಪಕ್ಷಿಯನ್ನು ನೋಡಲು ಅದು ದಗ್ಧವಾಗಿ ಕೆಳಗೆ ಬಿದ್ದು ಸತ್ತಿತು. ಅನಂತರ ಆ ಗ್ರಾಮದಲ್ಲಿ ಒಂದು ಮನೆಗೆ ಭಿಕ್ಷೆಗಾಗಿ ಹೋಗಲು, ಮನೆಯಲ್ಲಿನ ಮಹಾಪತಿವ್ರತೆಯು, ಪತಿ ಶುಶ್ರೂಷೆಯನ್ನು ಮೊದಲು ಮುಗಿಸಿ, ಸ್ವಲ್ಪ ಕಾಲವಿಳಂಬದಿಂದ ಭಿಕ್ಷೆಯನ್ನು ನೀಡಲು, ಅದಕ್ಕಾ ಬ್ರಾಹ್ಮಣನು ಕುಪಿತನಾಗಿ ಪಕ್ಷಿಯನ್ನು ನೋಡಿದಂತೆ ಅವ ಳನ್ನೂ ನೋಡಲು, ಆಗ ಆ ಸಾಧ್ವಿಯು 'ನಿನ್ನ ಕೋಪಾಗ್ನಿಯು ನನ್ನನ್ನು ಸುಡಲು ನಾನು ಪಕ್ಷಿಯಲ್ಲ' ಎಂದು ಹೇಳಲು, ಅದಕ್ಕಾ ಬ್ರಾಹ್ಮಣನು ಆಶ್ಚರ್ಯಭರಿತನಾಗಿ ಇದು ನಿನಗೆ ಹೇಗೆ ತಿಳಿಯಿತು, ನೀನು ಮಹಾಪತಿವ್ರತೆಯಾಗಿರಬೇಕು, ತಿಳಿಸೆಂದು ಪ್ರಾರ್ಥಿಸಲು, ಮಿಥಿಲಾನಗರದಲ್ಲಿ ಧರ್ಮವ್ಯಾಧನಿರುವನು, ಅವನಿಂದ ನೀನು ತಿಳಿ ಯಬಹುದೆಂದು ಹೇಳಲು, ಆಗ ಬ್ರಾಹ್ಮಣನು ಅವನಲ್ಲಿಗೆ ಹೋಗಲು, ವ್ಯಾಧನು 'ತಮ್ಮನ್ನು ಬ್ರಾಹ್ಮಣಪತ್ನಿಯು ನನ್ನಲ್ಲಿಗೆ ಕಳುಹಿಸಿದಳೇ' ಎಂದು ಪ್ರಶ್ನಿಸಲು ಇನ್ನೂ ಆಶ್ಚರ್ಯಭರಿತನಾಗಿ, ಇದು ನಿನಗೆ ಹೇಗೆ ತಿಳಿಯಿತು ಎನ್ನಲು, ಮಾತೃ ದೇವೋಭವ, ಪಿತೃದೇವೋಭವ ಎಂದು ಹೇಳಿರುವ ಹಾಗೆ ಮಾತಾಪಿತೃ ಗಳನ್ನೇ ಲೋಕದಂಪತಿಗಳನ್ನಾಗಿ ಭಾವಿಸಿ ಆರಾಧಿಸಿರುವದರಿಂದ ನನಗೆ ತಿಳಿ ಯಿತು, ಹಾಗೆಯೇ ಆ ಬ್ರಾಹ್ಮಣಪತ್ನಿಯೂ ಪತಿಯೇ ಪರದೇವತೆ ಎಂದು ನಂಬಿ ರುವದರಿಂದ ಆಕೆಗೂ ತಿಳಿಯುವದೆಂದು ಹೇಳಿದುದರಿಂದ, ಹಿಂತಿರುಗಿ ಬಂದು ಮಾತಾಪಿತೃ ಶುಶ್ರೂಷೆಯಲ್ಲಿ ನಿರತನಾಗಿದ್ದನು.

ಶಬರಿಯು ಮತಂಗ ಶಿಷ್ಯರಿಂದ ಉಪದಿಷ್ಟಳಾದ ಒಬ್ಬ ತಾಪಸಿಯು; ಶ್ರೀರಾಮಾಗಮನವನ್ನು ನಿರೀಕ್ಷಿಸುತ್ತಿದ್ದು, ಆತನಿಗೆ ಸರ್ವ ವಿಧ ಸತ್ಕಾರಗಳನ್ನೆ ಸಗಿ, ಪಂಪಾತೀರದಲ್ಲಿ ಬೆಳದ ಬಹು ರುಚಿಕರವಾದ ಫಲಗಳನ್ನರ್ಪಿಸಿ, ಶ್ರೀರಾಮಾ ಜ್ಞೆಯಂ ಪಡೆದು ದೇಹತ್ಯಾಗವನ್ನು ಮಾಡಿ ಮುಕ್ತಿಯನ್ನು ಹೊಂದಿದಳೆಂಬ ವೃತ್ತಾಂತವು ಅರಣ್ಯಕಾಂಡದ ೭೪ನೆಯ ಅಧ್ಯಾಯದಲ್ಲಿ ಬರುತ್ತದೆ. ಈ ಸ್ಥಳದಲ್ಲಿ ಆಕೆಯು ಫಲಗಳನ್ನು ರುಚಿ ನೋಡಿ ತುಂಬಾ ರುಚಿಕರವಾದುವನ್ನು ಆರಿಸಿ ಇಟ್ಟಿದ್ದಳೆಂದೂ, ಶ್ರೀರಾಮನು ಶಬರಿಯ ಎಂಜಲು ಹಣ್ಣನ್ನು ತಿಂದ ನೆಂದೂ, ಹೇಳಿಲ್ಲವು ಪಾದ್ಮ ಪುರಾಣದಲ್ಲಿ "ಫಲಾನಿಚ ಸುಪಕ್ವಾನಿ ಮೂ ಲಾನಿ ಮಧುರಾಣಿಚ । ಸ್ವಯಮಾಸ್ವಾದ್ಯ ಮಾಧುರ್ಯಂ ಪರೀಕ್ಷ್ಯ ಪರಿ ಭಕ್ಷ್ಯಚ । ಪಶ್ಚಾನ್ನಿವೇದಯಾಮಾಸ ರಾಘವಾಭ್ಯಾಂ ದೃಢವ್ರತಾ ॥ ಎಂಬದಾಗಿ ಹೇಳಿರುತ್ತದೆ. ಇತರ ಸಮಾನ ಫಲಗಳ ರುಚಿನೋಡಿ, ಉತ್ತಮ ಫಲಗಳನ್ನಾರಿಸಿಟ್ಟಿರಬಹುದು. ವಿದುರನು ಶೂದ್ರನಾಗಿದ್ದರೂ ಹೇಗೆ ಉಪಾ ಸನಾಧಿಕಾರಿಯಾದನೋ, ಹಾಗೆಯೇ ಈ ಶಬರಿಯು ಸ್ತ್ರೀಯಾಗಿದ್ದರೂ ಉಪಾ

## ಮುಕ್ತೌ ಆನಂದ ತಾರತಮ್ಯಂ ನಾಸ್ತಿ. ಮಾಧ್ವಮತ ನಿರಾಸಃ

**ಆಕ್ಕೈಯಾಲ್ ಮುಮುಕ್ಷು ದಶೈಯಿಲ್ ಔಪಾಧಿಕಙ್ಗಳಾನ ಉತ್ಕರ್ಷಾಪಕರ್ಷಙ್ಗಳೈಕ್ಕೊಣ್ಡು ಮುಕ್ತದಶೈಯಿಲುಮ್ ಅನುಭವ ತಾರತಮ್ಯಮುಣ್ಡೆನ್ರವಾನಂದ ತೀರ್ಥೀಯರ್ ಮುಕ್ತರುಕ್ಕೆಲ್ಲಾಮ್ ಸರ್ವೇಶ್ವರನೋ**

---

ಸಳಳು. ಇಂತಹ ಪರಮ ಜ್ಞಾನಿಯಾದವಳು ತಾನು ತಿಂದು ನೋಡಿ ಎಂಜಲು ಮಾಡಿದ್ದುದನ್ನು ಶ್ರೀರಾಮನಿಗೆ ಅರ್ಪಿಸಿದಳೆಂಬುವ ಹೇಳಿಕೆಯು ಶಬರಿಯ ಮಾಹಾತ್ಮ್ಯಕ್ಕೆ ಕುಂದಕವು. ಇದಕ್ಕೆ ಆಧಾರವೇನೋ ತಿಳಿಯಲಿಲ್ಲವು.

ಹಿಂದಿನ ವಾಕ್ಯದಲ್ಲಿ ಉತ್ಕೃಷ್ಟಾಪಕೃಷ್ಟ ಶರೀರತಾರತಮ್ಯವಿಲ್ಲದೆ ಈ ಚೇತನನಿಗೆ ಮುಕ್ತಿಯುಂಟು, ಎಂದು ಹೇಳಿದ ನಂತರ ಈ ಉತ್ಕೃಷ್ಟಾಪಕೃಷ್ಟ ಶರೀರಾನುಗುಣವಾಗಿ ಆನಂದವೇ ಅಥವಾ ಎಲ್ಲರಿಗೂ ಒಂದೇ ವಿಧವಾದ ಭೋಗವೇ ಎಂಬ ಪ್ರಶ್ನೆಯು ಉಂಟಾಗುತ್ತದೆ. ದ್ವೈತಸಿದ್ಧಾನ್ತಿಗಳಾದ ಮಾಧ್ವರು ಎಲ್ಲರಿಗೂ ಒಂದೇ ವಿಧವಾದ ಆನಂದವು ಮುಕ್ತಿದೆಶೆಯಲ್ಲಿಲ್ಲವೆಂದೂ, ಆಯಾಯಾ ಶರೀರಿಗಳಿಗೆ ಅನುಗುಣವಾದ ಭೋಗವೆಂದೂ ಹೇಳುವದಲ್ಲದೆ ಕೆಲವರಿಗೆ ಎಂದಿಗೂ ಮುಕ್ತಿಯೂ ಇಲ್ಲವೆಂದಭಿಪ್ರಾಯಪಡುವರು. ಇದು ಸರಿಯಲ್ಲವೆಂದೂ, ಎಲ್ಲಾ ಆತ್ಮರುಗಳೂ ಜ್ಞಾನೈಕಾಕಾರತೆಯಿಂದ ಸಮರಾದುದರಿಂದ ಎಲ್ಲರಿಗೂ ಆನಂದವು ಸಮವೆಂದು ಸಿದ್ಧಾಂತಿಸಿ ಹೇಳುತ್ತಾರೆ. ಮುಕ್ತಿದೆಶೆಯಲ್ಲಿ ಸ್ವೇನರೂಪೇಣಾಭಿನಿಷ್ಪದ್ಯತೇ ಎಂದು ಹೇಳಿರುವದರಿಂದ, ಗುಣಾಷ್ಟಕಗಳೊಂದಿಗೆ ಸ್ವಸ್ವರೂಪಾವಿರ್ಭಾವವು ಬೋಧಿಸಲ್ಪಟ್ಟಿರುವದರಿಂದ ಆನಂದ ತಾರತಮ್ಯಕ್ಕೆ ಕಾರಣವೇ ಇಲ್ಲವು ಎಲ್ಲಾ ಮುಕ್ತರಿಗೂ ಒಂದೇ ವಿಧವಾದ ಸ್ವಸ್ವರೂಪಾವಿರ್ಭಾವವು ಪ್ರಾಪ್ತವಾಗುವದರಿಂದ ಅನುಭವದಲ್ಲಿ ವ್ಯತ್ಯಾಸ ಉಂಟಾಗಲು ಕಾರಣವೇ ಇಲ್ಲವು.

**ಅಗ್ಕೈಯಾಲ್** - ಆದುದರಿಂದ ಎಂದರೆ ಹೀಗೆ ಅಂತಿಮ ಶರೀರಕ್ಕೆ ನಿಯಮವಿಲ್ಲದೆ ಉತ್ಕೃಷ್ಟಾಪಕೃಷ್ಟವಾಗಿರಬಹುದೆಂದು ಏರ್ಪಟ್ಟ ನಂತರ, **ಮುಮುಕ್ಷು ದಶೈಯಿಲ್** - ಮೋಕ್ಷವನ್ನು ಪ್ರಾರ್ಥಿಸುವ ದೆಶೆಯಲ್ಲಿ, **ಔಪಾಧಿಕಙ್ಗಳಾನ** - ಕರ್ಮೋಪಾಧಿಯ ಮೂಲಕವಾಗಿ ಉಂಟಾದ, **ಉತ್ಕರ್ಷಾಪಕರ್ಷಙ್ಗಳೈಕೊಣ್ಡು**- ಉತ್ಕೃಷ್ಟಜನ್ಮ ನಿಕೃಷ್ಟಜನ್ಮ ಮೂಲಮಾಡಿಕೊಂಡು, **ಮುಕ್ತದಶೈಯಿಲುಮ್**- ಮುಕ್ತಾವಸ್ಥೆಯಲ್ಲೂ, **ಅನುಭವ ತಾರತಮ್ಯಮುಂಡೆನ್ರು** - ಭೋಗದಲ್ಲಿ ತಾರತಮ್ಯ ಉಂಟೆಂದು ಹೇಳಿದ, **ಆನಂದತೀರ್ಥೀಯರ್** – ಶ್ರೀ ಮಧ್ವಾಚಾರ್ಯರವರು,

**ಡೇ ಪರಮ ಸಾಮ್ಯಮ್ ಶೊಲ್ಲುಗಿರ ಶ್ರುತ್ಯಾದಿಗಳ್ಳೈ ಮರನ್ದಾರ್‌ಗಳ್.**

ಮುಕ್ತರಿಗೆಲ್ಲಾ, ಸರ್ವೇಶ್ವರನೊಂದಿಗೆ, **ಪರಮ ಸಾಮ್ಯಮ್** - ವಿಶೇಷ ಸಮ ಭಾವವನ್ನು, **ಶೊಲ್ಲುಗಿರ** - ಹೇಳುವ, **ಶ್ರುತ್ಯಾದಿಗಳ್ಳೈ** - ಶ್ರುತಿಯನ್ನೂ, ಆದಿ ಶಬ್ದದಿಂದ ಸ್ಮೃತಿಯಾದ ಗೀತಾವಾಕ್ಯ ಮೊದಲಾದವುಗಳನ್ನು, **ಮರನ್ದಾರ್ ಗಳ್** - ಜ್ಞಾಪಕಕ್ಕೆ ತಂದುಕೊಳ್ಳಲಿಲ್ಲವು; ಆನಂದ ತಾರತಮ್ಯ ಹೇಳಿದರೆ, ಈ ಶ್ರುತಿ ಸ್ಮೃತಿಗಳಿಗೆ ವಿರೋಧವಾಗುತ್ತವೆಂಬುವನ್ನು ಮರತರೆಂಬ ಭಾವವು. ಉತ್ಕೃಷ್ಟರಾಗಿ ಋಷಿಗಳಾಗಿದ್ದು ಉತ್ಕೃಷ್ಟ ದೇಹವನ್ನೆತ್ತಿದ್ದ ವ್ಯಾಸರಿಗೂ, ಹಿಂಸಾರೂಪ ಕರ್ಮಾವಲಂಬಿಯಾದ ವ್ಯಾಧನಿಗೂ ಒಂದೇ ವಿಧವಾದ ಮುಕ್ತಿ ಎಂದರೆ ಮನ ಒಡಂಬಡದೆ ಇಬ್ಬರಿಗೂ ಆನಂದದಲ್ಲಿ ವ್ಯತ್ಯಾಸವಿರಬೇಕೆಂದು ಅಭಿ ಪ್ರಾಯ ಪಡುವ ಕಾಲದಲ್ಲಿ, ಪರಮಸಾಮ್ಯವನ್ನು ಹೇಳುವ ಶ್ರುತಿಗೂ ಇತರ ಪ್ರಮಾಣಗಳಿಗೂ ವಿರೋಧವಾಗುತ್ತದೆಂಬುವನ್ನು ಮರೆತರೆಂಬ ಭಾವವು ಅವು ಗಳನ್ನು ಜ್ಞಾಪಕಕ್ಕೆ ತಂದುಕೊಳ್ಳಲಿಲ್ಲವು ಆ ಶ್ರುತಿ ಯಾವುದೆಂದರೆ.— "ತದಾವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮು ಪೈತಿ" (ಮುಂಡಕ, ೩. ೧. ೩) "ಯಾವಾಗ ಸರ್ವೇಶ್ವರ ಸಾಕ್ಷಾತ್ಕಾರ ಉಂಟಾ ಯಿತೋ, ಆಗ ಈ ಬ್ರಹ್ಮವಿತ್ತಾದವನು, ಪುಣ್ಯಪಾಪಗಳನ್ನೆಲ್ಲಾ ಕೊಡವಿಕೊಂಡು ಎಂದರೆ ಅವುಗಳಿಂದ ವಿಮುಕ್ತನಾಗಿ, ಪ್ರಕೃತಿ ಲೇಪವಿಲ್ಲದವನಾಗಿ ಕರ್ಮಬಂಧ ವಿಲ್ಲದೆ, ಅಪಹತ ಪಾಪ್ಮತ್ವಾದಿ ಗುಣಾಷ್ಟಕಗಳೊಂದಿಗೆ ಸ್ವಸ್ವರೂಪಾವಿರ್ಭಾವ ಉಂಟಾಗುವದರ ಮೂಲಕ ಪರಬ್ರಹ್ಮನೊಂದಿಗೆ ಅತ್ಯಂತ ಸಾಮ್ಯವನ್ನು ಹೊಂದು ತ್ತಾನೆ. ಎಂದರೆ ಸಮಾನ ಆನಂದ ಸಮಾನ ಭೋಗವನ್ನು ಹೊಂದುತ್ತಾನೆ." ಹಾಗೆಯೇ ಸ್ಮೃತಿಯೂ ಹೇಳುತ್ತದೆ:—

"ಇದಂ ಜ್ಞಾನಮುಪಾಶ್ರಿತ್ಯ ಮಮಸಾಧರ್ಮ್ಯಮಾಗತಾಃ ।
**ಸರ್ಗೇಪಿ ನೋಪಜಾಯನ್ತೇ ಪ್ರಳಯೇ ನವ್ಯಥನ್ತಿಚ** ॥" (೧೪. ೮ ೨)

ಇದು ಭಗವದ್ವಾಕ್ಯವು. ಮುಂದೆ ನಾನು ನಿನ್ನಲ್ಲಿರುವ ಪ್ರೀತ್ಯತಿಶಯದಿಂದುಪದೇ ಶಿಸುವ ಜ್ಞಾನವನ್ನಾಶ್ರಯಿಸಿ, ನನ್ನೊಂದಿಗೆ ಸಮಾನಧರ್ಮವನ್ನು ಹೊಂದಿದವರು (ಇದನ್ನೇ ಶ್ರುತಿಯು ಸಾಮ್ಯವೆಂದು ಹೇಳಿತು.) ಸೃಷ್ಟಿಯಲ್ಲಿ ಪುನಃ ಜನ್ಮವೆತ್ತು ವದಿಲ್ಲವು, ಯಾವಾಗ ಜನ್ಮವಿಲ್ಲವೋ ಪ್ರಳಯಕ್ಕೂ ಸಿಕ್ಕಿ ದುಃಖಿಸುವದೂ ಇಲ್ಲವು ಎಂದು ಹೇಳರುತ್ತದೆ. ಅದ್ವೈತಿಗಳು ಪರಮಾತ್ಮನಲ್ಲಿ ಐಕ್ಯವೇ ಸಾಧರ್ಮ್ಯವೆಂದು ಹೇಳಿರುತ್ತಾರೆ. ಇವರಿಗೆ ಈ ಗೀತಾವಾಕ್ಯವೂ ಈ ಸಾಮ್ಯ

ಶ್ರುತಿಯೂ ವಿರೋಧವಾದುವು. ಸಾಧರ್ಮ್ಯವೆಂದರೆ ಸರ್ವೇಶ್ವರನೊಂದಿಗೆ ಸಮಾನ ಧರ್ಮವು, ಅಪಹತಪಾಪ್ಮತ್ವಾದಿ ಗುಣಾಷ್ಟಕಾವಿರ್ಭಾವದಿಂದಲೂ, ಸಮಾನಾನಂದ ಭೋಗದಿಂದಲೂ ಸಮಾನ ಧರ್ಮವೆಂದು ತಿಳಿಯತಕ್ಕದ್ದು. ಏತರಲ್ಲಿ ಸಮಾನ ಧರ್ಮವೆಂಬುವದನ್ನು ಶ್ರೀ ವ್ಯಾಸ ಮಹರ್ಷಿಗಳು ವ್ಯಕ್ತಪಡಿಸಿರುತ್ತಾರೆ. ಜಗದ್ವ್ಯಾಪಾರಧರ್ಮವಿಲ್ಲವೆಂದೂ, ಭೋಗದಲ್ಲಿ ಮಾತ್ರ, ಎಂದರೆ ಆನಂದದಲ್ಲಿ ಮಾತ್ರ ಸಾಮ್ಯವೆಂದುಪದೇಶಿಸಿರುತ್ತಾರೆ. ವ್ಯಾಸೋಕ್ತಿಗಿಂತ ಆಪ್ತವಾಕ್ಯವು ಬೇರೇ ದೊರೆಯಲಾರದು ಇಂತಹ ಪ್ರಮಾಣಗಳನ್ನೆಲ್ಲಾ ಮನಸ್ಸಿನಲ್ಲಿಟ್ಟು ಶ್ರೀ ವಾಲ್ಮೀಕಿ ಮಹರ್ಷಿಯೂ ಈ ಅಭಿಪ್ರಾಯವನ್ನೇ ವ್ಯಕ್ತಪಡಿಸಿರುತ್ತಾರೆ. ಶ್ರೀ ವಿಭೀಷಣಾಳ್ವಾರರವರು, "ತ್ಯಕ್ತ್ವಾ ಪುತ್ರಾಂಶ್ಚ ದಾರಾಂಶ್ಚ" ಎಂದು ಸರ್ವ ವಿಧ ಪ್ರಾತಿಕೂಲ್ಯವನ್ನೂ ತೊರೆದು ಮಹಾ ವಿರಕ್ತಿಭಾವದಿಂದ, ಪೂರ್ಣ ಭರನ್ಯಾಸವನ್ನು ಯಾವಾಗನುಷ್ಠಿಸಿದನೋ, ಮತ್ತು ಯಾವಾಗ ಶ್ರೀರಾಮನು ಸುಗ್ರೀವನಭಿಪ್ರಾಯಕ್ಕೆ ವಿರೋಧವಾಗಿ ತನ್ನ ಶರಣಾಗತ ರಕ್ಷಣೆ ಪ್ರತಿಜ್ಞೆಯನ್ನು ವ್ಯಕ್ತಪಡಿಸಿದನೋ, ಆಗ ಶ್ರೀರಾಮನಭಿಪ್ರಾಯವನ್ನಂಗೀಕರಿಸಿದವನಾಗಿ ಸುಗ್ರೀವನು ಹೇಳುತ್ತಾನೆ —

ತಸ್ಮಾತ್ ಕ್ಷಿಪ್ರಂ ಸಹಾಸ್ಮಾಭಿ ಸ್ತುಲ್ಯೋಭವತು ರಾಘವ ।
ವಿಭೀಷಣೋ ಮಹಾಪ್ರಾಜ್ಞ ಸ್ಸಖಿತ್ವಂ ಚಾಭ್ಯುಪೈತುನಃ ।

(ರಾಮಾ ಯುದ್ಧ ೧೮ ೩೮) "ವಿಭೀಷಣನು ಮಹಾಪ್ರಾಜ್ಞನಾದುದರಿಂದ ನಮಗೆ ಮಿತ್ರನಾಗಿ ನಮ್ಮೆಲ್ಲರೊಂದಿಗೂ ಸಮಭಾವವನ್ನು ಹೊಂದಲಿ ಎಂದರೆ ಸಮಾನ ಭೋಗವನ್ನು ಹೊಂದಲಿ ಎಂದು ಹೇಳಿದನು. ಇದರಿಂದ ಮುಕ್ತದೆಶೆಯಲ್ಲಿ ಮುಕ್ತರಿಗೆ ಪರಸ್ಪರ ಸಮಾನಾನಂದವೂ, ಈ ಆನಂದವೂ ಪರಮಾತ್ಮನಿಗೆ ಸಮಾನವಾದುದೆಂದು ಏರ್ಪಟ್ಟಿತು. ಹೀಗೆಲ್ಲಾ ಪ್ರಮಾಣಗಳಿದ್ದರೂ ದ್ವೈತಸಿದ್ಧಾಂತಿಗಳಾದ ಶ್ರೀಮಧ್ವಾಚಾರ್ಯರವರು ಆನಂದ ತಾರತಮ್ಯವನ್ನು ತಮ್ಮ ಶಿಷ್ಯರುಗಳಿಗೆ ಉಪದೇಶಿಸಿದರು. ಈ ಅಭಿಪ್ರಾಯವು, ಅಭಯಂ ಸರ್ವ ಭೂತೇಭ್ಯೋ ದದಾಮಿ ಎಂಬಲ್ಲಿರುವ ಸರ್ವ ಭೂತೇಭ್ಯಃ ಎಂಬ ಪ್ರಯೋಗಕ್ಕೂ "ಸಮೋಹಂ ಸರ್ವ ಭೂತೇಷು" ಎಂಬ ಪ್ರಮಾಣಕ್ಕೂ, ಸರ್ವಸ್ಯ ಶರಣಂ ಸುಹೃತ್ ಎಂಬ ಶ್ರುತಿಗೂ ಸಹ ವಿರೋಧವಾಗುತ್ತದೆ. ಉತ್ಕೃಷ್ಟ ಶರೀರದಿಂದ ಮುಕ್ತನಾದವನಿಗೂ ನಿಕೃಷ್ಟ ಶರೀರದಿಂದ ಮುಕ್ತನಾದವನಿಗೂ ಒಂದೇ ವಿಧವಾದಾನಂದವು ಹೇಗೆ ಎಂಬ ಶಙ್ಕೆ ತುಂಬಾ ಅವರನ್ನು ಬಾಧಿಸಿದಹಾಗೆ ತೋರುತ್ತದೆ. ಈ ಶಙ್ಕೆಗೆ ಸಮಾಧಾನವು ಪುಮಾನ್ ನದೇವೋ ನನರೋ ನಪಶುರ್ನ ಚ ಪಾದಪಃ ।
ಶರೀರಾಕೃತಿಭೇದಾಸ್ತು ಭೂಪೈತೇ ಕರ್ಮಯೋನಯಃ (ವಿ.ಪು ೨. ೧೩. ೯೮)

ಎಂದರೆ ಆತ್ಮನು ದೇವತೆಯೂ ಅಲ್ಲವು, ಮನುಷ್ಯನೂ ಅಲ್ಲವು, ವೃಕ್ಷವೂ ಅಲ್ಲವು, ಈ ದೇಹಗಳೆಲ್ಲಾ ಚೇತನರುಗಳಿಗೆ ಕರ್ಮ ಮೂಲಕ ಉಂಟಾದವು ಎಂದು ಹೇಳಿರುವದರಿಂದ, ಮುಕ್ತದೆಶೆಯಲ್ಲಿ ಕರ್ಮಗಳೂ, ಆ ಕಾರಣದಿಂದ ಈ ದೇಹಗಳೂ ಇಲ್ಲದಿರುವದರಿಂದ ಆನಂದ ತಾರತಮ್ಯವು ಹೇಗೆ? ಆನಂದದಲ್ಲಿ ಭೇದ ಉಂಟೆಂಬ ಭಾವವು ವಿ. ಪು ಷಷ್ಠಾಂಶ ಸಪ್ತಮೋಧ್ಯಾಯ ೯೫, ೯೬ನೆಯ ಶ್ಲೋಕಗಳಲ್ಲಿ ಶ್ರೀ ಪರಾಶರರಿಂದ ನಿರಸನ ಮಾಡಲ್ಪಟ್ಟಿರುತ್ತದೆ. "ತದ್ಭಾವ ಭಾವಮಾಪನ್ನಸ್ತತೋಽಸೌ ಪರಮಾತ್ಮನಾ । ಭವತ್ಯಭೇದೀ ಭೇದಶ್ಚ ತಸ್ಯಾಜ್ಞಾನಕೃತೋ ಭವೇತ್ ॥" ತದ್ಭಾವ ಭಾವಂ - ಆ ಪರಬ್ರಹ್ಮನ ಭಾವಗಳಾದ ಅಪಹತ ಪಾಪ್ಮತ್ವಾದಿ ಧರ್ಮಗಳ ಭಾವ ಎಂದರೆ ಪ್ರಾದುರ್ಭಾವವನ್ನು, ಆಪನ್ನಃ - ಹೊಂದಿದ ಮುಕ್ತನಾದ, ಅಸೌ - ಇವನು, ಪರಮಾತ್ಮನಾ - ಪರಮಾತ್ಮನೊಂದಿಗೆ, ಅಭೇದೀ - ಭೇದವಿಲ್ಲವನು ಎಂದರೆ ಆನಂದಸಾಮ್ಯ ಹೊಂದಿದವನು, ಭವತಿ - ಆಗುವನು, ಜ್ಞಾನಾನಂದವೇ ಮೊದಲಾದ ಆಕಾರಗಳಿಂದ ಪರಮಾತ್ಮನೊಂದಿಗೆ ಸಮಾನಾಕಾರವುಳ್ಳವನಾಗುತ್ತಾನೆ. ತಸ್ಯ - ಅಂತಹ ಮುಕ್ತನಿಗೆ, ಭೇದಃ - ಭೇದವು, ಅಜ್ಞಾನಕೃತೋ ಭವೇತ್ - ಕರ್ಮಮೂಲಕವಾಗಿ ಬಂದ ಅಜ್ಞಾನದಿಂದುಂಟಾಗುತ್ತದೆ; ಅಥವಾ, ತಸ್ಯ - ಆ ಮುಕ್ತನಿಗೆ, ಭೇದಃ - ಬದ್ಧದೆಶೆಯಲ್ಲಿ ಭೇದವೆಂದೆಣಿಸುವದು, ಅಜ್ಞಾನಕೃತೋ ಭವೇತ್ - ಕರ್ಮಮೂಲಕವಾಗಿ ಬಂದ ಅಜ್ಞಾನದಿಂದ ಹಾಗೆ ತೋರುತ್ತದೆ. ಈ ಅಭಿಪ್ರಾಯವನ್ನೇ ಮುಂದಿನ ಶ್ಲೋಕದಲ್ಲಿ ವಿವರಿಸಿ ಹೇಳುತ್ತಾರೆ:—ವಿಭೇದ ಜನಕೇಽಜ್ಞಾನೇ ನಾಶಮಾತ್ಯಂತಿಕಂ ಗತೇ । ಆತ್ಮನೋ ಬ್ರಹ್ಮಣೋ ಭೇದಮಸಂತಂ ಕಃ ಕರಿಷ್ಯತಿ ॥" (ವಿ. ಪು. ೬ ೭. ೯೬) ವಿಭೇದ ಜನಕೇ - ನಾನಾ ವಿಧವಾದ ತಿರ್ಯಕ್ಸ್ಥಾವರ ರೂಪದಿಂದುಂಟಾದ, ಅಜ್ಞಾನೇ - ಅಜ್ಞಾನವು, ನಾಶಮಾತ್ಯಂತಿಕಂ ಗತೇ - ಜ್ಞಾನೈಕಾಕಾರತೆಯಿಂದ ಎಲ್ಲಾ ಆತ್ಮರುಗಳೂ ಸಮರು ಎಂಬ ಜ್ಞಾನದಿಂದ ಸಂಪೂರ್ಣವಾಗಿ ನಾಶಹೊಂದಲಾಗಿ, ಆತ್ಮನಃ - ಜೀವಾತ್ಮರುಗಳಿಗೂ (ಜಾತ್ಯೇಕ ವಚನ), ಬ್ರಹ್ಮಣಃ - ಪರಬ್ರಹ್ಮನಿಗೂ, ಅಸಂತಂ - ಇಲ್ಲದೇ ಇರುವ, ಭೇದಂ - ಭೇದವನ್ನು, ಕಃ ಕರಿಷ್ಯತಿ - ಯಾವನು ತಾನೇ ಮಾಡುವನು ? ಎಂದರೆ ಇಬ್ಬರಿಗೂ ಪರಮಸಾಮ್ಯ ಉಂಟೆಂಬ ಭಾವವು

ಇದಲ್ಲದೆ ಕೆಲವರಿಗೆ ಅಧಿಕಾನಂದವೂ, ಇನ್ನು ಕೆಲವರಿಗೆ ಕಮ್ಮಿ ಆನಂದವೂ ಹೀಗಾದರೆ, ಸರ್ವೇಶ್ವರನಿಗೆ ವೈಷಮ್ಯ ನೈರ್ಘೃಣ್ಯಾದಿ ದೋಷ ಹೇಳಿದ ಹಾಗಾಯಿತು. ನ್ಯೂನಾಧಿಕಾನಂದವುಂಟೆಂದರೆ, ನ್ಯೂನಾನಂದವುಳ್ಳವನು, ಅಧಿಕಾನಂದವಿರುವವನನ್ನು ಕಂಡು, ತನಗೆ ಅಂತಹ ಆನಂದವಿಲ್ಲವೇ ಎಂಬ ಶೋಕವನ್ನು

ಹೊಂದಬಹುದು, ಅಂತಹ ಸ್ಥಿತಿಯು ಆನಂದಾವಸ್ಥೆಯೆಂದು ಹೇಳಿಸಿಕೊಳ್ಳಲು ಹೇಗೆ ಸಾಧ್ಯವಾದೀತು ? ಅಪರಿಚ್ಛಿನ್ನವಾದ ಈ ನಿಶ್ರೇಯಸ್ಸಿಗೆ, ನ್ಯೂನಾಧಿಕ್ಯವನ್ನು ಹೇಳುವದರಿಂದ ನಿರವಧಿಕ ನಿರತಿಶಯವಾದ ಪುರುಷಾರ್ಥಕ್ಕೆ ಉಪಾಧಿಯನ್ನೂ ಪರಿಚ್ಛಿತಿಯನ್ನೂ ಕಲ್ಪಿಸಿದ ಹಾಗಾಗುವದಿಲ್ಲವೇ ? ಪರಮ ಪುರುಷಾರ್ಥವೆಂದು ಹೇಳಿಸಿಕೊಳ್ಳುವದಕ್ಕೆ ತರ ತಮ ಭಾವ ಉಂಟೋ ?

ಈ ಆನಂದ ತಾರತಮ್ಯಕ್ಕೆ ಅವರುಗಳು ಉದಾಹರಿಸುವ ಮುಖ್ಯ ಪ್ರಮಾಣ ಗಳು ಯಾವುವೆಂದರೆ :—ತೈತ್ತರೀಯ ಆನಂದವಲ್ಲಿ ಮತ್ತು ಬೃಹದಾರಣ್ಯಕದ (೬. ೩. ೩೩) ವಾಕ್ಯಗಳು. ತೈತ್ತರೀಯದಲ್ಲಿ ಪರಮಾತ್ಮನ ಆನಂದದ "ಮೀ ಮಾಂಸಾ" ಸಾಧ್ಯವೇ ಎಂದರೆ, ಅದರ ಇಯತ್ತಾ ಇಷ್ಟು ಎಂದು ಅಳತೆಮಾಡಲು ಸಾಧ್ಯವೇ ಎಂದು ಹೇಳಲು ಹೊರಟು, ಒಬ್ಬ ಯುವಾ - ಯವ್ವನಸ್ಥನು ಸಕಲ ಆಯುರಾರೋಗ್ಯೈಶ್ವರ್ಯಗಳನ್ನುಳ್ಳವನಾಗಿ, ಚಕ್ರವರ್ತಿಯಾಗಿ, ಈ ಸಮಸ್ತ ಲೋಕವನ್ನೂ ಆಳುವವನಾಗಿ ಪೂರ್ಣಕಾಮನಾಗಿದ್ದಾನೆಂದು ಊಹಿಸಿ, ಅಂತವನ ಆನಂದವನ್ನು ಒಂದು ಮನುಷ್ಯಾನಂದವೆಂದು ಇಟ್ಟುಕೊಂಡರೆ, ಅಂತಹ ನೂರು ಆನಂದಗಳು ಮನುಷ್ಯಗಂಧರ್ವನ ಆನಂದವಾಗುತ್ತದೆಂದೂ, ಅದರ ನೂರರಷ್ಟು ದೇವಗಂಧರ್ವನ ಆನಂದವಾಗುತ್ತದೆಂದು ಹೇಳುತ್ತಾ ಹೋಗಿ, ಕಡೆಗೆ ಅದರ ನೂರ ರೆಷ್ಟಾದರೆ, ಇಂದ್ರನಾನಂದವೆಂದೂ, ಇದ್ರನ ನೂರರಷ್ಟು ಆನಂದವು ಬೃಹಸ್ಪತಿ ಯಾನಂದವೆಂದೂ, ಅದರ ನೂರರಷ್ಟು ಚತುರ್ಮುಖನಾನಂದವೂ, ಅದರ ನೂರ ರಷ್ಟು ಪರಬ್ರಹ್ಮನಿಗೆ ಎಂದು ಹೇಳಿದರೂ ಹೇಳಬಹುದು. ಹೀಗೆ ಒಂದಕ್ಕಿಂತ ಒಂದು ನೂರರಷ್ಟು ಎಂದು ಹೇಳುವಾಗ, ಈ ಪ್ರತಿಯೊಬ್ಬರಾದ ಮನುಷ್ಯಗಂಧರ್ವ, ದೇವ ಗಂಧರ್ವಾದಿಗಳೇ ಮೊದಲಾದ ಇಂದ್ರ, ಬೃಹಸ್ಪತಿ, ಚತುರ್ಮುಖ, ಪರಬ್ರಹ್ಮಾ ನಂದಗಳೂ ಪ್ರತಿಯೊಂದೂ, ಶ್ರೋತ್ರಿಯಸ್ಯಚಾ ಕಾಮಹತಸ್ಯ, ಬ್ರಹ್ಮನಿಷ್ಠ ನಾಗಿ ಅಪಹತಪಾಪ್ಮತ್ವಾದಿ ಗುಣಗಳುಳ್ಳ ಮುಕ್ತನಿಗೂ ಉಂಟೆಂದು ಹೇಳಿ, ಬ್ರಹ್ಮ ಣಃ ಆನಂದಃ, ಶ್ರೋತ್ರಿಯಸ್ಯಚಾ ಕಾಮಹತಸ್ಯ ಎಂಬಲ್ಲಿ ಚ ಕಾರವಿರುವದ ರಿಂದ ಪರಬ್ರಹ್ಮನೇ ಬೇರೆ ಆತನಿಗೆ ಅಪೃಥಕ್ಸಿದ್ಧವಿಶೇಷಣನಾದ ಮುಕ್ತನೂ ಬೇರೆ ಎಂದು ಅದ್ವೈತವನ್ನು ಖಂಡಿಸಿ ಹೇಳಿ, ಪರಬ್ರಹ್ಮಾನಂದವೂ ಮುಕ್ತನಾನಂದವೂ ಎರಡೂ ಸಮವೆಂದು ಹೇಳಲ್ಪಟ್ಟಿರುತ್ತದೆ. ನಿರಂಜನಃಪರಮಂ ಸಾಮ್ಯಮುಪೈತಿ ಎಂಬ ಛಾಂದೋಗ್ಯ ಶ್ರುತ್ಯರ್ಥವೇ ಇಲ್ಲೂ ಉಪಪಾದಿಸಲ್ಪಟ್ಟಿರುತ್ತದೆ. ಇವೆಲ್ಲಾ ಆನಂದಗಳೂ ಮುಕ್ತನಿಗೂ ಉಂಟೆಂದು ಹೇಳುವದಕ್ಕಾಗಿಯೇ, ಶ್ರೋತ್ರಿಯಸ್ಯ ಚಾ ಕಾಮಹತಸ್ಯ ಎಂಬ ಶಬ್ದಗಳು ಪ್ರತಿಯೊಂದು ವಾಕ್ಯದಲ್ಲೂ ಪಲ್ಲವಿಯಹಾಗೆ ಪ್ರಯೋಗಿಸಲ್ಪಟ್ಟಿರುತ್ತದೆ. ಆದರೆ ದ್ವೈತಸಿದ್ಧಾಂತಿಗಳು ಮನುಷ್ಯಗಂಧರ್ವ,

ದೇವಗಂಧರ್ವ, ಇಂದ್ರ, ಚತುರ್ಮುಖ ಮೊದಲಾದವರ ಆನಂದಗಳಿಗೆ ಹೇಗೆ ತಾರತಮ್ಯ ಉಂಟೋ, ಈ ಮುಕ್ತಾನಂದವು ಹಾಗೆ ತಾರತಮ್ಯ ಉಳ್ಳದ್ದೆಂದು ಅರ್ಥ ಮಾಡಿದರು. ಇದು ಸಮಂಜಸವಾದ ಅರ್ಥವಾಗುವದಿಲ್ಲವು ಏಕೆಂದರೆ, **ಶ್ರೋತ್ರಿಯಸ್ಯಚಾ ಕಾಮಹತಸ್ಯ** ಎಂಬದಾಗಿ ಒಂದೇ ವಿಧವಾದ ಧರ್ಮಗಳುಳ್ಳ ಮುಕ್ತರಿಗೆ ಬೇರೆಬೇರೆ ವಿಧವಾದ ಆನಂದಪ್ರಾಪ್ತಿ ಎಂಬುದು ಯುಕ್ತವಲ್ಲವು. ಆಗ ಪರಮಾತ್ಮನಿಗೆ ವೈಷಮ್ಯ ನೈರ್ಘೃಣ್ಯಗಳನ್ನಾರೋಪಿಸಿದಂತಾಯಿತು ಆದುದರಿಂದ ಈ ಶ್ರುತಿಯಿಂದಾನಂದವೂ ಮುಕ್ತನಿಗೂ ಉಂಟೆಂದು ಅರ್ಥ ಮಾಡುವದೇ ಸರಸವು, ಸಮಂಜಸವು ಇದರ ಮೇಲೆ ಒಂದು ಪೂರ್ವ ಪಕ್ಷವನ್ನು ಮಾಡಬಹುದು. ಏನೆಂದರೆ, ಪರಬ್ರಹ್ಮಾನಂದಕ್ಕೇನೇ ಈ ಮುಕ್ತಾನಂದವೂ ಸಮವೆಂದು ಹೇಳಿವರೇನೇ, ಮುಕ್ತ ಎಲ್ಲರ ಆನಂದವೂ ಉಂಟೆಂದು ಹೇಳಿದ ಹಾಗೆ ಆಗುವಾಗ ಶ್ರುತಿಯೊಬ್ಬರಾನಂದವೂ ಮುಕ್ತನಿಗುಂಟೆಂದು ಉಪನಿಷತ್ತು ಹೇಳುವದು ನಿರರ್ಥಕವಲ್ಲವೇ ಎಂದರೆ, ಉಪನಿಷತ್ತುಗಳುಪದೇಶವೇ ಪೌನರುಕ್ತಿಯುಳ್ಳದ್ದು. ಸರ್ವೇಶ್ವರನಿಗೆ ಸಮಸ್ತವೂ ಶರೀರವೆಂದೂ, ಆತನು ಸರ್ವಾಂತರ್ಯಾಮಿ ಎಂದೂ ಹೇಳಲು ಹೋಗಿ, ಪೃಥಿವಿಯಲ್ಲಿ ಅಂತರ್ಯಾಮಿಯಾಗಿದ್ದಾನೆಂದೂ, ಹಾಗೆಯೇ ಅಪ್ಪಿನಲ್ಲೂ, ಅಗ್ನಿಯಲ್ಲೂ, ಅಂತರಿಕ್ಷದಲ್ಲೂ, ವಾಯುವಿನಲ್ಲೂ ಎಂದು ೨೧ ದ್ರವ್ಯಗಳಿಗೆ ಅಂತರ್ಯಾಮಿ ಎಂದು ಉಪದೇಶಿಸಿರುತ್ತದೆ (ಬೃಹ. ೫. ೭. ೩ ರಿಂದ ೨೩) ಇಂತಹ ಅನೇಕ ನಿದರ್ಶನಗಳನ್ನು ತೋರಿಸಬಹುದು. ಆದರೆ ಹೀಗೆ ಒಂದಕ್ಕಿಂತ ಒಂದು ನೂರರಷ್ಟು ಎಂದು ಹೇಳುತ್ತಾ ಹೋದರೆ ಪರಮಾತ್ಮನ ಆನಂದಕ್ಕೆ ಪರಿಚ್ಛಿನ್ನತೆಯನ್ನು ಹೇಳಿದಹಾಗಾಗುವದಿಲ್ಲವೇ ಎಂದರೆ, ಅಪರಿಚ್ಛಿನ್ನವೆಂದು ತಿಳಿಸುವದಕ್ಕಾಗಿಯೇ ಹೀಗೆ ಒಂದಕ್ಕಿಂತ ಒಂದು ನೂರರಷ್ಟೆಂದು ಹೇಳುತ್ತಾ ಹೋಗಿ ಕಡೆಗೆ **"ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ"** ಅದರಿಂದ ವಾಕ್ಕೂ ಹಿಂದಿರುಗುತ್ತದೆ, ಮನಸ್ಸಿನಿಂದಲೂ ಊಹಿಸಲಸಾಧ್ಯವು ಎಂದು ಹೇಳಿ ಶ್ರುತಿಯು ವಿರಾಮವನ್ನು ಹೊಂದಿತು ಈ ಶ್ರುತಿಯು ಪರಮಾತ್ಮನ ಒಂದು ಗುಣದ ಮೀಮಾಂಸಾ ಸಾಧ್ಯವೇ ಎಂದು ಹೇಳಿದ ಹಾಗೆ, ಸ್ವಾಮಿ ದೇಶಿಕರವರು ಪಾದುಕಾ ಸಹಸ್ರದಲ್ಲಿ ಪಾದುಕೆಗಳ ಮಾಹಾತ್ಮ್ಯೆಯನ್ನು ವರ್ಣಿಸಲು ಸಾಧ್ಯವೇ ಎಂಬುದಕ್ಕೆ ಹೇಳುತ್ತಾರೆ :—

**ನಿಶ್ಶೇಷ ಮಂಬರತಲಂ ಯದಿ ಪತ್ರಿಕಾಸ್ಯಾ**
**ತ್ಸಪ್ತಾರ್ಣವೀಯದಿ ಸಮೇತ್ಯಮಷೀ ಭವಿತ್ರೀ ।**
**ವಕ್ತಾ ಸಹಸ್ರವದನಃ ಪುರುಷಸ್ಸ್ವಯಂಚೇ**
**ಲ್ಲಿಖ್ಯೇತ ರಂಗಪತಿ ಪಾದುಕಯೋಃ ಪ್ರಭಾವಃ ॥**

"ನಿಶ್ಶೇಷವಾದ ಆಕಾಶ ಪ್ರದೇಶವೆಲ್ಲಾ ಒಂದು ಕಾಗದವಾಗಿ, ಸಪ್ತಸಮುದ್ರವೂ ಮಶಿಯಾಗಿ, ವರ್ಣಿಸಿ ಹೇಳುವವನು ಸರ್ವೇಶ್ವರನೇ ಆಗಿ ಸಹಸ್ರಮುಖದಿಂದಲೂ ವರ್ಣಿಸಿದರೆ ಆಗೀಗ ಒಂದುವೇಳೆ ಪಾದುಕಾ ಪ್ರಭಾವವನ್ನು ಬರೆದರೂ ಬರೆಯುಬಹುದು" ಎಂದು ಹೇಳಿದರೆ ಪ್ರಭಾವಕ್ಕೆ ಪರಿಚ್ಛಿತ್ತಿಯನ್ನು ಹೇಗೆ ಹೇಳಿದ ಹಾಗೆ ಆಗಲಿಲ್ಲವೋ ಹಾಗೆಯೇ ಈ ಮೇಲಿನ ಆನಂದವಲ್ಲಿಯ ವಾಕ್ಯದಲ್ಲೂ ಎಂದು ತಿಳಿಯತಕ್ಕದ್ದು. (ಬೃಹ ೫ ೬. ೨ ರಿಂದ ೨೩)

ಈ ಆನಂದ ತಾರತಮ್ಯಕ್ಕೆ ಇನ್ನೊಂದು ಪ್ರಮಾಣವು ಬೃಹದಾರಣ್ಯಕವು ೬. ೩. ೩೩. ಇದು ಮೇಲಿನ ತೈತ್ತರೀಯ ವಾಕ್ಯಗಳ ಹಾಗೆಯೇ ಇರುತ್ತದೆ. "ಸಯೋ ಮನುಷ್ಯಾಣಾಗ್ ರಾದ್ಧಃ ಸಮೃದ್ಧೋ ಭವತ್ಯನ್ಯೇಷಾಮಧಿಪತಿ ಸರ್ವೈರ್ಮಾನುಷ್ಯೈರ್ಭೋಗೈಸ್ಸಂಪನ್ನತಮಃ ಸಮನುಷ್ಯಾಣಾಂ ಪರಮ ಆನನ್ದಃ" ಎಂದು ಪ್ರಾರಂಭಿಸಿ, ಸಮಸ್ತೋಪಾಯಗಳಿಂದ ಸಿದ್ಧನಾಗಿ, ಯುವತ್ವಾದಿ ಗುಣಸಮೃದ್ಧಿಯುಳ್ಳವನಾಗಿ, ಇತರ ಮನುಷ್ಯರಿಗೆಲ್ಲಾ ರಾಜನಾಗಿ, ಪರಿಪೂರ್ಣಮನೋರಧನಾಗಿ ಇರುವವನೊಬ್ಬನಿದ್ದರೆ, ಅಂತವನು ಮನುಷ್ಯರಲ್ಲಿ ಪರಮಾನಂದ ಉಳ್ಳವನೆಂದು ಹೇಳಬಹುದು. ಇಂತಹ ನೂರು ಆನಂದವು ಇನ್ನೊಬ್ಬನಿಗೆ, ಅದರ ನೂರರಷ್ಟು ಮತ್ತೊಬ್ಬನಿಗೆ ಎಂದು ಹೀಗೆ ಹೇಳುತ್ತಾ, ಅದೂ ಶ್ರೋತ್ರಿಯೋಽವೃಜಿನೋಽಕಾಮಹತಃ, ಬ್ರಹ್ಮನಿಷ್ಠನಾಗಿ, ಪಾಪರಹಿತನಾಗಿ, ಯಾವ ವಿಧವಾದ ಕಾಮನೆಯ ಕ್ಲೇಶವಿಲ್ಲದಿರುವ ಮುಕ್ತನಿಗೂ ಉಂಟೆಂದು ಹೇಳಿ, ಹೀಗೆಯೇ ಹೇಳುತ್ತಾ ಅನಂತರ ಅದರ ನೂರರಷ್ಟು ಆನಂದವು ಚತುರ್ಮುಖನಿಗೆಂದೂ, ಆ ಆನಂದವೂ ಮುಕ್ತನಿಗುಂಟೆಂದೂ, ಚತುರ್ಮುಖನ ನೂರರಷ್ಟಾನಂದವು ಪರಬ್ರಹ್ಮನಿಗೂ, ಆ ಆನಂದವು ಮುಕ್ತನಿಗೂ ಉಂಟೆಂದು ಹೇಳಿರುತ್ತದೆ. ಇದರಿಂದ ಮುಕ್ತನಾನಂದವು ಪರಬ್ರಹ್ಮಾನಂದಕ್ಕೆ ಸಮನಾದುದು ಎಂದೂ, ಬೋಧಿಸಿರುತ್ತದೆಯೇ ವಿನಾ, ಆನಂದ ತಾರತಮ್ಯವನ್ನು ಬೋಧಿಸುವದಿಲ್ಲವು.

ಈ ಎರಡು ಉಪನಿಷತ್ತುಗಳಲ್ಲದೆ, ಒಂದು ಪಾದ್ಮಪುರಾಣ ಶ್ಲೋಕವನ್ನೂ ಸ್ಮೃತಿ ವಾಕ್ಯವನ್ನೂ ಈ ಆನಂದ ತಾರತಮ್ಯಕ್ಕೆ ದ್ವೈತ ಸಿದ್ಧಾಂತಿಗಳು ಉದಾಹರಿಸುತ್ತಾರೆ. ಇವುಗಳು ಉಪನಿಷತ್ತಿನ ಹಾಗೆ ಮುಖ್ಯವಾದವುಗಳಲ್ಲವಾದುದರಿಂದ ಅವುಗಳ ಚರ್ಚೆಯು ಇಲ್ಲಿ ಪ್ರಕೃತವಲ್ಲವು

ಆದುದರಿಂದ ನಿರಂಜನಃ ಪರಮಂ ಸಾಮ್ಯಮುಪೈತಿ ಎಂಬ ವಾಕ್ಯವನ್ನನುಸರಿಸಿ, ಎಲ್ಲಾ ಮುಕ್ತರ ಆನಂದವೂ ಸಮವೆಂದು ಭಾವಿಸಿ, ಆ ಆನಂದವು ಪರಬ್ರಹ್ಮಾನಂದಕ್ಕೂ ಸಮವಾದುದೆಂದು ಒಪ್ಪತಕ್ಕದ್ದು. ಇದನ್ನೇ ಶ್ರೀ ಯತಿವರ್ಯರು "ಯಜ್ಜ್ಞಾತ್ವಾ ನ ಪುನರ್ಮೋಹಂ" ಎಂಬ ಗೀತಾ ಳನೆಯ ಅಧ್ಯಾಯ

**"ಆಚಾರ ವೈಕಲ್ಯ"ಮುಡೈಯ ಮುಮುಕ್ಷುಕ್ಕಳುಕ್ಕು ಆನಂದಹ್ರಾಸ ಮುಣ್ಡಾಮೆನ್ರು ಶಿಲರ್ ಶೊಲ್ಲುಮ್ ವಚನಮಾಪ್ತವಾನಾಲುಮ್ ಮುಕ್ತ ನಾವದರ್ಕ್ಕು ಮುನ್ನೇ ವರುಮ್ ಭಗವದನುಭವತ್ತಿಲ್ ಸಙ್ಕೋಚತ್ತೈ ಶೊಲ್ಲಿತ್ತಾ ಮತ್ತೆನ್ನೈ.**

---

೩೫ನೆಯ ಶ್ಲೋಕದ ವ್ಯಾಖ್ಯಾನದಲ್ಲಿ, "**ನಾಮರೂಪ ವಿನಿರ್ಮುಕ್ತಸ್ಯಾತ್ಮವಸ್ತುನಃ ಪರಸ್ವರೂಪ ಸಾಮ್ಯಮುಪಗಮ್ಯತೇ, ಅತಃ ಪ್ರಕೃತಿ ವಿನಿರ್ಮುಕ್ತಂ ಸರ್ವಂ ಆತ್ಮವಸ್ತು ಪರಸ್ಪರಂ ಸಮಂ, ಸರ್ವೇಶ್ವರೇಣ ಚ ಸಮಂ**" ಎಂದು ಸ್ಪಷ್ಟವಾಗಿ ಹೇಳಿರುತ್ತಾರೆ. ಪ್ರಕೃತಿ ಸಂಬಂಧದಿಂದ ಬಿಡಲ್ಪಟ್ಟವರಿಂದ ಈಗಿನ ಹಾಗೆ ನಾಮರೂಪಗಳಿಲ್ಲದ ಆತ್ಮಸಮುದಾಯಕ್ಕೆಲ್ಲಾ ಪರಬ್ರಹ್ಮ ಸಾಮ್ಯ ಉಂಟೆಂದೂ, ಹೀಗೆ ಪ್ರಕೃತಿ ವಿಯುಕ್ತರಾದ ಆತ್ಮರುಗಳೆಲ್ಲಾ ಜ್ಞಾನೈಕಾಕಾರತೆಯಿಂದ ಪರಸ್ಪರ ಸಮರೆಂದೂ **ನಿರಂಜನಃ ಪರಮಂ ಸಾಮ್ಯಮುಪೈತಿ** ಎಂಬ ಶ್ರುತ್ಯರ್ಥವನ್ನು ವ್ಯಕ್ತಪಡಿಸಿರುತ್ತಾರೆ.

೧. ಆಗಲಿ, "**ಮುಮುಕ್ಷೂಣಾಂ ಸದಾಚಾರ ವೈಕಲ್ಯಂ ಯಾವದಾಯುಷಂ । ಭವೇದ್ಯದಿ ತದಾನಂದೇ ನ್ಯೂನತಾಂ ಜನಯೇನ್ನೃಪ ॥**" "ಮೋಕ್ಷಾರ್ಥಿಗಳಿಗೆ ಸದಾಚಾರದಲ್ಲಿ ನ್ಯೂನತೆಯು ಆಯುಸ್ಸು ಇರುವವರೆಗೂ ಉಂಟಾದದ್ದೇಯಾದರೆ, ಆಗ ಆನಂದದಲ್ಲಿ ನ್ಯೂನತೆಯನ್ನುಂಟುಮಾಡುತ್ತದೆ'' ಎಂಬ "**ಆನಂದೇ ತಾರತಮ್ಯಂಸ್ಯಾದಾಚಾರೇ ತಾರತಮ್ಯತಃ**" "ಆಚಾರ ತಾರತಮ್ಯದಿಂದ ಆನಂದತಾರತಮ್ಯವುಂಟಾಗುತ್ತದೆ'' ಎಂಬ ನಮ್ಮ ಆಪ್ತರ ವಚನಗಳು ಆನಂದತಾರತಮ್ಯವನ್ನು ಹೇಳುತ್ತವೆಯಲ್ಲಾ ಎಂದರೆ **ಆ** ವಚನಗಳು ಮುಕ್ತಾತ್ಮರುಗಳ ಆನಂದ ತಾರತಮ್ಯವನ್ನು ಹೇಳುವದಿಲ್ಲವೆಂದು ಅಪ್ಪಣೆ ಕೊಡಿಸುತ್ತಾರೆ "**ಆಚಾರ ವೈಕಲ್ಯ" ಮುಡೈಯ** - ಆಚಾರದಲ್ಲಿ ನ್ಯೂನತೆಯಿರುವ, **ಮುಮುಕ್ಷುಕ್ಕಳುಕ್ಕು** - ಮೋಕ್ಷಾರ್ಥಿಗಳಿಗೆ, **ಆನಂದಹ್ರಾಸಮ್** - ಆನಂದದಲ್ಲಿ ನ್ಯೂನತೆಯು, **ಉಣ್ಡಾಮೆನ್ರು** - ಉಂಟೆಂಬದಾಗಿ, **ಶಿಲರ್** - ಕೆಲವರು, **ಶೊಲ್ಲುಮ್ ವಚನಮ್**- ಹೇಳುವ ವಚನವು, **ಆಪ್ತವಾನಾಲುಮ್** - ಆಪ್ತರು ಹೇಳಿದ ಮಾತಾದರೂ, **ಮುಕ್ತನಾವದರ್ಕು** - ಮುಕ್ತಿಯನ್ನು ಹೊಂದುವದಕ್ಕೆ, **ಮುನ್ನೇ** - ಮುಂಚಿತವಾಗಿಯೇ, **ವರುಮ್** - ಉಂಟಾಗುವ, ಭಗವದನುಭವ ದಲ್ಲಿ, **ಸಙ್ಕೋಚತ್ತೈ ಶೊಲ್ಲಿತ್ತಾಯಿತ್ತು** - ನ್ಯೂನತೆಯನ್ನು ಹೇಳಿದಂತೆ ಭಾವಿಸತಕ್ಕದ್ದು. "**ಮುಮುಕ್ಷೂಣಾಂ ಸದಾಚಾರ ವೈಕಲ್ಯಂ**" ಎಂಬ

ವಚನವು ಆಪ್ತರು ಹೇಳಿದುದಾದರೂ, ಆನಂದ ತಾರತಮ್ಯವನ್ನು ಮುಕ್ತದೆಶೆಯಲ್ಲಿ ಹೇಳಿತೆಂದರೆ, ಆ ವಚನವು ಶ್ರುತಿ ಸ್ಮೃತಿ ಸೂತ್ರಾದಿಗಳಿಗೆ ವಿರೋಧವಾಗುವದರಿಂದ ಪ್ರಮಾಣವೇ ಆಗುವದಿಲ್ಲವು; ಆದರೆ ಆಪ್ತವಾಕ್ಯವನ್ನು ಪ್ರಮಾಣವಾಗಿ ಭಾವಿಸತಕ್ಕದ್ದಲ್ಲವೇ ಎಂದರೆ, ಆಗ ಐಹಿಕಾನಂದದಲ್ಲಿ ನ್ಯೂನತೆಯನ್ನುಂಟುಮಾಡುತ್ತದೆಂದು ಅರ್ಥ ಮಾಡತಕ್ಕದ್ದೆಂಬ ಭಾವವು. ವರ್ಣಾಶ್ರಮಾಚಾರಗಳಲ್ಲಿ ನ್ಯೂನತೆಯುಂಟಾದರೆ ಐಹಿಕ ಭೋಗಗಳಲ್ಲೂ ನ್ಯೂನತೆಯುಂಟೆಂದು ಪ್ರಮಾಣವು ಹೇಳಿತೆಂದು ತಿಳಿಯತಕ್ಕದ್ದು. **"ಸಂಧ್ಯಾಹೀನೋಽಶುಚಿರ್ನಿತ್ಯ ಮನರ್ಹಸ್ಸರ್ವ ಕರ್ಮಸು । ಯದನ್ಯತ್ಕುರುತೇ ಕರ್ಮ ನತಸ್ಯ ಫಲಭಾಗ್ಭವೇತ್ ॥ ವರ್ಣಾಶ್ರಮಾಚಾರವತಾ ಪುರುಷೇಣ ಪರಃಪುಮಾನ್ । ವಿಷ್ಣುರಾರಾಧ್ಯತೇ ಪನ್ಥಾ ನಾನ್ಯಸ್ತತ್ತೋಷಕಾರಕಃ ॥"** ಇತ್ಯಾದಿ ಪ್ರಮಾಣಗಳ ಭಾವಾನುಗುಣವಾಗಿ ಅನ್ವಯಿಸತಕ್ಕದ್ದು. "ಸಂಧ್ಯಾವಂದನವೇ ಮೊದಲಾದ ನಿತ್ಯಕರ್ಮಗಳ ನ್ಯೂನತೆಯುಳ್ಳವನು ಅಶುಚಿಯಾದವನು, ಇತರ ಕರ್ಮಗಳಿಗೆಲ್ಲಾ ಅನರ್ಹನು ಇತರ ಕರ್ಮಗಳನ್ನನುಷ್ಠಿಸಿದರೂ ಅವುಗಳ ಫಲಗಳನ್ನು ಪಡೆಯಲಾರನು, ವರ್ಣಾಶ್ರಮಾಚಾರಗಳುಳ್ಳ ಮನುಷ್ಯನಿಂದ ಪರಮಪುರುಷನಾದ ವಿಷ್ಣುವು ಆರಾಧಿಸಲ್ಪಡುವನು, ಇನ್ನು ಯಾವುದೂ ಶ್ರೀ ಮಹಾ ವಿಷ್ಣುವಿಗೆ ಅಷ್ಟು ಸಂತೋಷವನ್ನುಂಟುಮಾಡುವದಿಲ್ಲವು" ಎಂದು ಹೇಳಿರುವದರಿಂದ ಆಚಾರನ್ಯೂನತೆಯಿಂದ ಭಗವದನುಗ್ರಹಕ್ಕೆ ಕುಂದಕವುಂಟಾಗಿ ಐಹಿಕದ ಆನಂದದಲ್ಲಿ ನ್ಯೂನತೆಯುಂಟಾಗಬಹುದೆಂಬ ತಾತ್ಪರ್ಯವು

ಆದರೆ ಕೆಲವರು ಭಕ್ತಿಮಾರ್ಗದಲ್ಲಿಳಿದ ಉಪಾಸಕನಿಗೆ ಮುಕ್ತದೆಶೆಯಲ್ಲಿ ಅನುಭವ ಮಾತ್ರವೇ ಆನಂದವು, ಭರನ್ಯಾಸ ನಿಷ್ಠರಿಗೆ ಕೈಂಕರ್ಯಪ್ರಾಪ್ತಿ ಮಾತ್ರವೇ ಆನಂದವು, ಹೀಗೆ ಆನಂದ ಭೇದ ಉಂಟೆಂದು ಊಹಿಸಬಹುದು ಇಂತಹ ಪೂರ್ವಪಕ್ಷಕ್ಕೂ ಕೂಡ ಅವಕಾಶವಿಲ್ಲವು ಮುಕ್ತರಿಗೆ ಸರ್ವಕರ್ಮನಾಶವನ್ನು ಶ್ರುತಿಗಳು ಬೋಧಿಸುವದರಿಂದ ಆನಂದ ತಾರತಮ್ಯಕ್ಕೆ ಕಾರಣವೇ ಇಲ್ಲವು. ಅದೂ ಅಲ್ಲದೆ, **"ಸಾಯುಜ್ಯಂ ಪ್ರತಿಪನ್ನಾಯೇ ತೀವ್ರಭಕ್ತಾಸ್ತಪಸ್ವಿನಃ । ಕಿಙ್ಕರಾಮಮತೇ ನಿತ್ಯಂ ಭವಂತಿ ನಿರುಪದ್ರವಾಃ ॥"** ಎಂದು ಹೇಳಿರುವದರಿಂದ, ಎಲ್ಲಾ ಮುಕ್ತರೂ ಕಿಂಕರರಾದುದರಿಂದ ಪರಬ್ರಹ್ಮಾನುಭವ ಕೈಂಕರ್ಯಗಳು ಎಲ್ಲರಿಗೂ ಸಮವೆಂದು ಹೇಳಲ್ಪಟ್ಟಿರುತ್ತದೆ.

ಮುಂದಿನ ವಾಕ್ಯದಿಂದ ಇನ್ನೊಂದು ಪೂರ್ವಪಕ್ಷಕ್ಕೆ ಸಮಾಧಾನವನ್ನು ಹೇಳುತ್ತಾರೆ ಕೆಲವರಿಗೆ ಬಹಳ ಕಾಲಗಳ ಮುಂಚೆಯೇ ಮುಕ್ತಿಯುಂಟಾಗುತ್ತದೆ. ಕೆಲವರಿಗೆ ಈಗಲೂ, ಕೆಲವರಿಗೆ ಬಹು ಕಾಲಗಳು ಕಳೆದ ನಂತರವೂ

**ಪಿರ್ಪಡ ಮುಕ್ತರಾನಾರ್ಕ್ಕುಮ್ ನಾಳಿಳವೇ ಪೋಕ್ಕಿ (ಪ್ಪೊರುಳಿಳ) ಪ್ಪೇರಿಳವಿಲ್ಲೈ.**

**ಸಾಲೋಕ್ಯಾದೌ ಮುಕ್ತತ್ವವ್ಯಪದೇಶೋ ಔಪಚಾರಿಕಃ.**

---

**ಶ್ರೀ ವಿಷ್ಣುಲೋಕಾದಿಗಳಿಲೇ ಸಾಲೋಕ್ಯ ಸಾರೂಪ್ಯಾದಿ ಮಾತ್ರಮ್**

---

ಮುಕ್ತಿಯುಂಟಾಗಬಹುದು. ಬಹು ಕಾಲಕ್ಕೆ ಮುಂಚೆ ಮುಕ್ತಿಯುಂಟಾದವರಿಗೆ ಹೆಚ್ಚು ಆನಂದವೂ, ಈಚೆಗೆ ಉಂಟಾದವರಿಗೆ ಕಮ್ಮಿ ಆನಂದವೂ ಉಂಟಾಗಿ ಹೀಗೆ ಆನಂದ ತಾರತಮ್ಯವು ಉಂಟಾಗುವದಿಲ್ಲವೇ ಎಂದರೆ, ಈಗ ವಿವಾದಾಸ್ಪದವಾಗಿರುವದು ಆನಂದ ಸ್ವರೂಪವಾದುದರಿಂದ ನ್ಯೂನಾಧಿಕ ಕಾಲವ್ಯತ್ಯಾಸವಿದ್ದರೂ ಸ್ವರೂಪ ವ್ಯತ್ಯಾಸವಿಲ್ಲವೆಂದು ತಿಳಿಸುತ್ತಾರೆ

೨ ಪಿರ್ಪಡ ಮುಕ್ತರಾನಾರ್ಕ್ಕುಮ್ - ಅನಂತರ ಮುಕ್ತಿಯನ್ನು ಹೊಂದಿದವರಿಗೂ, **ನಾಳಿಳವೇ ಪೋಕ್ಕಿ** - ಕಾಲದ ಅತಿಕ್ರಮ ವ್ಯತ್ಯಾಸಮೂಲಕವಾಗಿ, **ಪೇರಿಳವಿಲ್ಲೈ** - ಪುರುಷಾರ್ಥದಲ್ಲಿ ವ್ಯತ್ಯಾಸವಿಲ್ಲವು, **ಪೊರುಳಿಳವಿಲ್ಲೈ** - ಎಂಬ ಪಾಠವಾದರೆ ವಸ್ತು ತಾರತಮ್ಯವಿಲ್ಲವು, ಎಂಬರ್ಥವು. ಪ್ರಾಪ್ಯದಲ್ಲೇನೂ ವ್ಯತ್ಯಾಸವಿಲ್ಲವೆಂಬರ್ಥವು. ಪ್ರತಿ ಬಂಧಕವಾಗಿದ್ದ ಬಂಧದ ನಿವೃತ್ತಿಯು ಕರ್ಮಾನುಗುಣವಾಗಿ ಕಾಲವ್ಯತ್ಯಾಸದಿಂದುಂಟಾದರೂ, ಆನಂದ ಸ್ವರೂಪದಲ್ಲಿ ತಾರತಮ್ಯವಿಲ್ಲವೆಂಬ ಭಾವವು.

ಮುಂದೆ ಮೂರನೆಯ ಪೂರ್ವಪಕ್ಷಕ್ಕೆ ಸಮಾಧಾನವು ಹೇಳಲ್ಪಡುತ್ತದೆ ಕೆಲವರಿಗೆ ಸಾಲೋಕ್ಯವೂ, ಕೆಲವರಿಗೆ ಸಾರೂಪ್ಯವೂ, ಕೆಲವರಿಗೆ ಸಾಮೀಪ್ಯವೂ, ಇನ್ನು ಕೆಲವರಿಗೆ ಸಾಯುಜ್ಯವೂ, ಪ್ರಾಪ್ತವಾಗುತ್ತವೆಂದು ಶಾಸ್ತ್ರದಲ್ಲಿ ಹೇಳಿರುವದರಿಂದ ಆ ಸಂದರ್ಭದಲ್ಲಿ ಆನಂದ ತಾರತಮ್ಯವಿಲ್ಲವೋ ಎಂದರೆ, ಸಾಲೋಕ್ಯ, ಸಾರೂಪ್ಯ, ಸಾಮೀಪ್ಯವೆಲ್ಲಾ ಮೋಕ್ಷವಾಗುವದಿಲ್ಲವೆಂದೂ, ಸಾಯುಜ್ಯಮಾತ್ರವೇ ಮೋಕ್ಷವನ್ನು ಬೋಧಿಸುತ್ತದೆಂದು ಸಮಾಧಾನವನ್ನು ಹೇಳಿ ಇಲ್ಲಿಯೂ ಆನಂದ ತಾರತಮ್ಯವು ಹೇಳಲ್ಪಡಲಿಲ್ಲವೆಂದುಪದೇಶಿಸುತ್ತಾರೆ. ಆದಕ್ಕಾಗಿ ಭಾಗವತ ಪ್ರಮಾಣವನ್ನು ಉದಾಹರಿಸುತ್ತಾರೆ.

**ಸಾಲೋಕ್ಯಾದಿಗಳಿಗೆ ಮುಕ್ತತ್ವವೆಂದು ಹೇಳೋಣವು ಔಪಚಾರಿಕವು.**

---

೩. **ಶ್ರೀ ವಿಷ್ಣುಲೋಕಾದಿಗಳಿಲೆ**-ವಿಷ್ಣುವವು ಹಿಂದೆ ಶ್ರೀಮನ್ನಾರಾಯಣನ ಪ್ರಥಮಾವತಾರವೆಂದು ಹೇಳಲ್ಪಟ್ಟಿತು, ಆತನ ಲೋಕಕ್ಕೆ ವಿಷ್ಣುಲೋಕವೆಂದು ಹೆಸರು, ಇಲ್ಲಿ ಆದಿ ಶಬ್ದದಿಂದ ಸತ್ಯಲೋಕ, ಕೈಲಾಸ ಮೊದಲಾದವುಗಳು ಹೇಳ

**ಪೆತ್ತಾರ್ಕ್ಕು ಮುಕ್ತ್ಯವ್ಯಪದೇಶವ್ ಅದೂರ ವಿಪ್ರಕರ್ಷತ್ತಾಲೆ ಯಾ**

---

ಲ್ಪಟ್ಟವು, ಇಂತಹ ಲೋಕಗಳಲ್ಲಿ, **ಸಾಲೋಕ್ಯ** - ಆ ಲೋಕಾಧಿಪರ ಲೋಕ ಗಳಲ್ಲಿರುವದು, **ಸಾರೂಪ್ಯ** - ಆ ಲೋಕಾಧಿಪರ ರೂಪವನ್ನು ತಾಳುವದು, ಆದಿ ಶಬ್ದದಿಂದ ಸಾಮೀಪ್ಯವು ಹೇಳಲ್ಪಟ್ಟಿತು, ಅವರ ಸಮೀಪದಲ್ಲಿರುವದು, **ಮಾತ್ರ ಮ್** - ಇಷ್ಟು ಮಾತ್ರವನ್ನೇ, **ಪೆತ್ತಾರ್ಕ್ಕು** - ಹೊಂದಿದವರಿಗೆ, **ಮುಕ್ತ್ಯವ್ಯಪ ದೇಶವ್** - ಅವರನ್ನು ಮುಕ್ತರೆಂದು ಹೇಳೋಣವು, **ಅದೂರವಿಪ್ರಕರ್ಷತ್ತಾಲೆ ಯಾಮತ್ತನ್ಯೆ** ಮೋಕ್ಷಕ್ಕೆ ತುಂಬಾ ದೂರವಿಲ್ಲದೆ ಇರುವದೇನು, ಹತ್ತಿರದಲ್ಲೇ ಇರುವದೇನು, ಇವುಗಳಿಂದುಂಟಾಗುವ ವ್ಯತ್ಯಾಸವೇ ವಿನಾ ಬೇರೆಯಲ್ಲವು. ಅವರು ಗಳು ಮುಕ್ತರು ಎಂದಿಗೂ ಅಲ್ಲವು ಮೋಕ್ಷಕ್ಕೆ ಸಮೀಪದಲ್ಲೇ ಅವರುಗಳು ಇರು ವವರಾಗಿ ಅಲ್ಲಿಂದ ಹೋಗಿ ಪರಮಪದವನ್ನು ಸೇರುವವರು ಎಂಬರ್ಥವು. ಈ ಸಾಲೋಕ್ಯ, ಸಾರೂಪ್ಯ, ಸಾಮೀಪ್ಯವೆಂಬ ಸ್ಥಿತಿಯು ಪರಮಪದದಲ್ಲೇ ಇರುವ ಅವಸ್ಥೆಗಳನ್ನು ಬೋಧಿಸಿದರೆ, ಆಗ ಆನಂದದಲ್ಲಿ ತಾರತಮ್ಯವನ್ನು ಒಂದು ವೇಳೆ ಹೇಳಬಹುದು. ಕೆಲವರು ಹೀಗೆ ಭಾವಿಸಿ ಆನಂದ ತಾರತಮ್ಯ ಉಂಟೆಂದು ಅಂಗೀಕರಿಸುವರು; ಇದು ಶುದ್ಧ ತಪ್ಪಾದಭಿಪ್ರಾಯವೆಂದು ತಿಳಿಸುವದಕ್ಕಾ ಗಿಯೇ, ಶ್ರೀ ವಿಷ್ಣು ಲೋಕಾದಿಗಳಲೇ **ಸಾಲೋಕ್ಯ ಸಾರೂಪ್ಯ** ವೆಂಬ ಪ್ರಯೋಗವು **ಮಾತ್ರ ಪೆತ್ತಾರ್ಕ್ಕು** ಎಂದು ಏಕೆ ಪ್ರಯೋಗಿಸಿರುತ್ತಾರೆಂದರೆ, **ಸಾಯುಜ್ಯವನ್ನು** ಹೊಂದಿದರೆ, ಈ ಸಾಲೋಕ್ಯಾದಿಗಳೂ ಪ್ರಾಪ್ತವಾಗುತ್ತವೆ, ಆದುದರಿಂದ, ಸಾಲೋಕ್ಯ ಮಾತ್ರ ಸಾರೂಪ್ಯ ಮಾತ್ರ ಹೊಂದಿದವರಿಗೆ ಎಂದು ಹೇಳಿರುತ್ತಾರೆ. ಸ್ವರ್ಗಾದಿ ಲೋಕಪ್ರಾಪ್ತಿಗಳ ಹಾಗೆ ಈ ವಿಷ್ಣುಲೋಕಪ್ರಾಪ್ತಿ ಯಲ್ಲವು; ವಿಷ್ಣುಲೋಕ, ಸತ್ಯಲೋಕಗಳಿಂದ ಪರಮಪದಕ್ಕೇನೇ ಹೋಗು ವರು. ಸ್ವರ್ಗಾದಿ ಲೋಕಗಳನ್ನು ಸೇರಿದವರು **"ಕ್ಷೀಣೇ ಪುಣ್ಯೇ ಮರ್ತ್ಯ ಲೋಕಂ ವಿಶಂತಿ"** ಎಂದು ಹೇಳಿರುವ ಹಾಗೆ ಈ ಲೋಕಕ್ಕೇ ಬರುವರು. ಆದುದರಿಂದ ಸ್ವರ್ಗಾದಿ ಲೋಕಗಳಲ್ಲಿ ಸಾಲೋಕ್ಯಾದಿಗಳು, ಪರಮಪದದಿಂದ ದೂರವಾಗಿರುವುವು; ಆದರೆ ವಿಷ್ಣುಲೋಕಾದಿಗಳ ಸಾಲೋಕ್ಯಾದಿಗಳು ಹಾಗ ಲ್ಲವು, ಆದುದರಿಂದ **ಅದೂರ ವಿಪ್ರಕರ್ಷತ್ತಾಲೆಯಾಮ್** ಎಂದು ಹೇಳಿರುತ್ತಾರೆ. **ಅತ್ತನ್ಯೆ** - ಎಂದು ಹೇಳಿದುದರಿಂದ ಅವುಗಳೆಂದಿಗೂ ಮುಕ್ತಿಪ್ರಭೇದಗಳಲ್ಲವು. ಹೀಗೆ ಮುಕ್ತಿಗೆ ಸನ್ನಿಹಿತವಾದುದರಿಂದ ಮುಕ್ತಿ ಎಂಬ ಶಬ್ದವು ಇಲ್ಲಿ ಔಪಚಾ ರಿಕವು, ವಾಸ್ತವವಲ್ಲವು. **ಅದೂರ** ಆದರೆ ಪರಸ್ಪರ ಸಂಬಂಧವಿರುವದರಿಂದ

**ಮುತ್ತನ್ಯೈ. ಇವ್ವರ್ಥಮ್, (೧) "ಲೋಕೇಷು ವಿಷ್ಣೋ ರ್ನಿವಸಂತಿ ಕೇಚಿತ್ಸಮೀಪ ಮೃಚ್ಛಂತಿ ಚ ಕೇಚಿದನ್ಯೇ । ಅನ್ಯೇತು ರೂಪಂ ಸದೃಶಂ ಭಜಂತೇ ಸಾಯುಜ್ಯಮನ್ಯೇ ಸತು ಮೋಕ್ಷ ಉಕ್ತಃ ॥" ಎನ್ರು ನಿಯಮಿಕ್ಕೈಯಾಲೇ ಸಿದ್ಧಮ್.**

ಸಾಧರ್ಮ್ಯವು ಉಂಟಾಗುತ್ತದೆ. ವಿಪ್ರಕರ್ಷವಿದ್ದರೆ ಅಂತಹ ಪರಸ್ಪರ ಸಂಬಂಧವಿಲ್ಲದಿರುವದರಿಂದ ಸಾಧರ್ಮ್ಯವಿಲ್ಲವು. ವಿಪ್ರಕರ್ಷವು ಶಾಸ್ತ್ರಗಳಲ್ಲಿ ಮೂರು ವಿಧವೆಂದು ಹೇಳಲ್ಪಟ್ಟಿರುತ್ತದೆ; (೧) ದೇಶವಿಪ್ರಕರ್ಷ, (೨) ಸ್ವಭಾವ ವಿಪ್ರಕರ್ಷ, (೩) ಕಾಲವಿಪ್ರಕರ್ಷ. **ದೇಶವಿಪ್ರಕರ್ಷಕ್ಕೆ ಉದಾಹರಣೆಯು ಜಲಾರ್ಕವು.** ಸೂರ್ಯನು ನೀರಿನಲ್ಲಿ ಪ್ರತಿಫಲಿಸಿದ್ದರೂ ನೀರಿನಲ್ಲಿರುವ ದೋಷಚಲನಾದಿಗಳಿಂದ ಸ್ಪರ್ಶಿಸಲ್ಪಡುವದಿಲ್ಲವು. ಸ್ವಭಾವ ವಿಪ್ರಕರ್ಷಕ್ಕೆ ಉದಾಹರಣೆಯು ಘಟಾಕಾಶಾದಿಗಳು. ಬಿಂದಿಗೆ ಚೊಂಬುಗಳಲ್ಲಿ ಆಕಾಶವಿದ್ದರೂ, ವೃದ್ಧಿ ಹ್ರಾಸರೂಪಗುಣಗಳಿಂದ ಆಕಾಶಕ್ಕೆ ಸ್ಪರ್ಶವಿಲ್ಲವು. ಕಾಲವಿಪ್ರಕರ್ಷಕ್ಕೆ ಉದಾಹರಣೆಯು ನಿತ್ಯವಿಭೂತಿಜ್ಞಾನ ಮೊದಲಾದವುಗಳು, ಕಾಲವ್ಯತ್ಯಾಸವು ಇವುಗಳನ್ನು ಸ್ಪರ್ಶಿಸುವದಿಲ್ಲವು. ಈ ಅಭಿಪ್ರಾಯಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ:— **ಕೇಚಿತ್** - ಕೆಲವರು ಭಾಗವತರು, ವಿಷ್ಣೋಃ - ವಿಷ್ಣುವಿನ. **ಲೋಕೇಷು** - ಲೋಕಗಳಲ್ಲಿ, **ನಿವಸಂತಿ** - ವಾಸಮಾಡುವರು, ವಿಷ್ಣೋಃ - ಎಂಬುವದನ್ನು ಎಲ್ಲಾದಕ್ಕೂ ಅನ್ವಯಿಸತಕ್ಕದ್ದು. **ಕೇಚಿದನ್ಯೇ** - ಇನ್ನು ಕೆಲವರು, ವಿಷ್ಣುವಿನ **ಸಮೀಪಂ** - ಸಮೀಪವನ್ನು, **ಋಚ್ಛಂತಿ** - ಹೊಂದುತ್ತಾರೆ. **ಅನ್ಯೇತು** ಇನ್ನು ಕೆಲವರಾದರೋ ವಿಷ್ಣುವಿನ, **ಸದೃಶಂ ರೂಪಂ** - ಸಮಾನವಾದ ಶರೀರವನ್ನು, **ಭಜಂತೇ** - ಹೊಂದುವರು; **ಅನ್ಯೇ** - ಇನ್ನು ಕೆಲವರು, **ಸಾಯುಜ್ಯಮ್** - ಜೊತೆಯಲ್ಲಿರುವವರಾಗಿ ಸಮಾನವಾದ ಭೋಗವನ್ನು ಹೊಂದುವರು, **ಸತು** - ಅಂತಹ ಸಾಯುಜ್ಯವಾದರೋ, **ಮೋಕ್ಷ ಉಕ್ತಃ** - ಮೋಕ್ಷವೆಂದು ಹೇಳಲ್ಪಡುವದು; ಮೋಕ್ಷವೆಂದು ಹೇಳಿದುದರಿಂದ, ಸಾಯುಜ್ಯವೆಂಬುದು ಪರಮಪದದಲ್ಲಿ ಉಂಟಾಗುವ ಸಮಾನ ಭೋಗಾನುಭವವನ್ನು ಸೂಚಿಸುತ್ತದೆಂದು ತಿಳಿಯತಕ್ಕದ್ದು. **ಎನ್ರು** - ಎಂಬದಾಗಿ, **ನಿಯಮಿಕ್ಕೈಯಾಲೆ ಸಿದ್ಧಮ್** - ನಿಯಮಿಸೋಣದರಿಂದ, ಪ್ರಮಾಣವಾಗಿ ವಿಧಿಸಿರುವದರಿಂದ ಈ ಮೇಲಿನ ಅಭಿಪ್ರಾಯವು ಸಿದ್ಧವಾದುದು ಎಂದರೆ ವ್ಯವಸ್ಥಿತವಾದುದು; ಯಾವ ಅಭಿಪ್ರಾಯ

(೧) ಭಾಗವತ.

## ಸಾಯುಜ್ಯಸ್ಯೈವ ಮೋಕ್ಷಶಬ್ದಾರ್ಥತ್ವ ಕಥನಂ

**ಇದು ಪರಮಪದತ್ತಿಲೆ ಶೆನ್ರಾಲ್ ವರುಮ್ ಸಾಯುಜ್ಯಮೇ ಮೋಕ್ಷಮೆನ್ನಿರದು.**

---

ವೆಂದರೆ ಉಭಯ ವಿಭೂತಿ ವಿಶಿಷ್ಟ ಪರಬ್ರಹ್ಮಾನುಭವರೂಪವಾದ ಸಾಯುಜ್ಯವು, ಕ್ಷೀರಾಬ್ಧಿ ವಿಷ್ಣು ಲೋಕಾದಿಗಳಲ್ಲಿ ಉಂಟಾಗದೆ ಇರುವುದರಿಂದ, ಇದು ಮುಕ್ತಿಯಾಗದು, ಪರಮಪದದಲ್ಲಿ ಮುಕ್ತಿಯು ಉಭಯ ವಿಭೂತಿ ವಿಶಿಷ್ಟ ಪರಬ್ರಹ್ಮಾನುಭವವನ್ನುಂಟುಮಾಡುವುದರಿಂದ, ಅಂತಹ ಮುಕ್ತಿಯೇ ಸಾಯುಜ್ಯವೆಂದು ಹೇಳಲ್ಪಡುತ್ತದೆಂದು ಗ್ರಹಿಸತಕ್ಕದ್ದಾಗಿರುತ್ತದೆ ಇಂತಹ ವೈಲಕ್ಷಣ್ಯವು ಸಾಯುಜ್ಯಕ್ಕೆ ಉಂಟೆಂದು ತಿಳಿಸುವುದಕ್ಕಾಗಿಯೇ. ಸತು - ಎಂಬಲ್ಲಿ ತು ಶಬ್ದಪ್ರಯೋಗವು. **ಸತು ಮೋಕ್ಷಃ** ಎಂದರೆ ಸ ಏವ **ಮೋಕ್ಷಃ**, ಅದೇ ಮೋಕ್ಷವು, ಮಿಕ್ಕವಲ್ಲವೆಂಬರ್ಥವು.

ಆದರೆ ಸಾಯುಜ್ಯವು ಈ ಮೇಲೆ ಹೇಳಿದ **ಲೋಕಗಳಲ್ಲೇ** ಪ್ರಾಪ್ತವಾದರೆ **ಅದೂ** ಕೂಡ ಮೋಕ್ಷವೆಂದೇ ಏಕೆ ಅರ್ಥ ಮಾಡಕೂಡದು ಎಂದಾಕ್ಷೇಪಿಸಿದರೆ, ಅಲ್ಲಿನ ಸಾಯುಜ್ಯಕ್ಕೆ **ಉಭಯ** ವಿಭೂತಿ ವಿಶಿಷ್ಟ **ಪರಮಾತ್ಮಾನುಭವ**ವಿಲ್ಲವಾದುದರಿಂದ ಮೋಕ್ಷವಾಗುವದಿಲ್ಲವೆಂದೂ, ಈ ಸಾಯುಜ್ಯವು ಪರಮಪದದಲ್ಲುಂಟಾದರೇನೆ, ಸಾಯುಜ್ಯವು ಮೋಕ್ಷವಾಗುತ್ತದೆಂದೂ ಮುಂದಿನ ವಾಕ್ಯದಿಂದ **"ಇದು ಪರಮಪದತ್ತಿಲೇ"** ಎಂದಾರಂಭಿಸಿ ಸಮಾಧಾನವನ್ನು ಹೇಳುತ್ತಾರೆ.

**ಸಾಯುಜ್ಯಕ್ಕೆ ಮಾತ್ರವೇ ಮೋಕ್ಷವೆಂಬ ಹೇಳಿಕೆಯು ಸಲ್ಲುತ್ತದೆ.**

---

**ಇದು** - ಎಂಬುದಕ್ಕೆ **"ಲೋಕೇಷು ವಿಷ್ಣೋಃ"** ಎಂಬ ಶ್ಲೋಕವೆಂದು ಸಾರದೀಪಿಕೆಯವರು ವ್ಯಾಖ್ಯಾನ ಮಾಡಿರುತ್ತಾರೆ ಸಾರಾಸ್ವಾದಿನೀಯವರು **"ಸತು ಮೋಕ್ಷ ಉಕ್ತಃ"** ಎಂಬ ವಚನವೆಂದು ಅರ್ಥ **ಮಾಡಿ**ರುತ್ತಾರೆ. **ಮೋಕ್ಷವು** ಪ್ರಕರಣವಾದುದರಿಂದ, ಈ ಎರಡನೇ ಅಭಿಪ್ರಾಯವೇ ಯುಕ್ತವಾಗಿ ತೋರುತ್ತದೆ. **ಪರಮಪದತ್ತಿಲೆ ಶೆನ್ರಾಲ್** - ಪರಮಪದದಲ್ಲಿ **ಸೇರಿದರೆ** ಅಥವಾ ಅನ್ವಯಿಸಿದರೆ, **ವರುಮ್ ಸಾಯುಜ್ಯಮ್** - ಉಂಟಾಗುವ ಸಾಯುಜ್ಯವನ್ನೇ, **ಮೋಕ್ಷಮೆನ್ನಿರದು** - ಮೋಕ್ಷವೆಂದು ಹೇಳತಕ್ಕದ್ದು ; ಸಾಲೋಕ್ಯ, ಸಾರೂಪ್ಯ, ಸಾಮೀಪ್ಯಗಳಿಂದ ವ್ಯಾವೃತ್ತವಾದ **ಪರಮಪದದಲ್ಲಿ ಪ್ರಾಪ್ತವಾಗುವ**

**ಅದುಕ್ಕುಳ್ಳೇ ಸಹಸ್ರತ್ತಿಲ್ ಶತಾದಿಗಳ್ಪೋಲೇ, ಸಾಲೋಕ್ಯಾದಿಗಳೆಲ್ಲಾಮ್ ಅಂತರ್ಭೂತಙ್ಗಳ್. ಆಗೈಯಾಲ್ ಅಙ್ಗೋರುವರುಕ್ಕುಮ್ ವೈಷಮ್ಯಮಿಲ್ಲೈ.**

---

ಸಾಯುಜ್ಯವೇ ಮೋಕ್ಷವೆಂಬ ಭಾವವು; "**ನಿರಂಜನಃ ಪರಮಂ ಸಾಮ್ಯಮುಪೈತಿ,**" "**ಮಮಸಾಧರ್ಮ್ಯಮಾಗತಾಃ**" ಇತ್ಯಾದಿ ಪ್ರಮಾಣಾನುಸಾರ ಪರಮಪದ ಪ್ರಾಪ್ತಿಯಲ್ಲಿ ಉಂಟಾಗುವದು ಸಾಯುಜ್ಯ ಶಬ್ದ ಬೋಧಿತವೇ ವಿನಾ, ಮಿಕ್ಕ ಮೂರು ಶಬ್ದಗಳೂ ಅದನ್ನು ಬೋಧಿಸಲಾರವು. ಈ ಅಭಿಪ್ರಾಯವು, **ಪರಮಪದತ್ತಿಲೆ ವರುಮ್ ಸಾಯುಜ್ಯಮೋ** ಎಂಬ ಪ್ರಯೋಗದಿಂದ ವ್ಯಕ್ತವು. ಇತರ ಲೋಕಗಳಲ್ಲಿ ಉಂಟಾಗುವ ಸಾಲೋಕ್ಯಾದಿಗಳು ಆ ಕಾರಣದಿಂದ ಎಂದಿಗೂ ಮುಕ್ತಿ ಶಬ್ದದಿಂದ ಹೇಳಲು ಯೋಗ್ಯವಲ್ಲವು. ಒಂದು ವೇಳೆ ಹಾಗೆ ಪ್ರಯೋಗವಿದ್ದುದಾದರೆ ಔಪಚಾರಿಕವೆಂದು ಭಾವಿಸತಕ್ಕದ್ದು. ಆದುದರಿಂದ ಪರಮಪದದಲ್ಲಿ ಸಾಯುಜ್ಯವೇ ಯಾವಾಗ ಉಂಟಾಯಿತೋ, ಆಗ ಮಿಕ್ಕ ಮೂರೂ ಅದರಲ್ಲೇ ಅಂತರ್ಗತಗಳಾಗಿ, ಸಾಲೋಕ್ಯವೂ, ಸಾರೂಪ್ಯವೂ, ಸಾಮೀಪ್ಯವೂ ಪ್ರಾಪ್ತವಾಗುತ್ತವೆಂಬ ಭಾವವು. ಪರಮಪದದಲ್ಲೇ ಸಾಲೋಕ್ಯ ಮಾತ್ರವೇ, ಸಾರೂಪ್ಯ ಮಾತ್ರವೇ, ಸಾಮೀಪ್ಯ ಮಾತ್ರವೇ ಉಂಟೆಂದೂ, ಆ ಕಾರಣದಿಂದ ಆನಂದ ತಾರತಮ್ಯ ಉಂಟೆಂದೂ, ಹೇಳುವಭಿಪ್ರಾಯವು ಸರ್ವಾತ್ಮನಾ ಶ್ರುತಿಸ್ಮೃತ್ಯಾದಿ ಪ್ರಮಾಣವಚನ ವಿರುದ್ಧವೆಂದು ಭಾವಿಸತಕ್ಕದ್ದು. ಆದುದರಿಂದ ಪರಮಪದದಲ್ಲಿ ಉಂಟಾಗುವ ಸಾಯುಜ್ಯದಲ್ಲೇ ಸಾಲೋಕ್ಯಾದಿಗಳೆಲ್ಲಾ ಅಡಗಿವೆ ಎಂದೂ, ಆನಂದ ತಾರತಮ್ಯದಿಂದುಂಟಾಗುವ ವೈಷಮ್ಯಕ್ಕೆ ಕಾರಣವೇ ಇಲ್ಲವೆಂದೂ ಮುಂದಿನ ವಾಕ್ಯಗಳಿಂದ ಸಿದ್ಧಾಂತಿಸಿ ಉಪದೇಶಿಸುತ್ತಾರೆ:—

**ಅದುಕ್ಕುಳ್ಳೇ** – ಆ ಪರಮಪದದಲ್ಲಿ ಲಭಿಸುವ ಸಾಯುಜ್ಯದಲ್ಲೇ, **ಸಹಸ್ರತ್ತಿಲ್ ಶತಾದಿಗಳ್ಪೋಲೇ** - ಸಾವಿರ ಸಂಖ್ಯೆಯಲ್ಲಿ ನೂರು ಇನ್ನೂರು ಮುನ್ನೂರು ಮೊದಲಾದ ಸಂಖ್ಯೆಗಳು ಹೇಗೆ ಅಡಗಿವೆಯೋ ಹಾಗೆ, **ಸಾಲೋಕ್ಯಾದಿಗಳೆಲ್ಲಾಮ್** - ಸಾಲೋಕ್ಯ, ಸಾರೂಪ್ಯ, ಸಾಮೀಪ್ಯಗಳೆಲ್ಲವೂ, **ಅಂತರ್ಭೂತಙ್ಗಳ್** - ಅಡಗಿರುವವು. ಯಾವಾಗ ಸಾಯುಜ್ಯವೇ ಪ್ರಾಪ್ತವಾಯಿತೋ ಆಗ ಪರಮಾತ್ಮನ ಲೋಕದಲ್ಲೇ ಇರುವದು, ಆತನ ಹಾಗೆ ಚತುರ್ಭುಜ, ಶಂಖ ಚಕ್ರಾದಿಗಳುಳ್ಳ ಸಮಾನವಾದ ದಿವ್ಯಮಂಗಳ ವಿಗ್ರಹ ಪ್ರಾಪ್ತಿಯೂ, ಹಾಗೆಯೇ ಆತನ ಸಮೀಪದಲ್ಲಿರೋಣವೂ ಎಲ್ಲವೂ ಸಿದ್ಧಿಸುತ್ತವೆಂಬ ಭಾವವು. **ಆಗೈಯಾಲ್** -

(೧) "ಮೋಕ್ಷಮ್ ಸಾಲೋಕ್ಯ ಸಾರೂಪ್ಯಂ ಪ್ರಾರ್ಥಯೇ ನ ಕದಾಚನ। ಇಚ್ಛಾಮ್ಯಹಂ ಮಹಾಬಾಹೋ ಸಾಯುಜ್ಯಂ ತವ ಸುವ್ರತ ॥" ಎಙ್ಗರ ಎಡತ್ತಿಲುಮ್ ಇನ್ನರ್ಥಮ್ ಕಂಡುಕೊಳ್ವದು.

---

ಆ ಕಾರಣದಿಂದ, ಅಙ್ಗೇ - ಪರಮಪದದಲ್ಲಿ, ಒರುವರುಕ್ಕುಮ್ - ಯಾರೊಬ್ಬರಿಗೂ, ವೈಷಮ್ಯಮಿಲ್ಲೈ-ಆನಂದದಲ್ಲಿ ವ್ಯತ್ಯಾಸವಿಲ್ಲವು, ಎಂದರೆ ಮುಕ್ತರೆಲ್ಲರೂ ಆನಂದದಲ್ಲಿ ಪರಸ್ಪರ ಸಮರು ಎಂಬ ಭಾವವು. ಅಥವಾ ಎಲ್ಲರಿಗೂ ಸಮವಾದ ಆನಂದವಾದುದರಿಂದ ಯಾರಿಗೂ ವೈಷಮ್ಯವಿಲ್ಲವೆಂದೂ ಅರ್ಥ ಹೇಳಬಹುದು. ಅಥವಾ ಪರಮಪದದಲ್ಲಿ ಯಾರೊಬ್ಬರಿಗೂ ಎಂದು ಹೇಳಿದುದರಿಂದ ಪರಮಾತ್ಮನಿಗೂ ಕೂಡ, ವೈಷಮ್ಯಮಿಲ್ಲೈ - ಒಬ್ಬರಿಗೆ ಹೆಚ್ಚಾದ ಆನಂದವನ್ನೂ, ಇನ್ನೊಬ್ಬರಿಗೆ ಕಮ್ಮಿ ಆನಂದವನ್ನೂ ಕೊಡುವ ವೈಷಮ್ಯವಿಲ್ಲವು ಎಂಬರ್ಥವೂ ಸೂಚಿತವು.

ಆದರೆ ಜಿತಂತಾ ಸ್ತೋತ್ರದ "ಮೋಕ್ಷಂ ಸಾಲೋಕ್ಯ ಸಾರೂಪ್ಯಂ" ಎಂಬ ಶ್ಲೋಕದಲ್ಲಿ ಸಾಲೋಕ್ಯ ಸಾರೂಪ್ಯಾದಿಗಳು ಮೋಕ್ಷಪ್ರಭೇದಗಳೆಂದೂ, ಅಂತಹ ಮೋಕ್ಷಗಳು ಬೇಡವೆಂದೂ, ಸಾಯುಜ್ಯ ರೂಪ ಮೋಕ್ಷವೇ ಅಪೇಕ್ಷಿತವೆಂದೂ ಹೇಳಿರುತ್ತದೆಯಲ್ಲಾ ಎಂದರೆ, ಆ ಶ್ಲೋಕಕ್ಕೆ ಈ ಮೇಲಿನರ್ಥವಲ್ಲವೆಂದೂ, ಆ ಶ್ಲೋಕವೂ ಕೂಡ ಈ ಮೇಲೆ ಉಪಪಾದಿಸಲ್ಪಟ್ಟ ಅಭಿಪ್ರಾಯವನ್ನೇ ಸಮರ್ಥನೆ ಮಾಡುತ್ತದೆಂದೂ, ತಿಳಿಸುತ್ತಾರೆ ಮೋಕ್ಷಂ ಸಾಲೋಕ್ಯ ಸಾರೂಪ್ಯಂ - ಇತರ ಲೋಕಾದಿಗಳಲ್ಲುಂಟಾಗುವ ಸಾಲೋಕ್ಯ ಸಾರೂಪ್ಯ ಸಾಮೀಪ್ಯವೆಂಬ ಔಪಚಾರಿಕ ಮೋಕ್ಷವು, ಅಥವಾ ಸಾಲೋಕ್ಯಾದಿ ರೂಪ ಮೋಕ್ಷವು ಪರಮಪದದಲ್ಲೇ ಒಂದು ವೇಳೆ ಇದ್ದುದಾದರೆ ಎಂದಾಗಲಿ ಅರ್ಥ ಮಾಡಬಹುದು; ಸಾಲೋಕ್ಯಾದಿಗಳು ಪರಮಪದದಲ್ಲಿ ಇಲ್ಲವು, ಒಂದು ವೇಳೆ ಅವು ಇದ್ದುದಾದರೆ ಎಂದಾಗಲಿ ಅರ್ಥ ಮಾಡಬಹುದು. ಮೊದಲನೆಯ ಅರ್ಥವೇ ಸ್ವಾರಸ್ಯವಾದುದು ಕದಾಚನ - ಎಂದಿಗೂ, ನ ಪ್ರಾರ್ಥಯೇ - ನಾನು ಪ್ರಾರ್ಥಿಸುವದಿಲ್ಲವು, ಹೇ ಸುವ್ರತ - "ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ । ಅಭಯಂ ಸರ್ವ ಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ ॥" ಎಂದರೆ ನಿನ್ನವನಯ್ಯಾ ರಕ್ಷಿಸು ಎಂದು ಹೇಳಿ ಒಂದು ಸಲ ಶರಣಾಗತಿ ಮಾಡಿದರೆ ಸರ್ವ ಚೇತನರಿಗೂ ಅಭಯವನ್ನು ಕೊಡುತ್ತೇನೆಂಬುವದೇ ತನ್ನ

---

(೧) ದ್ವಿತೀಯ ಜಿತಂತಾ ೩೬.

## ಸಾಯುಜ್ಯ ಶಬ್ದಸ್ಯ ನಿಷ್ಕರ್ಷಾರ್ಥಃ

**ಸಾಯುಜ್ಯಮಾವದು ? ಸಯುಕ್ಕಿನುಡೈಯ ಭಾವಮ್. ಸಯುಕ್ಕಾ ವಾನೊರು ಭೋಗ್ಯತ್ತಿಲೆ ಭೋಕ್ತಾವಾಯ್‌ಕ್ಕೊಣ್ಡು ಕೂಡ ವನ್ವಯಿಕ್ಕು ಮವರ್. ಇಙ್ಗು ಸಪ್ರಕಾರ ಬ್ರಹ್ಮಮಾಗಿರ ಭೋಗ್ಯತ್ತಿಲೆ ಬ್ರಹ್ಮಮುಮ್**

---

ಸನಾತನವಾದ ವ್ರತವೆಂದು ಭಾವಿಸಿರುವ ಸರ್ವೇಶ್ವರನೇ, **ಹೇ ಮಹಾ ಬಾಹೋ** - ಓ ಆಜಾನುಬಾಹುವುಳ್ಳವನೇ, ಸಂಸಾರಸಾಗರದಲ್ಲಿ ಮುಳುಗಿರುವ ವರನ್ನು ಎತ್ತಿ ಉದ್ಧಾರ ಮಾಡುವದಕ್ಕಾಗಿ ದೀರ್ಘವಾದ ಬಾಹುಗಳುಳ್ಳವನೇ, **ಅಹಂ** - ನಾನು, **ತವ ಸಾಯುಜ್ಯಮ್** - ನಿನ್ನ ಸಾಯುಜ್ಯರೂಪ ಮೋಕ್ಷವನ್ನು, **ಇಚ್ಛಾಮಿ** - ಅಪೇಕ್ಷಿಸುತ್ತೇನೆ," **ಎಙ್ಗಿರ ವಿಡತ್ತಿಲುಮ್** - ಎಂದು ಹೇಳಿರುವ ಸ್ಥಳದಲ್ಲೂ, ಪ್ರಮಾಣದಲ್ಲೂ, **ಇವ್ವರ್ಥಂ** - ಈ ಅಭಿಪ್ರಾಯವನ್ನೇ, **ಕಂಡು ಕೊಳ್ವದು** - ತಿಳಿದುಕೊಳ್ಳುವದು.

ಸಾಯುಜ್ಯವೇ ಮೋಕ್ಷವೆಂದು ಹೇಳಲ್ಪಟ್ಟಿತು. ಅದರ ನಿಷ್ಕರ್ಷಾರ್ಥವೇ ನೆಂದು ತಿಳಿಸುತ್ತಾರೆ ಇದೂ ಅಲ್ಲದೆ, ಮೋಕ್ಷ ವಿಷಯದಲ್ಲಿ ದ್ವೈತಿಗಳ ಆನಂದ ತಾರತಮ್ಯವು ಸರಿಯಲ್ಲವೆಂದು ತಿಳಿಸಿದುದರಿಂದ, ಅದ್ವೈತಿಯು ತನ್ನ ಸ್ವರೂ ಪೈಕ್ಯರೂಪ ಮೋಕ್ಷವೇ ಸರಿಯಾದಭಿಪ್ರಾಯವೆಂದು ಭಾವಿಸಿ, ಸಾಯುಜ್ಯವೆಂದರೆ ಪರಮಾತ್ಮ ಸ್ವರೂಪದಲ್ಲಿ ಐಕ್ಯವೆಂದು ಹೇಳಬಹುದೆಂಬಭಿಪ್ರಾಯದಿಂದಲೂ ಸಾಯುಜ್ಯಶಬ್ದದ ಸರಿಯಾದ ಅರ್ಥವನ್ನು ತಿಳಿಸುತ್ತಾರೆ :—

## ಸಾಯುಜ್ಯ ಶಬ್ದದ ನಿಷ್ಕರ್ಷವಾದ ಅರ್ಥವು.

**ಸಾಯುಜ್ಯಮಾವದು** - ಸಾಯುಜ್ಯವೆಂಬುವದು ಯಾವುದು ? ಸಾಯುಜ್ಯ ವೆಂದರೇನು ಎಂಬುವದು ಪ್ರಶ್ನೆಯು. **ಸಯುಕ್ಕಿನುಡೈಯ ಭಾವಮ್** - ಒಂದು ವಸ್ತುವನ್ನು ಇಬ್ಬರು ಅನುಭವಿಸಿದರೆ ಅವರಿಬ್ಬರಿಗೂ ಸಯುಕ್ಕೆಂದು ಹೆಸರು, ಅಂತವರ ಭಾವಕ್ಕೆ ಸಾಯುಜ್ಯವೆಂದು ಹೇಳುತ್ತಾರೆ. ಅದನ್ನೇ ಮುಂದೆ ವಿವರಿಸಿ ಹೇಳುತ್ತಾರೆ. **ಸಯುಕ್ಕಾವಾನ್** - ಸಯುಕ್ಕಾದವನು, **ಒರು ಭೋಗ್ಯತ್ತಿಲೆ** - ಒಂದು ಭೋಗ್ಯವಾದುದರಲ್ಲಿ, **ಭೋಕ್ತಾವಾಯ್‌ಕ್ಕೊಂಡು** – ಅನುಭವಿಸುವ ನಾಗಿ, **ಕೂಡ** - ಆ ಭೋಗ್ಯವಸ್ತುವಿನೊಂದಿಗೆ, **ಅನ್ವಯಿಕ್ಕುಮವನ್** - ಸಂಬಂ ಧಿಸಿಕೊಂಡಿರುವವನು. ಹೀಗೆ ಸಾಧಾರಣವಾಗಿ ಹೇಳಿ, **ಇಙ್ಗು** - **ಈ ಸಂದರ್ಭ**

**ಮುಕ್ತನುಮ್‌ಕೂಡ, ಭೋಕ್ತಾಕ್ಕಳಾಯ್ ಅನ್ವಯಿಕ್ಕೈಯಾಲೆ, ಮುಕ್ತನೈ ಸಯುಕ್ಕೆನ್ನಿರದು.**

---

ದಲ್ಲಿ ಎಂದರೆ ಮುಕ್ತನು ಪರಬ್ರಹ್ಮನನ್ನು ಸೇರಿ ಸಾಯುಜ್ಯವನ್ನು ಹೊಂದುವಾಗ, **ಸಪ್ರಕಾರಬ್ರಹ್ಮವಾಗಿರ**-ಸಮಸ್ತ ವಿಶೇಷಣವಿಶಿಷ್ಟನಾಗಿರುವ ಎಂದರೆ ಉಭಯ ವಿಭೂತಿನಾಥನಾಗಿ ಅನಂತ ಕಲ್ಯಾಣಗುಣಾಕರನಾಗಿರುವ ಪರಬ್ರಹ್ಮನೂ, **ಮುಕ್ತನುಮ್ ಕೂಡ** - ಮುಕ್ತನೂ ಕೂಡ, **ಭೋಕ್ತಾಕ್ಕಳಾಯ್** - ಭೋಕ್ತೃಗಳಾಗಿ, **ಅನ್ವಯಿಕ್ಕೈಯಾಲೆ** - ಸಂಬಂಧಿಸಿಕೊಂಡಿರುವದರಿಂದ, ಮುಕ್ತನನ್ನು, **ಸಯುಕ್ಕೆನ್ನಿರದು** - ಸಯುಕ್ಕೆಂಬದಾಗಿ ಹೇಳೋಣವು. ಸರ್ವೇಶ್ವರನಿಗೆ ಯಾವ ಆನಂದವೋ ಅಂತಹ ಆನಂದವೂ ಈ ಮುಕ್ತನಿಗೂ ಉಂಟಾಗತಕ್ಕದ್ದು. ಇಂತಹ ಅನುಭವದಲ್ಲಿ ಇಬ್ಬರೂ ಸಂಬಂಧಿಸಿ ಒಟ್ಟಿಗೆ ಇರಬಹುದು ಅದೂ ಅಲ್ಲದೆ ಈ ಪರಬ್ರಹ್ಮಾನುಭವವೆಂಥಾದ್ದೆಂದರೆ ಸರ್ವವಿಶೇಷಣ ವಿಶಿಷ್ಟನಾಗಿರುವ ಪರಬ್ರಹ್ಮಾನುಭವವು; ಉಭಯವಿಭೂತಿ ವಿಶಿಷ್ಟನಾಗಿ ಕಲ್ಯಾಣಗುಣಾಕರನಾಗಿ ಹೀಗೆ ಪರಿಪೂರ್ಣಬ್ರಹ್ಮಾನುಭವ ಉಂಟಾಗಿ ಆತನೊಂದಿಗೆ ಸಂಬಂಧಿಸಿದ್ದರೆ, ಆಗ ಮುಕ್ತನಿಗೆ ಸಯುಕ್ಕೆಂಬ ಹೆಸರು. ಅಂತವನ ಅನುಭವವೇ ಸಾಯುಜ್ಯವೆಂದ ಪದೇಶಿಸಿದರು. ಹೀಗೆ ಸಾಯುಜ್ಯದಲ್ಲಿ ಸಮಾನಾನುಭವವಿರುವ ಇಬ್ಬರು ಚೇತನರಿರಬೇಕಾದ ಪ್ರಯುಕ್ತ, ಮೋಕ್ಷದೆಶೆಯಲ್ಲಿ ಶಾಂಕರರು ಹೇಳುವ ಸ್ವರೂಪೈಕವು ಎಂದಿಗೂ ಕೂಡುವದಲ್ಲವೆಂದೂ, ಹಾಗೆಯೇ ಅವರುಗಳ ನಿರ್ಗುಣವಾದವೂ ಕೂಡ ಸಮಂಜಸವಾದುದಲ್ಲವೂ ಎಂಬ ಭಾವವು. ನಿರ್ಗುಣನೆಂದರೆ ಯಾವದೊಂದು ಗುಣವೂ ಇಲ್ಲದ ನಿರ್ವಿಶೇಷ ಬ್ರಹ್ಮನೆಂದು ಅರ್ಥ ಹೇಳಿದರೀಗ ಅಸಾಮಂಜಸ್ಯವು. ಆದರೆ ಪರಬ್ರಹ್ಮನು ಸಗುಣನೆಂದೂ ನಿರ್ಗುಣನೆಂದೂ ಶಾಸ್ತ್ರಗಳಲ್ಲಿ ಹೇಳಿದೆಯಲ್ಲಾ ಎಂದರೆ ಸಗುಣನೆಂದರೆ ಕಲ್ಯಾಣಗುಣ ಮಹೋದಧಿ ಎಂದೂ, ನಿರ್ಗುಣನೆಂದರೆ ಹೇಯವಾದ ಈ ಪ್ರಾಕೃತ ಗುಣಗಳ ಸಂಬಂಧವಿಲ್ಲದವನೆಂದೂ ತಿಳಿಯತಕ್ಕದ್ದು. ಮಹರ್ಷಿಯು ಶ್ರೀಮದ್ಭಾಗವತದಲ್ಲಿ ಜೀವಾತ್ಮನೇ ಇಂತಹ ಹೇಯಗುಣ ರಹಿತನೆಂದು,

**ಪ್ರಕೃತಿಸ್ಥೋಽಪಿ ಪುರುಷೋ ನಾಜ್ಯತೇ ಪ್ರಾಕೃತೈರ್ಗುಣೈಃ ।**
**ಅವಿಕಾರಾದ ಕರ್ತೃತ್ವಾನ್ನಿರ್ಗುಣತ್ವಾಜ್ಜಲಾರ್ಕವತ್ ॥**

ಎಂಬ ಶ್ಲೋಕದಲ್ಲಿ ಉಪಪಾದಿತವಾಗಿರುತ್ತದೆ. ಈ ದೇಹದಲ್ಲಿ ಶಯನಿಸಿರುವ ಜೀವಾತ್ಮನು, ಪ್ರಕೃತಿಯೊಡನೆ ಹೀಗೆ ಸೇರಿದ್ದರೂ ಕೂಡ ಈ ಪ್ರಾಕೃತ ಗುಣ

ಗಳಿಂದ ಸ್ಪರ್ಶಿಸಲ್ಪಡುವದಿಲ್ಲವು. ಏಕೆಂದರೆ, ಮೂರು ಹೇತುಗಳನ್ನು ತಿಳಿಸುತ್ತಾರೆ. ಜೀವಾತ್ಮಸ್ವರೂಪವು ಎಂದಿಗೂ ವಿಕಾರ ಹೊಂದುವದಿಲ್ಲವು, ಪ್ರಕೃತಿ ಸಂಬಂಧ ವಿಲ್ಲದೆ ಅದಕ್ಕೆ ಕರ್ತೃತ್ವವೇ ಇಲ್ಲವು, ಆ ಕಾರಣದಿಂದ ಅದು ನಿರ್ಗುಣವೆಂದು ಹೇಳುವಲ್ಲವೆಂದು ಹೇಳಿಸಿಕೊಳ್ಳುತ್ತದೆ; ಹೇಗೆಂದರೆ ? ಜಲಾರ್ಕವತ್-ತಟಾಕಾದಿ ಗಳಲ್ಲಿರುವ ಜಲದಲ್ಲಿ ಪ್ರತಿಫಲಿಸಿರುವ ಸೂರ್ಯನೋಪಾದಿಯಲ್ಲಿ; ಎಂದರೆ ತಟಾಕ ಜಲದ ಮಲಗಳಿಂದ ಸೂರ್ಯಪ್ರತಿಬಿಂಬವಾಗಲಿ ಸೂರ್ಯಕಿರಣಗಳಾಗಲಿ ಹೇಗೆ ದೂಷಿತವಾಗುವದಿಲ್ಲವೋ ಹಾಗೆಯೇ ಜ್ಞಾನಸ್ವರೂಪನಾಗಿಯೂ ಜ್ಞಾನ ಗುಣಕ ನಾಗಿಯೂ ಗುಣಾಷ್ಟಕಗಳಿಂದ ವಿರಾಜಿಸುತ್ತಿರುವ ಈ ಪರಿಶುದ್ಧನಾದ ಆತ್ಮನು ದೇಹಕ್ಕೆ ಸಂಬಂಧಪಟ್ಟ ಹೇಯಗುಣಗಳಿಂದ ಕಲುಷಿತನಾಗದಿರುವದರಿಂದ ನಿರ್ಗು ಣನೆಂದು ಹೇಳಿಸಿಕೊಳ್ಳುವನು. ಜೀವಾತ್ಮನಿಗೇನೇ ಹೇಯಗುಣಸಂಬಂಧವಿಲ್ಲ ವೆಂದು ಹೇಳಿದ ನಂತರ ಪರಮಾತ್ಮನಿಗೂ ಇಲ್ಲವೆಂಬುದು ಕೈಮುತಿಕ ನ್ಯಾಯ ಸಿದ್ಧವು. ನಿರ್ಗುಣಶಬ್ದಕ್ಕೆ ಪ್ರಾಕೃತ ಗುಣವಿಲ್ಲವೆಂಬರ್ಥವೇ ಸರಸವೇ ವಿನಾ ಶಾಂಕರಾದಿಗಳು ಹೇಳುವ ಸರ್ವಗುಣ ವಿಶೇಷಣ ಶೂನ್ಯವೆಂಬರ್ಥವು ಸಮಂಜಸ ವಾಗುವದಿಲ್ಲವು. ಏಕೆಂದರೆ, ನಿರ್ಗುಣವಾದುದು ಶ್ರುತಿಯಲ್ಲಿ ಉಪಪಾದಿಸಲಸಾ ಧ್ಯವಾದುದಾಗಿ, ಸ್ವರೂಪಶೋಧಕ ವಾಕ್ಯಗಳಿಗೆ ಶ್ರುತಿಯಲ್ಲಿ ಅವಕಾಶವೇ ಇಲ್ಲವಾ ಗುತ್ತದೆ ಪರಬ್ರಹ್ಮವನ್ನು ಕುರಿತು ಶ್ರುತಿಯು ಹೇಳುತ್ತದೆಂದು ಒಪ್ಪಿಕೊಂಡರೆ ಆಗ ಸವಿಶೇಷಣವನ್ನೂ ಒಪ್ಪಿಕೊಂಡ ಹಾಗಾಗುತ್ತದೆ. ಧರ್ಮವಿಲ್ಲದೆ ದ್ರವ್ಯವೇ ಇಲ್ಲವು ಧರ್ಮವಿಲ್ಲವೆಂದರೆ ಗಗನಕುಸುಮ, ಶಶಶೃಂಗ ಮೊದಲಾದವುಗಳ ಹಾಗೆ ಪರಬ್ರಹ್ಮಕ್ಕೂ ತುಚ್ಛತೆಯನ್ನು ಆರೋಪಿಸಿದ ಹಾಗೆ ಆಗುತ್ತದೆ.

ಆದುದರಿಂದ ಶ್ರೀ ದೇಶಿಕರವರು ಸಪ್ರಕಾರ ಬ್ರಹ್ಮವೆಂದು ಪ್ರಯೋಗಿಸಿ ರುತ್ತಾರೆ. ಆದುದರಿಂದ ಪರಬ್ರಹ್ಮನು ನಮ್ಮ ಸಿದ್ಧಾಂತ ರೀತ್ಯಾ ಸರ್ವ ವಿಶೇಷಣ ವಿಶಿಷ್ಟನು ಆದುದರಿಂದ ಆತನು ಲಕ್ಷ್ಮೀವಿಶಿಷ್ಟನಾಗಿ ಸಪತ್ನೀಕನು, ಕಲ್ಯಾಣ ಗುಣಾಕರನು, ಹೇಯಗುಣ ಸಂಬಂಧ ರಹಿತನು, ಉಭಯವಿಭೂತಿನಾಥನು, ಶುಭಾ ಶ್ರಯನು, ವಿವಿಧ ವಿಚಿತ್ರ ರೂಪಧಾರಿಯು, ಸರ್ವೈಶ್ವರ್ಯಯುಕ್ತನಾಗಿ ಪರಿಪೂರ್ಣ ಕಾಮನು, ಇಂತಹ ಪರಬ್ರಹ್ಮವೇ ಭೋಗ್ಯವಸ್ತುವು, ಅದನ್ನು ಮುಕ್ತನು ಅನು ಭವಿಸುವನು. ಈ ಆನಂದವು ಪರಬ್ರಹ್ಮಾನಂದಕ್ಕೆ ಸಮಾನವಾದುದು. ಆದುದ ರಿಂದ ಪರಬ್ರಹ್ಮವೂ ಮುಕ್ತನೂ ಸಹ ಸಯುಕ್ಕುಗಳು ಎಂದರೆ ಸಮಾನಭೋಗ ವುಳ್ಳವರು ಎಂಬ ಭಾವವು

ಹೀಗೆ ಸಾಯುಜ್ಯ ಶಬ್ದಕ್ಕೆ, ಒಂದಾದ ಭೋಗ್ಯವಸ್ತುವಿನಲ್ಲಿ ಒಬ್ಬರೊಂದಿಗೆ ಇನ್ನೊಬ್ಬರಿಗೂ ಸಮಾನವಾದ ಅನ್ವಯ ಉಂಟೆಂದು ಅರ್ಥ ಹೇಳಿದರೆ, ಶ್ರುತಿ

## ಸಾಯುಜ್ಯಾದನ್ಯದೇವಹಿ ಸಾರ್ಷ್ಟಿತ್ವಂ.

ಇಪ್ಪಡಿಯಾ (ನಾಲ್) ಕಿಲ್ ಶ್ರುತಿಯಿಲ್ ಸಾಯುಜ್ಯಶಬ್ದಮುಮ್, ಸಾರ್ಷ್ಟಿತಾ ಶಬ್ದಮುಮ್, ಶೇರ ಪ್ರಯೋಗಿಪ್ಪಾನೇ ನೆನ್ನಿಲ್ ?

**ಸಾಯುಜ್ಯಮುಭಯೋಃ ರತ್ರ ಭೋಕ್ತೃವ್ಯಸ್ಯಾ ವಿಶಿಷ್ಟತಾ ।**
**ಸಾರ್ಷ್ಟಿತಾ ತತ್ರ ಭೋಗಸ್ಯ ತಾರತಮ್ಯ ವಿಹೀನತಾ ॥೨೦॥**

---

ಯಲ್ಲಿ ಇದೇ ಅಭಿಪ್ರಾಯವು ತೋರುವ ಸಾರ್ಷ್ಟಿ ಶಬ್ದವು ಸಾಯುಜ್ಯ ಶಬ್ದದೊಂದಿಗೆ "**ಏತಾ ಸಾಮೇವ ದೇವತಾನಾಂ ಸಾಯುಜ್ಯಗ್‌ಂ ಸಾರ್ಷ್ಟಿತಾಗ್‌ಂ ಸಮಾನಲೋಕತಾಮಾಪ್ನೋತಿ**" ಎಂಬಲ್ಲಿ ಪ್ರಯೋಗಿಸಲ್ಪಟ್ಟಿರುವದರಿಂದ, ಪುನರುಕ್ತಿ ದೋಷವು ಪ್ರಾಪ್ತವಾಗುವದಿಲ್ಲವೇ ? ಸಾರ್ಷ್ಟಿತಾ ಶಬ್ದಕ್ಕಿಂತ ಬೇರೆ ಅರ್ಥವನ್ನು ಸಾಯುಜ್ಯ ಶಬ್ದಕ್ಕೆ ಕಲ್ಪಿಸಿ, ಸ್ವರೂಪೈಕ್ಯವೆಂದರ್ಥವನ್ನು ಹೇಳುವದು ಸರಿಯಲ್ಲವೋ ಎಂದರೆ, ಸಾರ್ಷ್ಟಿ ಶಬ್ದ ಸಾಯುಜ್ಯಗಳ ಸರಿಯಾದಭಿಪ್ರಾಯಗಳನ್ನು ಒಂದು ಕಾರಿಕೆಯ ಮೂಲಕ ಉಪದೇಶಿಸುತ್ತಾರೆ.

## ಸಾರ್ಷ್ಟಿತ್ವವು ಸಾಯುಜ್ಯಕ್ಕಿಂತ ಬೇರೆಯಾದುದು.

**ಇಪ್ಪಡಿಯಾಗಿಲ್** - ಸಾಯುಜ್ಯಶಬ್ದಕ್ಕೆ ಹೀಗೆ ಅರ್ಥವಾದರೆ, ಶ್ರುತಿಯಲ್ಲಿ ಸಾಯುಜ್ಯ ಶಬ್ದವನ್ನೂ ಸಾರ್ಷ್ಟಿತಾ ಶಬ್ದವನ್ನೂ, **ಶೇರ**-ಒಟ್ಟಿಗೆ, **ಪ್ರಯೋಗಿಪ್ಪಾನೇನೆನ್ನಿಲ್** - ಪ್ರಯೋಗಿಸಿರುವದು ಏತಕ್ಕೆಂದರೆ, ಅವುಗಳ ನಿಷ್ಕರ್ಷಾರ್ಥವನ್ನು ಮನಸ್ಸಿನಲ್ಲಿಡುವದು ಆವಶ್ಯಕವಾದುದರಿಂದ ಸಿದ್ಧಾಂತಿಸಿ ತಮ್ಮ ಕಾರಿಕೆಯ ಮೂಲಕ ತಿಳಿಸಿರುತ್ತಾರೆ.

**ಅತ್ರ** – ಇಲ್ಲಿ ಎಂದರೆ ಪರಮಪದದಲ್ಲಿ, **ಸಾಯುಜ್ಯಂ** - ಸಾಯುಜ್ಯವೆಂಬುದು ಯಾವುದೆಂದು, **ಉಭಯೋಃ** - ಮುಕ್ತಜೀವನಿಗೂ ಪರಮಾತ್ಮನಿಗೂ, **ಭೋಕ್ತೃವ್ಯಸ್ಯ** - ಪರಿಪೂರ್ಣ ಬ್ರಹ್ಮರೂಪವಾದ ಭೋಗ್ಯವಸ್ತುವಿನಲ್ಲಿ, **ಅವಿಶಿಷ್ಟತಾ** - ವಿಶೇಷವೇನೂ ಇಲ್ಲದಿರುವಿಕೆಯು, ಭೋಗ್ಯವಾಗಿರುವದು ಇಬ್ಬರಿಗೂ ಸಮವು ಎಂಬ ಭಾವವು. **ತತ್ರ** - ಆ ಭೋಗ್ಯವಸ್ತುವಿನಲ್ಲಿ, ಅಥವಾ ಆ ಸಂದರ್ಭದಲ್ಲಿ, **ಸಾರ್ಷ್ಟಿತಾ**-ಸಾರ್ಷ್ಟಿತಾ ಎಂಬುದು ಯಾವುದೆಂದರೆ :—**ಭೋಗಸ್ಯ**-ಭೋಗದಲ್ಲಿ, ಅನುಭವದಲ್ಲಿ, **ತಾರತಮ್ಯ ವಿಹೀನತಾ** - ತರತಮ ಭಾವವಿಲ್ಲದಿರುವಿಕೆಯು ಎಂದರೆ, ಸಾಮ್ಯವಿರೋಣವು ಸಾಯುಜ್ಯದಲ್ಲಿ ಭೋಗ್ಯವು ಇಬ್ಬರಿಗೂ

## ಮುಕ್ತಸ್ಯ ಭೋಗಮಾತ್ರೇ ಸಾಮ್ಯಂ, ಜಗದ್ವ್ಯಾಪಾರ ವರ್ಜಂ.

**ಮುಕ್ತನುಕ್ಕು ಜಗದ್ವ್ಯಾಪಾರಮಿಲ್ಲೆಯೇಯಾಗಿಲುಮ್, ಕೃಷಿಪಣ್ಣಿನ ಪಿತಾವುಮ್ ನಿರ್ವ್ಯಾಪಾರರಾನ ಪುತ್ರಾದಿಗಳುಮ್ ಕೂಡ, ಕೃಷಿಫಲತ್ತೈ**

---

ಷಮವು, ಸಾಷ್ಟಿರ್ತೆಯಲ್ಲಿ ಭೋಗವು ಸಮಾನವು. ಹೇಗೆಂದರೆ ಕ್ಷೀರವೇ ಮೊದಲಾದವು ಇಬ್ಬರಿಗೂ ಭೋಗ್ಯವಾಗಿರಬಹುದು. ಆದರೆ ಒಬ್ಬರಿಗೆ ಆನುಕೂಲ್ಯಾತಿಶಯದಿಂದ ಅನುಕೂಲರೂಪ ಸುಖವು ಹೆಚ್ಚಾಗಿರಬಹುದು. ಇನ್ನೊಬ್ಬರಿಗೆ ಮಂದಾನುಕೂಲ್ಯದಿಂದ ಅಷ್ಟು ಪ್ರೀತಿರೂಪ ಸುಖವಿಲ್ಲದೆ ಹೋಗಿ, ಹೀಗೆ ಭೋಗದಲ್ಲಿ ವೈಷಮ್ಯವಿರಬಹುದು. ಪರಮಪದದಲ್ಲಿ ಹಾಗಲ್ಲವು. ಪರಬ್ರಹ್ಮನಿಗೂ ಮುಕ್ತನಿಗೂ ಭೋಗ್ಯವು ಒಂದೇಯಾಗಿದ್ದರೂ ಭೋಗದಲ್ಲಿ ವ್ಯತ್ಯಾಸವಿಲ್ಲವು. ಆದರಲ್ಲೂ ಸಮತ್ವ ಉಂಟೆಂಬ ಭಾವವು. ಆದುದರಿಂದ ಸಾಯುಜ್ಯ ಶಬ್ದಕ್ಕೆ ಭೋಗ್ಯವು ಇಬ್ಬರಿಗೂ ಸಮಾನವಾಗಿರೋಣವೆಂಬರ್ಥವು, ಸಾಷ್ಟಿರ್ತಾ ಶಬ್ದಕ್ಕೆ ಭೋಗ ಅಥವಾ ಅನುಭವವು ಇಬ್ಬರಿಗೂ ಸಮಾನವೆಂಬರ್ಥವು ಇದರಿಂದ ಸಾಯುಜ್ಯ ಶಬ್ದಕ್ಕೆ ಸ್ವರೂಪೈಕ್ಯ ಹೇಳಬೇಕಾದ ಆವಶ್ಯಕತೆಯೂ ಇಲ್ಲವು, ಸಾಯುಜ್ಯ ಸಾಷ್ಟಿರ್ತಾ ಶಬ್ದಗಳು ಭಿನ್ನಾರ್ಥಗಳುಳ್ಳವಾದುದರಿಂದ ಪುನರುಕ್ತಿ ದೋಷವೂ ಇಲ್ಲವೆಂಬ ಭಾವವು.

ಆದರೆ ಮುಕ್ತನಿಗೆ ಜಗದ್ವ್ಯಾಪಾರದಲ್ಲಿ ಅನ್ವಯವಿಲ್ಲವೆಂದು ಶಾಸ್ತ್ರಗಳಲ್ಲಿ ಹೇಳಿರುವಾಗ ಮುಕ್ತನಿಗೂ ಪರಬ್ರಹ್ಮನಿಗೂ ಪರಮಸಾಮ್ಯವು ಹೇಗೆ? ಎಂಬ ಶಙ್ಕಾವಿಗೆ ಮುಂದಿನ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಾರೆ.

### ಮುಕ್ತನಿಗೆ ಭೋಗದಲ್ಲಿ ಮಾತ್ರ ಸಾಮ್ಯವು, ಜಗದ್ವ್ಯಾಪಾರವಿಲ್ಲವು.

---

**ಮುಕ್ತನುಕ್ಕು**-ಮುಕ್ತನಿಗೆ, **ಜಗದ್ವ್ಯಾಪಾರಮಿಲ್ಲೆಯೇಯಾಗಿಲುಮ್**-ಜಗತ್ತಿನ ವ್ಯಾಪಾರಗಳಾದ ಸೃಷ್ಟಿ, ಸ್ಥಿತಿ ಲಯಾದಿಗಳಲ್ಲಿ ಸಂಬಂಧವಿಲ್ಲದೇ ಇದ್ದರೂ, **ಕೃಷಿ ಪಣ್ಣಿನ ಪಿತಾವುಮ್** - ಕ್ಷೇತ್ರವನ್ನು ಸಂಪಾದಿಸಿ, ಅದಕ್ಕೆ ಬೇಕಾದ ಕೃಷಿಯನ್ನು ಮಾಡಿ. ಹೆಚ್ಚಾಗಿ ದವಸ ಧಾನ್ಯಾದಿಗಳನ್ನು ಬೆಳದು ವಿಶೇಷ ಧನಾರ್ಜನೆ ಮಾಡಿದ ತಂದೆಯೂ, ಇಲ್ಲಿ ಕೃಷಿವ್ಯಾಪಾರವು ಇತರ ವಿಧ ಧನಾರ್ಜನೆಯ ರೂಪವಾದ ವ್ಯಾಪಾರಕ್ಕೂ ಉಪಲಕ್ಷಣವು, **ನಿರ್ವ್ಯಾಪಾರರಾನ ಪುತ್ರಾದಿಗಳುಮ್ ಕೂಡ** - ಕೃಷ್ಯಾದಿ ಅಂತಹ ವ್ಯಾಪಾರಗಳನ್ನೇನೂ

**ಭುಜಿಕ್ಕುಮಾಪ್ಪೋಲೆ, ಜಗದ್ವ್ಯಾಪಾರತ್ತಾಲ್ ವರುಮ್ ರಸಮ್, ವ್ಯಾಪಿರುಕ್ಕಿರ ಈಶ್ವರನುಕ್ಕುಮ್, ಪಾರ್ತ್ತಿರುಕ್ಕಿರ ಮುಕ್ತನುಕ್ಕುಮ್, ತುಲ್ಯಮ್.**

ಮಾಡದ, ಮಕ್ಕಳೇ ಮೊದಲಾದವರೂ ಕೂಡ, ಇಲ್ಲಿ ಆದಿ ಶಬ್ದದಿಂದ ಭಾರ್ಯಾ ಭ್ರಾತಾದಿ ಇತರ ಬಂಧುಗಳೂ ಹೇಳಲ್ಪಟ್ಟರು, **ಕೃಷಿ ಫಲತ್ತೈ** - ಕೃಷಿ ಮಾಡಿದುದರಿಂದುಂಟಾದ ಫಲವನ್ನು, **ಭುಜಿಕ್ಕುಮಾಪ್ಪೋಲೆ** - ಊಟ ಮಾಡುವ ಹಾಗೆ, ಅನುಭವಿಸುವ ಹಾಗೆ, **ಜಗದ್ವ್ಯಾಪಾರತ್ತಾಲ್ ವರುಮ್** - ಜಗತ್ತಿನ ಸೃಷ್ಟಿ ಸ್ಥಿತಿ ಲಯಾದಿಗಳಿಂದುಂಟಾಗುವ, **ರಸಮ್** - ಆನಂದವು, **ವ್ಯಾಪಿರಿಕ್ಕಿರ**- ಅಂತರ್ಬಹಿರ್ವ್ಯಾಪಿಸುವ ಶಕ್ತಿಯುಳ್ಳ **ಈಶ್ವರನುಕ್ಕುಮ್** - ಸರ್ವೇಶ್ವರನಿಗೂ, **ಪಾರ್ತ್ತಿರುಕ್ಕಿರ** - ನೋಡುತ್ತಿರುವ, **ಮುಕ್ತನುಕ್ಕುಮ್** - ಮುಕ್ತನಿಗೂ ಸಹ, **ತುಲ್ಯಂ** - ಸಮಾನವಾದುದು

ಜಗದ್ವ್ಯಾಪಾರವು ಮುಕ್ತನಿಗಿಲ್ಲದುದರಿಂದ, ಆ ವ್ಯಾಪಾರದಿಂದುಂಟಾಗುವ ಆನಂದವು ಪರಬ್ರಹ್ಮನಿಗೆ ಮಾತ್ರವೇ ಪ್ರಾಪ್ತವಾಗುವದರಿಂದ, ಆನಂದದಲ್ಲಿ ಸಮವೆಂಬ ಶಾಸ್ತ್ರಮರ್ಯಾದೆಯು ಹೇಗೆ ಸರಿಹೋಗುತ್ತದೆ, ಎಂಬ ಆಕ್ಷೇಪಕ್ಕೆ ಒಂದು ದೃಷ್ಟಾಂತ ಮೂಲಕ ಸಮಾಧಾನವನ್ನು ಹೇಳುತ್ತಾರೆ. ಪಿತಾವಾದವನು ಅನೇಕ ಗದ್ದೆ ಹೊಲ ತೋಟಗಳನ್ನು ಸಂಪಾದಿಸಿಕೊಂಡು, ಅವುಗಳ ಆಡಳಿತದಲ್ಲಿ ನಿರತನಾಗಿ, ಬಹು ದ್ರವ್ಯವನ್ನು ತನ್ಮೂಲಕ ಗಳಿಸಿ, ತುಂಬಾ ಸಮೃದ್ಧಿಯಲ್ಲಿದ್ದುಕೊಂಡು ಅನುಭವಿಸುವ ಭೋಗಗಳಲ್ಲಿ, ಇವು ಯಾವುದನ್ನೂ ಮಾಡದೇ ಇರುವ ಪುತ್ರನಿಗೂ ಸಹ ಈ ಸಮೃದ್ಧಿ ಉಪಭೋಗ ಆನಂದಾದಿಗಳೂ ಹೇಗೆ ಸಮವೋ ಹಾಗೆಯೇ ಪರಬ್ರಹ್ಮನಿಗೂ ಮುಕ್ತನಿಗೂ ಕೂಡ ಆನಂದದಲ್ಲಿ ಸಮಭಾವವು. ಇಲ್ಲಿ **ವ್ಯಾಪಿರುಕ್ಕಿರ ಈಶ್ವರನುಕ್ಕುಮ್**, ಎಂದು ಹೇಳಿರುವದರಭಿಪ್ರಾಯವೇನೆಂದರೆ:—"**ತತ್ಸೃಷ್ಟ್ವಾತದೇವಾನುಪ್ರಾವಿಶತ್**" ಆ ಜಗತ್ತನ್ನು ಸೃಷ್ಟಿಸಿ ಅದನ್ನೇ ಅನುಪ್ರವೇಶ ಮಾಡಿರುತ್ತಾನೆಂದು ಶ್ರುತಿಗಳಲ್ಲಿ ಹೇಳಿರುವದರಿಂದ ಆತನು ಮಾತ್ರವೇ ಜಗತ್ಕಾರಣನೇ ವಿನಾ ಮುಕ್ತನು ಆ ಪ್ರಕರಣಗಳಲ್ಲಿ ಹೇಳಲ್ಪಡಲಿಲ್ಲವಾದುದರಿಂದ ಜಗತ್ಕಾರಣನಲ್ಲವೆಂಬುದನ್ನು ತಿಳಿಸುವದಕ್ಕಾಗಿ ಎಂದು ಊಹಿಸತಕ್ಕದ್ದು. ಈಶ್ವರ ಶಬ್ದದಲ್ಲೇ ಸರ್ವವ್ಯಾಪ್ತಿ ಆತನಿಗೆ ಮಾತ್ರವೇ ಉಂಟೆಂಬುದು ತೋರಿಬರುತ್ತದೆ. "**ಯೋ ಲೋಕತ್ರಯ ಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ**" (೧೬. ೧೫. ೧೭) ಈಶ್ವರನೆಂದು ಹೇಳಿಸಿಕೊಳ್ಳುವದಕ್ಕೆ ವಿಕಾರ ಹೊಂದುವ ಅಚಿತ್ತೇನು, ಅದರ ಸಂಬಂಧವುಳ್ಳ ಬದ್ಧಚೇತನನೇನು, ಅದರ

ಸಂಬಂಧವೇಗಿಲ್ಲದ ಮುಕ್ತನೇನು ಇಂತಹ ಲೋಕತ್ರಯವನ್ನೂ ವ್ಯಾಪಿಸಿ ಅವುಗಳಿಗಿಂತ ವಿಲಕ್ಷಣನಾಗಿ ಬೇರೆಯಾಗಿ ಅವುಗಳಿಗೆ ನಿಯಾಮಕನಾಗಿರಬೇಕು. ಈ ಅಭಿಪ್ರಾಯವನ್ನೇ ಶ್ರೀ ಯಾಮುನೇಯರೂ ಗೀತಾರ್ಥಸಙ್ಗ್ರಹದಲ್ಲಿ ಪರಮಾತ್ಮನು ಈಶ್ವರನು ಹೇಗೆಂದರೆ :—"ವ್ಯಾಪನಾದ್ಭರಣಾತ್ಸ್ವಾಮ್ಯಾತ್" ಉಭಯ ವಿಭೂತಿಯನ್ನು ವ್ಯಾಪಿಸಿ, ಭರಣಮಾಡಿ, ಅವಕ್ಕೆಲ್ಲಾ ನಿಯಾಮಕನಾಗಿ ಸ್ವಾಮಿಯಾಗಿರುವದರಿಂದ ಈಶ್ವರನೆಂದು ಹೇಳಲ್ಪಡುವನೆಂದುಪದೇಶಿಸಿರುತ್ತಾರೆ ಮುಕ್ತನು ವಿಭುವೂ ಅಲ್ಲವು, ಆತನಿಗೆ ಭರಣನಿಯಾಮಕ ಶಕ್ತಿಯೂ ಇಲ್ಲವು, ಈತನು ಸರ್ವೇಶ್ವರನಿಗೆ ಸ್ವಂ ಆಗಿ ಯಾವ ಸ್ವತನ್ತ್ರ್ಯ ಇವನಿಗಿಲ್ಲವು ; ಆದುದರಿಂದ ಈತನು ಜಗತ್ತಿಗೆ ಎಂದಿಗೂ ಕಾರಣನಲ್ಲವು ಆದರೆ ಮುಕ್ತನಾದುದರಿಂದ ಪುನಸ್ಸೃಷ್ಟಿಯಲ್ಲಿ ಸೇರದೇ ಇರುವದರಿಂದ, ಸರ್ವೇಶ್ವರನು ಈ ಲೀಲಾವಿಭೂತಿಯನ್ನು ಸೃಷ್ಟಿಸಿ, ರಕ್ಷಿಸಿ, ಲಯ ಹೊಂದಿಸುವಾಗ ಸುಮ್ಮನೆ ನೋಡುತ್ತಿರುವನೆಂಬುದನ್ನು ತಿಳಿಸುವದಕ್ಕಾಗಿ "ಪಾರ್ತ್ತಿರುಕ್ಕಿರ ಮುಕ್ತನುಮ್" ಎಂಬ ಪ್ರಯೋಗವು. ಆದರೆ ಅನೇಕರು ಒಂದರ ಉಪಭೋಗವನ್ನು ಹೊಂದಿದರೆ ಆನಂದದಲ್ಲಿ ವ್ಯತ್ಯಾಸವನ್ನು ಕಂಡಿರುತ್ತೀವೆಯಲ್ಲಾ ಎಂದರೆ, ಅಂತಹ ವ್ಯತ್ಯಾಸವೆಲ್ಲಾ ಈ ಕರ್ಮಭೂಮಿಯಲ್ಲಿರುವ ಪ್ರಕೃತಿಯಿಂದ ಬದ್ಧರಾಗಿ ತಿರೋಹಿತ ಸ್ವರೂಪವುಳ್ಳವರಿಗೆ ವಿನಾ, ಗುಣಾಷ್ಟಕಗಳಿಂದ ಸ್ವಸ್ವರೂಪಾವಿರ್ಭಾವ ಉಂಟಾದ ಮುಕ್ತರಿಗೆ ಹಾಗಲ್ಲವು. ಇಂತಹ ಸ್ವರೂಪಾವಿರ್ಭಾವವು ಎಲ್ಲಾ ಮುಕ್ತರಿಗೂ ಸಮವಾಗಿ ಉಂಟಾಗುವದರಿಂದ ಆನಂದದಲ್ಲೂ ಪರಸ್ಪರ ಸಾಮ್ಯವೂ ಪರಮಾತ್ಮನೊಂದಿಗೆ ಸಾಮ್ಯವೂ ಉಂಟಾಗುವದು. ಆನಂದವೆಂದರೆ ಅನುಕೂಲದರ್ಶನದಿಂದುಂಟಾಗುವ ಪ್ರೀತಿ ವಿಶೇಷವು. ಮುಕ್ತರಾಗಿ ನಿತ್ಯವಿಭೂತಿಯಲ್ಲಿರುವವರಿಗೆ ಸರ್ವವೂ ಅನುಕೂಲವಾಗಿಯೇ ತೋರುವುವೆಂದು ಹಿಂದೆಯೇ ಉಪಪಾದಿಸಲ್ಪಟ್ಟಿರುತ್ತದೆಯಾದುದರಿಂದ ಸರ್ವರಿಗೂ ಆನಂದದಲ್ಲಿ ಸಾಮ್ಯವುಂಟೆಂಬುದು ಸ್ವತಸ್ಸಿದ್ಧವು. ಈ ವಿಷಯದಲ್ಲಿ ದ್ವೈತ ಸಿದ್ಧಾಂತಿಗಳು ಸಂದೇಹಪಡುವದಕ್ಕೆ ಕಾರಣವೇ ಇರುವದಿಲ್ಲವು. ಈ ಸಾಮ್ಯವು ಭೋಗದಲ್ಲಿ ಮಾತ್ರವೇ ವಿನಾ ಜಗದ್ವ್ಯಾಪಾರಾದಿಗಳಲ್ಲಿಲ್ಲವೆಂದು ಸೂತ್ರಗಳು ಉಪದೇಶಿಸುತ್ತವೆ. ಆದುದರಿಂದ ಶ್ರೀ ದೇಶಿಕರವರು ತಾವು ಈಗ ಉಪದೇಶಿಸಿದುದಕ್ಕೆ ಪ್ರಮಾಣಬಲ ಉಂಟೆಂದು ಆ ವ್ಯಾಸಸೂತ್ರಗಳನ್ನು ಉದಾಹರಿಸುತ್ತಾರೆ :—

**ಸೂತ್ರಕಾರರುಮ್** - ಶಾರೀರಕ ಮೀಮಾಂಸಾ ಸೂತ್ರಗಳನ್ನು ರಚಿಸಿದ ಶ್ರೀ ವ್ಯಾಸ ಮಹರ್ಷಿಗಳು, ಈ ಅಭಿಪ್ರಾಯಗಳನ್ನೇ "ಜಗದ್ವ್ಯಾಪಾರ ವರ್ಜಂ" (೪. ೪. ೧೭) ಎಂದು, **ತುಡಙ್ಗಿ** - ಪ್ರಾರಂಭಿಸಿ, "ಭೋಗಮಾತ್ರ ಸಾಮ್ಯ

**ಸೂತ್ರಕಾರರುಮ್ "ಜಗದ್ವ್ಯಾಪಾರ ವರ್ಜಂ" ಎನ್ರುತುಡಙ್ಗಿ, "ಭೋಗ ಮಾತ್ರ ಸಾಮ್ಯಲಿಂಗಾಚ್ಚ" ಎನ್ರುರುಳಿಚ್ಚೆಯ್ದಾರ್.**

---

**ಲಿಂಗಾಚ್ಚ"** (೪ ೪. ೨೧) ಎಂಬ ಸೂತ್ರದವರೆಗೂ, **ಅರುಳಿಚ್ಚೆಯ್ದಾರ್** - ಕೃಪಯಾ ಉಪದೇಶಿಸಿರುತ್ತಾರೆ. ಹೀಗೆ ಈ ಐದು ಸೂತ್ರಗಳಲ್ಲಿ ಈ ವಿಷಯಗಳು ಉಪಪಾದಿತವಾಗಿವೆ ಎಂಬ ಭಾವವು. **"ಜಗದ್ವ್ಯಾಪಾರ ವರ್ಜಂ ಪ್ರಕರಣಾದ ಸನ್ನಿಹಿತತ್ವಾಚ್ಚ"** ಎಂಬ ಸೂತ್ರದಲ್ಲಿ ಮುಕ್ತನಿಗೆ ಜಗದ್ವ್ಯಾಪಾರ ಸಂಬಂಧವಿಲ್ಲವೆಂದು ಹೇಳಲ್ಪಟ್ಟಿರುತ್ತದೆ ; ಏಕೆಂದರೆ **ಯತೋ ವಾ ಇಮಾನಿ ಭೂತಾನಿ ಜಾಯನ್ತೇ** (ತೈ. ಭೃಗು) ಎಂದು ಪ್ರಾರಂಭಿಸಿ ಹೇಳಿರುವುದು ಯಾವುದೆಂದರೆ **"ತದ್ಬ್ರಹ್ಮ"** ಅದೇ ಪರಬ್ರಹ್ಮವೆಂದು ಹೇಳಿರುವದರಿಂದ, ಪ್ರಕರಣದಿಂದ ಪರಬ್ರಹ್ಮನಿಗೇನೇ ಜಗದ್ವ್ಯಾಪಾರದ ಅನ್ವಯವು **"ಅಸನ್ನಿಹಿತತ್ವಾಚ್ಚ"** ಸೃಷ್ಟ್ಯಾದಿ ಕ್ರಮವನ್ನು ಹೇಳುವ ಸಂದರ್ಭಗಳಲ್ಲಿ ಮುಕ್ತನ ಸಾನ್ನಿಧ್ಯವು ಅಂತಹ ಶ್ರುತಿಗಳಲ್ಲಿ ಕಾಣವಿರುವದರಿಂದಲೂ ಮುಕ್ತನಿಗೆ ಜಗದ್ವ್ಯಾಪಾರವಿಲ್ಲವು. ಇವರ ಮುಂದಿನ ಸೂತ್ರದಲ್ಲಿ **"ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ"** ಎಂದು ಛಾಂದೋಗ್ಯದಲ್ಲಿ ಹೇಳಿರುವದರಿಂದ, ಮುಕ್ತನಿಗೆ ಸಮಸ್ತ ಲೋಕಗಳಲ್ಲೂ ಕಾಮಚಾರ ಉಂಟೆಂಬುದರಿಂದ ಜಗದ್ವ್ಯಾಪಾರವಿರುವಹಾಗೆ ತೋರುವದಿಲ್ಲವೇ ಎಂದರೆ, ಹಾಗಲ್ಲವು, ಪರಮಪುರುಷನಿಂದ ಲೋಕನಿಯಮನಾಧಿಕಾರದಲ್ಲಿ ನಿಯಮಿಸಲ್ಪಟ್ಟ ಚತುರ್ಮುಖ ಬ್ರಹ್ಮಾದಿಗಳ ಲೋಕದಲ್ಲಿರುವ ಭೋಗವನ್ನು ಅನುಭವಿಸಬೇಕೆಂಬ ಇಚ್ಛೆಯುಂಟಾದರೆ, ಆಗ ಪರಮಪುರುಷನ ಅನುಗ್ರಹದಿಂದ ಆ ಲೋಕಗಳ ಭೋಗಗಳನ್ನನುಭವಿಸುವನೆಂದು ಹೇಳಲ್ಪಟ್ಟಿತು. ಅವರ ಮುಂದಿನ ಸೂತ್ರದಲ್ಲಿ, ಮುಕ್ತನ ಭೋಗವೆಂಥಾದ್ದೆಂಬುದು ತಿಳಿಸಲ್ಪಡುತ್ತದೆ :- ಉತ್ಪತ್ತ್ಯಾದಿ ವಿಕಾರಗಳ ಸ್ಪೃಕ್ಕೇ ಇಲ್ಲದಿರುವ ಪರಿಪೂರ್ಣ ಬ್ರಹ್ಮಾನುಭವವೇ ಮುಕ್ತನ ಭೋಗವು, ಏತಕ್ಕೆಂದರೆ **"ರಸೋ ವೈ ಸಃ, ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ"** ಎಂದರೆ (ತೈ. ಆನಂ. ೨. ೭. ೩) **ಬ್ರಹ್ಮವಿಷ್ಣೋ'ಬ್ರಹ್ಮೈವ ಲಬ್ಧ್ವಾನಂದೀ ಭವತಿ** ಇತ್ಯಾದಿ ಶ್ರುತಿವಾಕ್ಯಗಳು ಹಾಗೆ ಉಪದೇಶಿಸುತ್ತವೆ ಎಂದು ಹೇಳಲ್ಪಟ್ಟಿರುತ್ತದೆ. ಇನ್ನು ಮುಂದಿನ ಸೂತ್ರದಲ್ಲಿ ಜಗದ್ವ್ಯಾಪಾರಗಳೆಲ್ಲಾ ಪರಬ್ರಹ್ಮನಿಗೆ ಸೇರಿದವೆಂದೂ, ಮುಕ್ತನಿಗೆ ಪರಿಪೂರ್ಣ ಬ್ರಹ್ಮಾನುಭವರೂಪ ಭೋಗವೆಂದೂ ಶ್ರುತಿಸ್ಮೃತಿಗಳು ತೋರಿಸುತ್ತವೆಂದು ಹೇಳಲ್ಪಟ್ಟಿರುತ್ತದೆ. ಆ ಶ್ರುತಿ ಸ್ಮೃತಿಗಳು ಯಾವುವೆಂದರೆ :—

"ಸಾಮರಸ್ಯಂಹಿ ಸಾಯುಜ್ಯಮ್ ವದನ್ತಿ ಬ್ರಹ್ಮವಾದಿನಃ" ಎನ್ರು ಶಾಕಟಾಯನನುಮ್ ಶೊನ್ನಾರ್.

---

೧. "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶ ಸ್ಸಂಭೂತಃ" (ತೈ) ಎಂಬಿವೇ ಮೊದಲಾದವು ಶ್ರುತಿಗೆ ಉದಾಹರಣೆಯು

೨. "ಅಹಂ ಸರ್ವಸ್ಯ ಪ್ರಭವಃ ಮತ್ತಃ ಸರ್ವಂ ಪ್ರವರ್ತತೇ" (ಗೀ. ೧೦ ೮) ಎಂಬಿವೇ ಮೊದಲಾದವು ಸ್ಮೃತಿಗೆ ಉದಾಹರಣವು ಇದಾದ ನಂತರ **ಭೋಗಮಾತ್ರ ಸಾಮ್ಯ ಲಿಂಗಾಚ್ಚ** (೪. ೪ ೨೧) ಎಂಬ **ಸೂತ್ರದಿಂದ** ಮುಕ್ತನಿಗೆ ಪರಿಪೂರ್ಣ ಬ್ರಹ್ಮಾನುಭವದಿಂದ ಉಂಟಾದ ಆನಂದದಲ್ಲಿ ಮಾತ್ರ ಸಾಮ್ಯವೆಂದು ಹೇಳಲ್ಪಟ್ಟಿರುತ್ತದೆ ತೈತ್ತಿರೀಯ ಆರಣ್ಯಕ ವಾಕ್ಯವಾದ (೨ ೧ ೨) **"ಸೋಽಶ್ನುತೇ ಸರ್ವಾನ್ ಕಾಮಾನ್ ಸಹಬ್ರಹ್ಮಣಾ ವಿಪಶ್ಚಿತಾ"** ಎಂಬುವದರಿಂದ ಮುಕ್ತನಿಗೆ ಉಂಟಾಗುವ ಪರಬ್ರಹ್ಮಾನುಭವ ಭೋಗಮಾತ್ರದಿಂದ ಪರಬ್ರಹ್ಮನೊಂದಿಗೆ ಸಾಮ್ಯವು ಹೇಳಲ್ಪಟ್ಟಿರುವದರಿಂದ, ಆನಂದ ಮಾತ್ರದಲ್ಲಿ ಸಾಮ್ಯವೇ ವಿನಾ, ಜಗದ್ವ್ಯಾಪಾರಗಳಲ್ಲಿಲ್ಲವೆಂದು ನಿರ್ಧರಿಸಲ್ಪಟ್ಟಿರುತ್ತದೆ.

**ಸಾಯುಜ್ಯ** ಶಬ್ದಕ್ಕೆ ಇಂತಹ ಭೋಗಸಾಮ್ಯವೇ ಅರ್ಥವೆಂದು ಈಗ ಉಪಪಾದಿಸುವದಕ್ಕೆ ವ್ಯಾಕರಣಸೂತ್ರಗಳನ್ನು ರಚಿಸಿದ ಶ್ರೀ ಶಾಕಟಾಯನರ ಪ್ರಮಾಣವನ್ನು ಉದಾಹರಿಸುತ್ತಾರೆ:—**ಸಾಮರಸ್ಯಂಹಿ** - ಸಮರಸವುಳ್ಳ ಭಾವವನ್ನಲ್ಲವೇ ಎಂದರೆ **"ರಸೋವೈಸಃ, ರಸಗ್ಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ"** ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ರಸವೆಂದರೆ ಆನಂದಮಯನಾದ ಪರಬ್ರಹ್ಮನು, **ಆತನೊಂದಿಗೆ** ಸಮಾನವಾದ ಆನಂದವನ್ನುಳ್ಳ ಭಾವವನ್ನೇ ಎಂಬರ್ಥವು. **ಬ್ರಹ್ಮವಾದಿನಃ** - ಬ್ರಹ್ಮವಿತ್ತಮರು, ಸಾಯುಜ್ಯವೆಂಬದಾಗಿ, **ವದನ್ತಿ** - ಹೇಳುತ್ತಾರೆ, **ಎನ್ರು** - ಎಂಬದಾಗಿ ಶಾಕಟಾಯನರೂ, **ಶೊನ್ನಾನ್** - ಹೇಳಿರುತ್ತಾರೆ. **ಸಾಮರಸ್ಯಂ** ಎಂದು ಹೇಳಿರುವದರಿಂದ ಇಬ್ಬರಿಗೆ ಒಂದೇ ವಿಧವಾದ ಆನಂದವೆಂದು ಹೇಳಿರುವದರಿಂದ, ಸಾಯುಜ್ಯವು ಸ್ವರೂಪೈಕ್ಯವನ್ನು ಬೋಧಿಸುತ್ತದೆ ಎಂದು ಹೇಳುವ ಅದ್ವೈತಿಗಳಭಿಪ್ರಾಯವು ಸಮಂಜಸವಾದುದಲ್ಲವೆಂಬುದು ತೋರುಬರುತ್ತದೆ **"ನಿರಂಜನಃ ಪರಮಂ ಸಾಮ್ಯಮುಪೈತಿ"** ಎಂಬಲ್ಲಿ ಸಮಶಬ್ದವನ್ನು ಬೋಧಿಸಿರುವದರಿಂದಲೇ, ಮುಕ್ತನೂ ಪರಮಾತ್ಮನೂ ಒಂದೇ ಎಂಬ ಅದ್ವೈತಸಿದ್ಧಾಂತಕ್ಕೆ ಪ್ರಬಲ ವಿರೋಧವು. ಇದು ಕುದುರೆಗೆ ಸಮ ಎಂದು ಹೇಳಿದರೆ ಇದು ಕುದುರೆಯಲ್ಲವೆಂದು ಕಂಠೋಕ್ತವಾಗಿ ಹೇಳಿದಂತಾಗ

## ಶ್ರೀ ಶಙ್ಕರೋಕ್ತ ಸಾಯುಜ್ಯಾರ್ಥಸ್ಯ ಖಂಡನಂ

ಶಬ್ದಶಕ್ತಿಯನ್ನಿಕ್ಕೇ ಯಿರುಕ್ಕ, ಭೇದಶ್ರುತಿಗಳುಮ್ ವಿರೋಧಿಕ್ಕ, ಸಾಯುಜ್ಯ ಶಬ್ದತ್ತುಕ್ಕು ಐಕ್ಯಮ್ ಪೊರುಳಾಗ ನಿನೈತ್ತಿರುಪ್ಪಾರ್ಕ್ಕು, ಮುಕ್ತ್ತ ಪರಮ ಸಾಮ್ಯತ್ತೈ ಯುಡೈಯು ಮೆನ್ರುಮ್, ತಾದೃಕ್ಕಾ ಮೆನ್ರುಮ್, ಶೊಲ್ಲುಗಿರ ಶ್ರುತಿಗಳುಮ್ ವಿರೋಧಿಕ್ಕುಮ್.

---

ಲಿಲ್ಲವೇ ? ಆದುದರಿಂದ ಮುಕ್ತನ ಸ್ವರೂಪವೇ ಬೇರೆ ಪರಮಾತ್ಮನ ಸ್ವರೂಪವೇ ಬೇರ ಎಂಬುದು ವ್ಯಕ್ತಪಟ್ಟಿತು ಯಾವುದರಲ್ಲಿ ಸಾಮ್ಯವೆಂದರೆ **ಭೋಗಮಾತ್ರ ಸಾಮ್ಯಂ** ಎಂದು ಶ್ರೀ ವ್ಯಾಸಾಚಾರ್ಯರು ನಿರ್ಧರಿಸಿದರು. ಇಲ್ಲಿ ಆನಂದದಲ್ಲಿ ಮಾತ್ರ ಸಾಮ್ಯವೆಂದು ಹೇಳಿದುದರಿಂದಲೇ ಇಲ್ಲೂ ವ್ಯತ್ಯಾಸ ಉಂಟೆಂದು ಹೇಳಿದಂತಾ ಯಿತು. ಎಲ್ಲಿ ವ್ಯತ್ಯಾಸವೆಂದರೆ **ಜಗದ್ವ್ಯಾಪಾರ ವರ್ಜಂ** ಎಂದು ಹೇಳಿದರು. ಆದುದರಿಂದ ಸಾಯುಜ್ಯವೆಂದರೆ ಸ್ವರೂಪೈಕ್ಯವೆಂಬ ಶಂಕರಾಭಿಪ್ರಾಯವು ಸರಿ ಯಲ್ಲವೆಂಬುದು "**ಸಾಮರಸ್ಯಂ ಹಿ ಸಾಯುಜ್ಯಂ ವದನ್ತಿ ಬ್ರಹ್ಮವಾದಿನಃ**" ಎಂಬುದರಿಂದ ಏರ್ಪಡುತ್ತದೆ ಈ ಅಭಿಪ್ರಾಯವನ್ನೇ ಮುಂದಿನ ವಾಕ್ಯಗಳಿಂದ ಸಮರ್ಥನ ಮಾಡಿ ಹೇಳುತ್ತಾರೆ

### ಸಾಯುಜ್ಯ ಶಬ್ದದ ಶ್ರೀ ಶಂಕರಾಚಾರ್ಯರರ್ಥದ ಖಂಡನವು.

**ಶಬ್ದಶಕ್ತಿಯನ್ನಿಕ್ಕೇ ಇರುಕ್ಕ** - ಸಾಯುಜ್ಯಶಬ್ದ ಸಾಮರ್ಥ್ಯವು ಐಕ್ಯ ವೆಂಬರ್ಥವಲ್ಲದೇ ಇರುವಾಗ, **ಭೇದಶ್ರುತಿಗಳುಮ್**- ಪರಮಾತ್ಮ ಜೀವಾತ್ಮರಿಗೆ ಭೇದವನ್ನು ಹೇಳುವ ಶ್ರುತಿಗಳೂ, **ವಿರೋಧಿಕ್ಕ**-ವಿರೋಧವಾದವುಗಳಾಗಿರುವಾಗ, **ಸಾಯುಜ್ಯ ಶಬ್ದಕ್ಕೆ, ಐಕ್ಯಂ ಪೊರುಳಾಗ** - ಪರಮಾತ್ಮ ಜೀವಾತ್ಮರ ಐಕ್ಯವೇ ತಾತ್ಪರ್ಯವಾಗಿ, **ನಿನೈತ್ತಿರುಪ್ಪಾರ್ಕ್ಕು** - ಎಣಿಸಿರುವವರಿಗೆ, **ಮುಕ್ತ್ತ** - ಮುಕ್ತನು, **ಪರಮಸಾಮ್ಯತ್ತೈ ಯುಡೈಯುಮೆನ್ರುಮ್** - ಪರಮಸಾಮ್ಯ ವನ್ನು ಹೊಂದುವನೆಂದೂ, **ತಾದೃಕ್ಕಾಮ್ ಎನ್ರುಮ್** - ಪರಮಾತ್ಮನಿಗೆ ಸದೃಶ ನಾಗುವನೆಂದೂ, **ಶೊಲ್ಲುಗಿರ** ಹೇಳುವ, ಶ್ರುತಿಗಳೂ ಸಹ, **ವಿರೋಧಿಕ್ಕುಮ್**- ವಿರೋಧವಾದವುಗಳಾಗುವವು ಮುಕ್ತದಶೆಯಲ್ಲಿ ಜೀವಾತ್ಮನು ಪರಮಾತ್ಮನಲ್ಲಿ ಐಕ್ಯ ಹೊಂದುವನೆಂದೂ, ಇದೇ ಸಾಯುಜ್ಯಶಬ್ದಾರ್ಥವೆಂದೂ ಶ್ರೀ ಶಂಕರಾ ಚಾರ್ಯರು ಅಭಿಪ್ರಾಯಪಟ್ಟಿರುತ್ತಾರೆ ಈ ಅಭಿಪ್ರಾಯವು ಅನೇಕ ಶ್ರುತಿ

ಪ್ರಮಾಣಗಳಿಗೆ ವಿರೋಧವಾಗುತ್ತದೆಂದು ಹೇಳುತ್ತಾರೆ. ಆ ಭೇದ ಶ್ರುತಿಗಳು ಯಾವುವೆಂದರೆ :—

೧. **"ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ ಏಕೋಬಹೂನಾಂ ಯೋ ವಿದಧಾತಿ ಕಾಮಾನ್"** (ಶ್ವೇ ೬. ೧೩, ಕಠ ೨ ೫. ೧೩) **ನಿತ್ಯಾನಾಂ ಬಹೂನಾಂ ಚೇತನಾನಾಂ** - ಅನೇಕರಾಗಿ ಅಸಂಖ್ಯಾಕರಾದ ನಿತ್ಯರಾದ ಜೀವಾತ್ಮರುಗಳಿಗೆ, **ನಿತ್ಯಃ ಏಕಃ ಚೇತನಃ** - ನಿತ್ಯನಾದ ಒಬ್ಬನಾದ ಯಾವ ಪರಮಾತ್ಮನು ಸರ್ವ ಇಷ್ಟಾರ್ಥ ಭೋಗಗಳನ್ನೆಲ್ಲಾ ಉಂಟುಮಾಡುವನೋ.

(೨) **ಪೃಥಗಾತ್ಮಾನಂ ಪ್ರೇರಿತಾರಂಚಮತ್ವಾ** - ಜೀವಾತ್ಮವರ್ಗವೂ, ನಿಯಾಮಕನಾದ ಪರಮಾತ್ಮನೂ, **ಪೃಥಕ್** - ಬೇರೆ ಎಂದು ತಿಳಿದವನಾಗಿ (ಶ್ವೇ. ೧. ೬)

(೩) **"ದ್ವಾಸುಪರ್ಣಾ ಸಯುಜಾ ಸಖಾಯಾ"** (ಮುಂ ೩. ೧. ೧, ಶ್ವೇ. ೪. ೬) ನಮ್ಮ ಹೃದಯ ಕುಹರದಲ್ಲಿ ಇಬ್ಬರು ಆತ್ಮರುಗಳು, ಜೀವಾತ್ಮ ಪರಮಾತ್ಮರುಗಳಿದ್ದಾರೆ, ಅವರು ಯಾವಾಗಲೂ ಒಟ್ಟಿಗೆ ಇರುವವರು, ಪರಮ ಮಿತ್ರರುಗಳು, ಇತ್ಯಾದಿ.

(೪) **"ಯಸ್ಯಾತ್ಮಾ ಶರೀರಂ"** (ಬೃ ೫. ೭. ೨೨) ಯಾವ ಪರಮಾತ್ಮನಿಗೆ ಈ ಜೀವಾತ್ಮನು ಶರೀರವೋ.

(೫) **ಭೋಕ್ತಾ ಭೋಗ್ಯಂ ಪ್ರೇರಿತಾರಂಚಮತ್ವಾ.** (ಶ್ವೇ. ೧. ೧೨)

(೬) **ಸರ್ವಸ್ಯ ಶರಣಂ ಸುಹೃತ್**-ಸಮಸ್ತ ಚೇತನರಿಗೂ ಪರಮಾತ್ಮನು **ಉಪಾಯವು** ಮತ್ತು ಪರಮ ಮಿತ್ರನು, ಪರಮೋಪಕಾರಿಯು

(೭) **"ಈಶನೀಶೌ"** (ಶ್ವೇತ. ೧. ೯) ಒಬ್ಬನು ಸರ್ವೇಶ್ವರನು ಸರ್ವ ನಿಯಾಮಕನು. ಇನ್ನೊಬ್ಬನು (ಜಾತ್ಯೇಕ ವಚನವು) ಆತನಿಗೆ ದಾಸನು

(೮) **ಪ್ರಧಾನ ಕ್ಷೇತ್ರಜ್ಞ ಪತಿರ್ಗುಣೇಶಃ"** (ಶ್ವೇತ ೬. ೧೬) ಪ್ರಕೃತಿಯಾದ ಅಚೇತನವರ್ಗಕ್ಕೂ, ಚೇತನವರ್ಗಕ್ಕೂ ಕಲ್ಯಾಣಗುಣಗಳಿಗೂ ಸಹ ನಾಯಕನು.

(೯) **"ಕ್ರಿಯಾಗುಣೈರಾತ್ಮಗುಣೈಶ್ಚ ತೇಷಾಂ ಸಂಯೋಗಹೇತುರಪರೋಪಿ ದೃಷ್ಟಃ"** (ಶ್ವೇ ೫ ೧೨) ಕರ್ಮಗಳಿಗೂ ಸಂಸಾರಕ್ಕೂ ಕಾರಣಭೂತವಾದ ಗುಣಗಳೇನು, ಚೇತನಸಂಬಂಧಗುಣಗಳಾಗಿ ಮೋಕ್ಷಕ್ಕೆ ಕಾರಣಭೂತವಾದ ಗುಣಗಳೇನು ಇವುಗಳನ್ನು ಆ ಚೇತನರೊಂದಿಗೆ ಸೇರಿಸುವದಕ್ಕೆ ಹೇತುವಾಗಿರುವ ಪರಬ್ರಹ್ಮನೆಂಬುವನು ಇವರುಗಳಿಂದ ಬೇರೆಯಾಗಿ ತೋರುವನು. (ಶ್ವೇತ. ೬. ೧೬)

(೧೦) **ಸಕಾರಣಂ ಕರಣಾಧಿಪಾಧಿಪಃ** - ಇಂದ್ರಿಯಗಳಿಗೆ ಅಧಿಪತಿ

ಗಳಾಗಿರುವ ಚೇತನರಿಗೂ ಕಾರಣವಾಗಿ ಪರಬ್ರಹ್ಮನಿದ್ದಾನೆ (ಶ್ವೇತ. ೬. ೯)

(೧೨) "ಯ ಆತ್ಮನಿ ತಿಷ್ಠನ್" - ಯಾವ ಪರಮಾತ್ಮನು ಜೀವನಲ್ಲಿ ಆತನಿಗೆ ಆತ್ಮನಾಗಿರುವನಾಗಿ (ಬೃ. ೩. ೭. ೨೨)

(೧೩) "ತಮೇವಂ ವಿದಿತ್ವಾತಿಮೃತ್ಯುಮೇತಿ" (ಶ್ವೇತ. ೩ ೮) ಆ ಪರಬ್ರಹ್ಮವನ್ನು ಹೀಗೆ ತಿಳಿದವನಾಗಿ, ಸಾಕ್ಷಾತ್ಕರಿಸಿದವನಾಗಿ ಸಂಸಾರಸಾಗರ ವನ್ನು ದಾಟುತ್ತಾನೆ

(೧೪) "ಪ್ರಾಜ್ಞೇನಾತ್ಮನಾನ್ವಾರೂಢಃ ಉತ್ಸರ್ಜನ್ಯಾತಿ" (ಬೃ. ೬, ೩. ೨೧) ಸರ್ವಜ್ಞನಾದ ಪರಮಾತ್ಮನಿಂದ ಸೇರಿದವನಾಗಿ ದೇಹತ್ಯಾಗ ಮಾಡಿದವ ನಾಗಿ ಹೋಗುತ್ತಾನೆ.

(೧೫) ಅನ್ತಃ ಪ್ರವಿಷ್ಟಃ ಶಾಸ್ತಾ ಜನಾನಾಗ್‌ಂ ಸರ್ವಾತ್ಮಾ (ತೈ. ಆ. ೩. ೨೪) ಪರಬ್ರಹ್ಮನು ಎಲ್ಲಾ ಚೇತನರಲ್ಲೂ ಪ್ರವೇಶ ಮಾಡಿ ಅವರಿಗೆ ನಿಯಾ ಮಕನಾಗಿ, ಎಲ್ಲರಿಗೂ ಸತ್ತೆಯನ್ನೀಯುವ ಆತ್ಮನಾಗಿದ್ದಾನೆ.

(೧೫) "ಯಥಾ ನದ್ಯಃ ಸ್ಯಂದಮಾನಾಸ್ಸಮುದ್ರೇ ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ। ತಥಾವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾ ತ್ಪರಂ ಪುರುಷಮುಪೈತಿ ದಿವ್ಯಮ್ ॥" ಹೇಗೆ ನದಿಗಳು ಸಮುದ್ರದ ಕಡೆಗೆ ಪ್ರವಹಿಸುವವುಗಳಾಗಿ ತಮ್ಮ ರೂಪಗಳನ್ನೂ ಹೆಸರುಗಳನ್ನೂ ಕಳೆದುಕೊಂಡು ಸಮುದ್ರದಲ್ಲಿ ಸೇರಿಹೋಗುವುವೋ, ಹಾಗೆಯೇ ಉಪಾಸಕನೂ ಕೂಡ ತನ್ನ ನಾಮರೂಪಗಳಿಂದ ಬಿಡಲ್ಪಟ್ಟವನಾಗಿ ಎಂದರೆ ನಾಮರೂಪಗಳ ಕಾರಣವಾದ ಪ್ರಕೃತಿಸಂಬಂಧದಿಂದ ಬಿಡುಗಡೆಯನ್ನು ಹೊಂದಿದವನಾಗಿ ದಿವ್ಯವಾದ ಪರಬ್ರಹ್ಮ ವನ್ನು ಹೊಂದುವನು ಎಂಬ ಭಾವವು, ಇಲ್ಲಿ ಕರ್ತೃವು ಉಪಾಸಕನು, ಕರ್ಮವು ಪರಬ್ರಹ್ಮವು ಆದುದರಿಂದ ಕರ್ತೃ ಕರ್ಮಗಳು ಒಂದೇ ಆಗಲಾರದು. ಒಬ್ಬನು ಪ್ರಾಪ್ತಾ, ಇನ್ನೊಬ್ಬನು ಪ್ರಾಪ್ಯನು.

ಹೀಗೆ ನೂರಾರು ಶ್ರುತಿಗಳನ್ನಾರಿಸಿ ಹೇಳಬಹುದು.

ಹಾಗೆಯೇ ಸ್ಮೃತಿಯೂ ಕೂಡ

(೧) ಕ್ಷರಸ್ಸರ್ವಾಣಿಭೂತಾನಿ ಕೂಟಸ್ಥೋಽಕ್ಷರಉಚ್ಯತೇ। ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ॥ (ಗೀ. ೧೫ ೧೬) ಬದ್ಧ ಮುಕ್ತ ನಿತ್ಯರುಗಳಿಗಿಂತ ಬೇರೆಯಾಗಿ ವಿಲಕ್ಷಣನಾಗಿ ಪರಮಾತ್ಮನೆನಿಸುವನು.

(೨) ಹಾಗೆಯೇ ವಿಷ್ಣುಪುರಾಣದಲ್ಲೂ (೬ ೭ ೩೦)

"ಆತ್ಮಭಾವಂ ನಯತ್ಯೇನಂ ತದ್ಬ್ರಹ್ಮಧ್ಯಾಯಿನಂ ಮುನಿಂ।
ವಿಕಾರ್ಯಮಾತ್ಮನಶ್ಶಕ್ತ್ಯಾ ಲೋಹಮಾಕರ್ಷಕೋ ಯಥಾ ॥"

(೪) "ಮಮಸಾಧರ್ಮ್ಯಮಾಗತಾಃ" ಎನ್ರು ಗೀತಾಚಾರ್ಯನುಮ್ ಅರುಳಿಚ್ಚೆಯ್ದಾನ್.

---

೩ ಹಾಗೆಯೇ ಶ್ರೀ ವೇದವ್ಯಾಸರೂ ಮಹಾ ಭಾರತದ ಆದಿ ಪರ್ವ ಶಕುಂತಲೋಪಾಖ್ಯಾನದಲ್ಲಿ, "**ಏಕೋಽಹಮಸ್ಮೀತಿ ಚ ಮನ್ಯಸೇ ತ್ವಂ ನ ಹೃಚ್ಛಯಂ ವೇತ್ಸಿ ಕವಿಂ ಪುರಾಣಂ**" "ನೀನು ಒಬ್ಬನೇ ಎಂದು ತಿಳಿದಿರುತ್ತೀಯೋ, ನಿನ್ನ ಹೃದಯ ಗುಹೆಯಲ್ಲಿಯೇ ಶಯನಿಸಿರುವ ಮಹಾನುಭಾವನನ್ನು ನೀನು ಅರಿಯೆಯಾ" ಎಂದು ಹೇಳಲ್ಪಟ್ಟಿರುತ್ತದೆ.

**ಆಕರ್ಷಕಃ** - ಅಯಸ್ಕಾಂತ ಶಿಲೆಯು **ಆತ್ಮನಶ್ಶಕ್ತ್ಯಾ** - ತನ್ನ ಶಕ್ತಿಯಿಂದ, **ಲೋಹಂ** ಕಬ್ಬಿಣವನ್ನು, **ಆತ್ಮಭಾವಂ** - ತನ್ನ ಸ್ವಭಾವ ಹೇಗೋ, ಹಾಗೆಯೇ ಆಕರ್ಷಿಸುವ ಸ್ವಭಾವವನ್ನು, **ನಯತಿ** - ಹೊಂದಿಸುತ್ತದೋ ಹಾಗೆಯೇ, **ವಿಕಾರ್ಯಂ** – ಪ್ರಕೃತಿ ಸಂಬಂಧದಿಂದ ದೋಷಯುಕ್ತವಾದುದಾಗಿದ್ದ, **ಏನಂ** - ಈ, **ಬ್ರಹ್ಮಧ್ಯಾಯಿನಂ** - ಪರಬ್ರಹ್ಮಧ್ಯಾನಿಯಾದ, **ಮುನಿಂ** - ಮೌನದಿಂದ ಮನನಶೀಲನಾದವನನ್ನು, **ತತ್** - ಆ ಪರಬ್ರಹ್ಮನು, **ಆತ್ಮನಃ ಶಕ್ತ್ಯಾ** - ತನ್ನ ಶಕ್ತಿಯಿಂದಲೇ, **ನಯತಿ** - ಹೊಂದಿಸುವದು.

ಇತ್ಯಾದಿ **ಅನೇಕ** ಪ್ರಮಾಣಗಳಿಗೆ ಶ್ರೀ ಶಂಕರಾಚಾರ್ಯರ ಸ್ವರೂಪೈಕ್ಯಾಭಿಪ್ರಾಯವು ವಿರೋಧವಾದುದಾಗಿರುತ್ತದೆ. ಇಲ್ಲಿ ಪರಮಾತ್ಮನಿಗೆ ಸ್ವಭಾವವುಂಟೆಂದು ಹೇಳಿರುವದರಿಂದ ನಿರ್ಗುಣವಾದವೂ ಅಪ್ರಾಮಾಣಿಕವಾದುದೆಂಬುದು ಸ್ಪಷ್ಟವು. ಆದುದರಿಂದ ಸಾಯುಜ್ಯವೆಂದರೆ ಸಾಯುಜ್ಯದ ಭಾವವು ಎಂದರೆ ಜೀವಾತ್ಮನು ಪರಮಾತ್ಮ ಸ್ವಭಾವವುಳ್ಳವನಾಗಿ ಪರಮಾತ್ಮನಿಗೆ ಸದೃಶನಾದವನಾಗುವನೆಂಬ ಭಾವವು **ನಿರಂಜನಃ ಪರಮಂ ಸಾಮ್ಯಮುಪೈತಿ** ಎಂಬ ಶ್ರುತ್ಯಭಿಪ್ರಾಯವೇ, ಮಮಸಾಧರ್ಮ್ಯಮಾಗತಾಃ ಎಂಬ ಗೀತಾವಾಕ್ಯದಲ್ಲಿ ಉಪಪಾದಿತವಾಗಿರುವದರಿಂದ, **ಪರಮಂ ಸಾಮ್ಯಂ** ಎಂಬುವದಕ್ಕೆ ಪರಬ್ರಹ್ಮಸಾಧರ್ಮ್ಯವೆಂಬೇ ಅರ್ಥ **ಮಾಡಬೇಕೆಂದು** ಹೇಳಿದಂತಾಯಿ**ತು**. ಪರಬ್ರಹ್ಮನಿಗೆ ಸದೃಶವಾದ ಧರ್ಮ ಉಳ್ಳೋಣನೇ ನಾಯುಜ್ಯವು, ಮತ್ತು ಪರಬ್ರಹ್ಮನು ಪ್ರಾಪ್ಯಸ್ಥಿತಿಯಲ್ಲೂ ಧರ್ಮವುಳ್ಳವನೆಂದು ಹೇಳಿದಂತಾಯಿತು. ಇದರಿಂದ ನಿರ್ಗುಣಬ್ರಹ್ಮವೆಂಬುವದು ಅಪಸಿದ್ಧಾಂತವೆಂಬುದೂ ತೋರಿಬರುತ್ತದೆ.

(೬) "**ಮಮ**-ನನ್ನ, **ಸಾಧರ್ಮ್ಯಂ**-ಸಮಾನ ಧರ್ಮವುಳ್ಳ ಭಾವವನ್ನು, **ಆಗ**

---

(೪) ಗೀ ೧೪. ೨.

ತಾಃ-ಹೊಂದಿದವರು" ಎಂದು **ಗೀತಾಚಾರ್ಯನು** ನ್-ಗೀತೋಪದೇಶಿಕರಾದ ಶ್ರೀ ಕೃಷ್ಣ ಭಗವಾನರು, **ಅರುಳಿಚ್ಚೆಯ್‌ದಾರ್** – ಕೃಪಯಾ ಹೇಳಿರುತ್ತಾರೆ. ಮುಂದೆ **"ಸರ್ಗೇಽಪಿ ನೋಪಜಾಯನ್ತೇ ಪ್ರಳಯೇ ನ ವ್ಯಥನ್ತಿ ಚ"** ಈ ಮುಕ್ತರು ಸೃಷ್ಟಿಕಾಲದಲ್ಲೂ ಪುನಃ ಜನ್ಮವೆತ್ತುವದಿಲ್ಲವು, ಪ್ರಳಯದಲ್ಲೂ ಕ್ಲೇಶವನ್ನು ಹೊಂದುವದಿಲ್ಲವು, ಎಂದು ಹೇಳಲ್ಪಟ್ಟಿರುತ್ತದೆ

ಸಾಧರ್ಮ್ಯವೆಂದು ಹೇಳಿರುವದರಿಂದ ಪರಬ್ರಹ್ಮವೂ ಮುಕ್ತನೂ ಇಬ್ಬರೂ ಧರ್ಮಮುಕ್ತರೆಂದು ತಿಳಿಬರುವದರಿಂದ ನಿರ್ಗುಣವಾದಕ್ಕೆ ಅವಕಾಶವೇ ಇಲ್ಲವು. ಇಬ್ಬರೂ ಸಮಾನ ಧರ್ಮರು ಎಂದು ಹೇಳಿರುವುದರಿಂದ, ಸ್ವರೂಪೈಕ್ಯವಾದವು ಒಂದು ಕ್ಷಣವೂ ನಿಲ್ಲಲಾರದು. ಸ್ವರೂಪೈಕ್ಯವಾಗಿ ಬೇರೇ ಸ್ಥಿತಿಯೇ ಇಲ್ಲದಿರುವ ಈ ಮೋಕ್ಷಕ್ಕಿಂತ, ಋಷಿಗಳ ಹಾಗೆ ಪ್ರವರ್ತನೆಯನ್ನು ಹೊಂದಿ ಈ ಲೋಕದಲ್ಲೇ ಸದಾ ಇರುವ ಸ್ಥಿತಿಯು ಸಾಧ್ಯವಾದುದಾದರೆ ಸರ್ವೋತ್ಕೃಷ್ಟ ಸ್ಥಿತಿಯೆಂದು ಆಗ ಭಾವಿಸತಕ್ಕದ್ದಾಗುತ್ತದೆ. ಶ್ರೀ ಶಂಕರಾಚಾರ್ಯರವರು **"ಮಮ ಸಾಧರ್ಮ್ಯಮಾಗತಾಃ"** ಎಂಬುದಕ್ಕೆ ವ್ಯಾಖ್ಯಾನವಾಗಿ **"ಮತ್ಸ್ವರೂಪಂ ಪ್ರಾಪ್ತಾಃ, ನತು ಸಮಾನ ಧರ್ಮತಾ ಸಾಧರ್ಮ್ಯಂ, ಕ್ಷೇತ್ರಜ್ಞೇಶ್ವರಯೋಃ ಭೇದಾನಭ್ಯುಪಗಮಾತ್ ಗೀತಾಶಾಸ್ತ್ರೇ"** ಎಂದು ಬರೆದಿರುತ್ತಾರೆ. ಸಾಧರ್ಮ್ಯಂ ಎಂಬುದಕ್ಕೆ ಸ್ವರೂಪವೆಂದರ್ಥವೇ ವಿನಾ ಸಮಾನ ಧರ್ಮವುಳ್ಳ ಭಾವವೆಂದಲ್ಲವು, ಎಂದು ಹೇಳಿ, ಗೀತಾಶಾಸ್ತ್ರದಲ್ಲಿ ಜೀವಾತ್ಮ ಪರಮಾತ್ಮರುಗಳಿಗೆ ಭೇದವನ್ನು ಅಂಗೀಕರಿಸುವದಿಲ್ಲವಾದುದರಿಂದ, ಎಂಬ ಹೇತುವನ್ನು ಹೇಳಿರುತ್ತಾರೆ ಈ ಹೇತುವು ಅಸಿದ್ಧಿದೋಷಯುಕ್ತವಾದುದು; ಏಕೆಂದರೆ ಗೀತಾವಾಕ್ಯದಲ್ಲೇ **"ಉತ್ತಮಃ ಪುರುಷಸ್ತ್ವನ್ಯಃ"** (ಗೀ. ೧೫-೧೭) ಎಂದು ವಿಶದವಾಗಿ ಭೇದವು ಕಂಠೋಕ್ತವಾಗಿರುವದರಿಂದ ಅದ್ವೈತಸಿದ್ಧಾಂತವನ್ನು ಗೀತಾಶಾಸ್ತ್ರವು ಅಂಗೀಕರಿಸಿಲ್ಲವು ಎಂದು ಹೇಳಿದ್ದರೆ ಪ್ರಾಮಾಣಿಕವಾದ ವಾಕ್ಯವಾಗುತ್ತಿತ್ತು. ಇಲ್ಲಿ ಅನ್ಯಃ ಎಂದರೆ ಸ್ವರೂಪತಃ ಅನ್ಯನಾಗಿ ವಿಲಕ್ಷಣನಾದವನು ಎಂದು ಅರ್ಥ ಮಾಡದೆ ಉಪಾಧಿ ಸ್ವಭಾವದಿಂದ ಅನ್ಯಃ ಎಂದು ಅರ್ಥ ಮಾಡಿರುತ್ತಾರೆ ಸಾಧರ್ಮ್ಯಕ್ಕೆ ಸಮಾನ ಧರ್ಮವಲ್ಲ, ಸಮಾನ ಸ್ವರೂಪವೆಂದು ಅರ್ಥ ಮಾಡುವದೂ, ಸ್ವರೂಪತಃ ಅನ್ಯವಾದುದಕ್ಕೆ ಉಪಾಧಿ ಮಾತ್ರದಿಂದ ಅನ್ಯವೆಂದು ಅರ್ಥ ಮಾಡುವದೂ, ಹೇಗೆ ಸಮಂಜಸವೆಂಬುದನ್ನು ನಿಷ್ಪಕ್ಷಪಾತಿಗಳು ಆಲೋಚಿಸಬಹುದು. ಗೀತೆಯು **"ನತ್ವೇವಾಹಂ ಜಾತು ನಾಸಂ"** ಎಂಬಲ್ಲಿ, ಸರಿಯಾದ ಜ್ಞಾನವಿಲ್ಲದೆ ಶೋಕಿಸುತ್ತಾ, ತನಗೆ ಪರಮಾರ್ಥ ಜ್ಞಾನವನ್ನುಪದೇಶಿಸಯ್ಯಾ, **"ಶಾಧಿಮಾಂ ತ್ವಾಂ ಪ್ರಪನ್ನಂ"** ಎಂದು ಅತಿ ದೈನ್ಯದಿಂದ ಬೇಡಿದ ಅರ್ಜುನನಿಗೆ ಪರಮಾರ್ಥವನ್ನು ಹೇಳಲ

ಇವ್ವರ್ಥತ್ರೈ (೧) "ಪರೇಣ ಪರಧರ್ಮೀಚ ಭವತ್ಯೇಷ ಸಮೇತ್ಯವೈ । ವಿಶುದ್ಧಧರ್ಮಾ ಶುದ್ಧೇನ ಬುದ್ಧೇನ ಚ ಸ ಬುದ್ಧಿಮಾನ್ । ವಿಮುಕ್ತ ಧರ್ಮಾ ಮುಕ್ತೇನ ಸಮೇತ್ಯ ಭರತರ್ಷಭ । ವಿಯೋಗ ಧರ್ಮಿಣಾಚೈವ ವಿಯೋ

---

ತೊಡಗಿದ ಪ್ರಥಮ ಶ್ಲೋಕದಲ್ಲೇ, "ಅಹಂ, ತ್ವಂ ಇಮೇ" ಎಂಬ ಶಬ್ದಗಳಿಂದ ಜೀವಾತ್ಮ ಪರಮಾತ್ಮ ಭೇದವನ್ನೂ, ಜೀವಾತ್ಮರ ಪರಸ್ಪರಭೇದವನ್ನೂ, ಬೋಧಿಸಿರುತ್ತಾರೆ. ಕೊನೆಯ ಶ್ಲೋಕದಲ್ಲೂ "ಸರ್ವಧರ್ಮಾನ್ ಪರಿತ್ಯಜ್ಯ" ಎಂಬಲ್ಲಿಯೂ, ಅಹಂ ತ್ವಾ ಎಂಬ ಪ್ರಯೋಗದಿಂದ ಪ್ರಾಪ್ತಾವೇ ಬೇರೆ, ಪ್ರಾಪ್ಯನೇ ಬೇರೆ ಎಂದು ಗೀತೆಯಲ್ಲೆಲ್ಲಾ ಪ್ರತಿಪಾದಿತವೇ ವಿನಾ, ಅಭೇದವೆಂದಿಗೂ ಇಲ್ಲವು.

ಶ್ರೀ ವ್ಯಾಸಮಹರ್ಷಿಯು "ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ" ಸರ್ವಶಾಸ್ತ್ರಗಳಲ್ಲೂ ನಿಪುಣತೆಯನ್ನು ಹೊಂದಿದವರಾಗಿ, ಪುನಃ ಪುನಃ ಅವುಗಳನ್ನು ಪರಿಶೀಲಿಸಿ ಸಿದ್ಧಾಂತಾರ್ಥಗಳನ್ನು ವ್ಯವಸ್ಥೆ ಮಾಡಿರುವದರಿಂದ, ಅಂತಹ ಮಹನೀಯರಭಿಪ್ರಾಯಕ್ಕೂ ಈ ಶ್ರೀ ಶಂಕರಾಭಿಪ್ರಾಯವು ಪರಮವಿರುದ್ಧವಾದುದೆಂದು ತಿಳಿಸುವದಕ್ಕಾಗಿ ಮೋಕ್ಷಧರ್ಮದ ವಸಿಷ್ಠ ಕರಾಳ ಸಂವಾದದಲ್ಲಿ ಸಿದ್ಧಾಂತಿಸಲ್ಪಟ್ಟ ಅಭಿಪ್ರಾಯವನ್ನುದಾಹರಿಸಿರುತ್ತಾರೆ. ಪರಮಂ ಸಾಮ್ಯಂ ಎಂದರೆ ಸಾಧರ್ಮ್ಯಂ ಎಂದು ಗೀತೆಯಲ್ಲಿ ಸಂಗ್ರಹವಾಗಿ ಹೇಳಿದುದನ್ನೇ ವಿಶದವಾಗಿ ಉಪಪಾದನೆ ಮಾಡಿ ಈ ಸಂವಾದದಲ್ಲಿ ಹೇಳಿರುವದರಿಂದ, ಆ ತತ್ವಾರ್ಥವೇ ಪರಮಗ್ರಾಹ್ಯವೆಂದು ತಿಳಿಸುವದಕ್ಕಾಗಿಯೂ ಅಲ್ಲಿನ ಶ್ಲೋಕಗಳನ್ನುದಾಹರಿಸಿರುತ್ತಾರೆ.

"ಏಷಃ - ಈ ಮುಕ್ತನು, ಪರೇಣ ಸಮೇತ್ಯ - ಪರವಸ್ತುವಾದ ವಾಸುದೇವನೊಂದಿಗೆ ಸೇರಿದವನಾಗಿ, ಪರಧರ್ಮೀಚ ಭವತಿ - ಪರಬ್ರಹ್ಮನು ಯಾವ ಧರ್ಮಗಳುಳ್ಳವನೋ, ಅಂತಹ ಧರ್ಮಗಳುಳ್ಳವನೇ ಆಗುತ್ತಾನೆ ಎಂದರೆ ಪ್ರಕೃತಿ ಸಂಬಂಧ ತೊಲಗಿದುದರಿಂದ ತತ್ಸದೃಶವಾದ ಧರ್ಮಗಳುಳ್ಳವನಾಗುತ್ತಾನೆ. ಮುಂದೆ ಇದನ್ನೇ ವಿಸ್ತರಿಸಿ ಹೇಳುತ್ತಾರೆ:— ಶುದ್ಧೇನ - ಅವಿದ್ಯಾದಿ ದೋಷಗಂಧರಹಿತನಾಗಿ ಅಪಹತಪಾಪ್ಮನಾದ ಪರಮಾತ್ಮನೊಂದಿಗೆ, ಸಮೇತ್ಯ, ವಿಶುದ್ಧ ಧರ್ಮಾ - ಅವಿದ್ಯಾದಿ ದೋಷಗಂಧರಹಿತನಾಗುವನು, ಬುದ್ಧೇನ ಚ ಸಮೇತ್ಯ - ಸರ್ವಜ್ಞನಾದ ಪರಮಾತ್ಮನೊಂದಿಗೆ ಸೇರಿ, ಬುದ್ಧಿಮಾನ್ ಭವತಿ - ಮುಕ್ತನೂ ಸರ್ವಜ್ಞನಾಗುವನು. ಓ ಭರತರ್ಷಭ - ಓ ಭರತವಂಶದ ಕರಾಳರಾಜನೇ;

---

(೧) ಭಾರತ ಶಾಂತಿ. ೩೧೩—೨೭, ೩೧.

**ಗಾತ್ಮಾ ಭವತ್ಯಪಿ । ವಿಮೋಕ್ಷಿಣಾ ವಿಮೋಕ್ಷೀಚ ಸಮೇತ್ಯೈಷ ತಥಾ ಭವೇತ್ । ಶುಚಿಕರ್ಮಣಾ ಶುಚಿಶ್ಚೈಷ ಭವತ್ಯಮಿತದೀಪ್ತಿಮಾನ್ । ವಿಮಲಾತ್ಮಾ ಚ ಭವತಿ ಸಮೇತ್ಯ ವಿಮಲಾತ್ಮನಾ । ಕೇವಲಾತ್ಮಾ ತಥಾಚೈಷ ಕೇವಲೇನ ಸಮೇತ್ಯವೈ । ಸ್ವತಂತ್ರಶ್ಚ ಸ್ವತಂತ್ರೇಣ ಸ್ವತಂತ್ರತ್ವಮವಾಪ್ನುತೇ**

ಎಂದು ಸಂಬೋಧಿಸಿ ವಸಿಷ್ಠರು ಹೇಳುತ್ತಾರೆ, **ಮುಕ್ತೇನ ಸಮೇತ್ಯ** - ಯಾವ ಬಂಧವೂ ಇಲ್ಲದ ಪರಮಾತ್ಮನೊಂದಿಗೆ ಸೇರಿ ಮುಕ್ತನೂ, **ವಿಮುಕ್ತ ಧರ್ಮಾ ಭವತಿ** - ಬಿಡಲ್ಪಟ್ಟ ಎಲ್ಲಾ ಬಂಧಗಳುಳ್ಳವನಾಗುತ್ತಾನ. **ಮುಕ್ತೇನ** - ಎಂದರೆ ಸಾರಸಂಗ್ರಹ ವ್ಯಾಖ್ಯಾತೃವು ಇಂದ್ರಿಯಾಧೀನವಾದ ಜ್ಞಾನವಿಲ್ಲದ ಪರಮಾತ್ಮನೆಂದು ಹೇಳಿರುತ್ತಾರೆ **ವಿಯೋಗ ಧರ್ಮಿಣಾ** - ದುಃಖವು ಇಲ್ಲದಿರುವ, ಪರಮಾತ್ಮನಿಂದ, **ಸಮೇತ್ಯ** - ಸೇರಿದವನಾಗಿ, **ವಿಯೋಗಾತ್ಮಾಪಿ** - ಈತನು ದುಃಖವಿಲ್ಲದಂಥಾವನೂ ಕೂಡ, **ಭವತಿ** - ಆಗುವನು, **ಏಷಃ** - ಈ ಮುಕ್ತನು, **ವಿಮೋಕ್ಷಿಣಾ ಸಮೇತ್ಯ** - ಮಹಾನಂದವನ್ನು ಹೊಂದಿರುವ ಪರಬ್ರಹ್ಮನೊಂ**ದಿಗೆ** ಬಂದು ಸೇರಿದವನಾಗಿ, **ತಥಾ** - ಹಾಗೆಯೇ, **ವಿಮೋಕ್ಷೀಚ ಭವೇತ್** - ತಾನೂ ನಿರತಿಶಯಾನಂದಯುಕ್ತನಾಗುವನು." **"ರಸೋವೈಸಃ ರಸಂಹ್ಯೇವಾಯಂ ಲಬ್ಧ್ವಾನಂದೀಭವತಿ"** ಎಂಬ ತೈತ್ತರೀಯ ಆನಂದವಲ್ಲಿಯ ಶ್ರುತ್ಯರ್ಥವು ಇಲ್ಲಿ ಉಪಪಾದಿಸಲ್ಪಟ್ಟಿತು **"ಮುಕ್ತಿರ್ಮೋಕ್ಷೋ ಮಹಾನಂದಃ"** ಎಂಬ ವಾಕ್ಯಾನುಸಾರವಾಗಿ, ಇಲ್ಲಿ ಮೋಕ್ಷಶಬ್ದಕ್ಕೆ ಆನಂದವೆಂಬರ್ಥವು. ಸಾರಪ್ರಕಾಶಿಕೆಯವರು, ವಿಮೋಕ್ಷೀ ಎಂಬುವದಕ್ಕೆ ಅವಿದ್ಯಾಕರ್ಮ ವಾಸನಾರುಚಿಗಳಿಂದ ಬಿಡಲ್ಪಟ್ಟವರಾಗುತ್ತಾರೆಂದು ಅರ್ಥ ಮಾಡಿರುತ್ತಾರೆ. **ಶುಚಿಕರ್ಮಣಾ** - ಹೇಯವಾದ ಕರ್ಮಸಂಬಂಧವಿಲ್ಲದವನಾದುದರಿಂದ ಪರಿಶುದ್ಧವಾದ ವ್ಯಾಪಾರಗಳುಳ್ಳ ಪರಮಾತ್ಮನೊಂದಿಗೆ, **ಸಮೇತ್ಯ** - ಸೇರಿದವನಾಗಿ, **ಏಷಃ** - ಈ ಮುಕ್ತನು, **ಶುಚಿಃ**- ಹಾಗೆಯೇ ಕರ್ಮಸಂಬಂಧವಿಲ್ಲದೆ ಪರಿಶುದ್ಧವ್ಯಾಪಾರಗಳುಳ್ಳವನಾಗಿಯೂ, **ಅಮಿತದೀಪ್ತಿಮಾನ್** - ನಿರವಧಿಕ ಜ್ಞಾನದೀಪ್ತಿಯುಳ್ಳವನಾಗಿಯೂ ಅಥವಾ ನಿರತಿಶಯ ಕಾಂತಿಯುಳ್ಳ ದಿವ್ಯಮಂಗಳವಿಗ್ರಹಯುಕ್ತನಾಗಿಯೂ ಅಪಹತಪಾಪ್ಮತ್ವಾದಿ ಗುಣಾಷ್ಟಕಗಳಿಂದ ಪ್ರಕಾಶಿಸುವನಾಗಿಯೂ, **ಭವತಿ** ಆಗುವನು. **ವಿಮಲಾತ್ಮನಾ** - ಸತ್ವಾದಿ ಗುಣರಾಹಿತ್ಯದಿಂದ ಪರಿಶುದ್ಧನಾದ ಪರಮಾತ್ಮನಿಂದ, **ಸಮೇತ್ಯ** - ಸೇರಿದವನಾಗಿ, **ಏಷಃ** - ಈ ಮುಕ್ತನೂ, **ವಿಮಲಾತ್ಮಾಚ**-ಸತ್ವಾದಿ ಗುಣರಹಿತನಾಗಿ, **ಭವತಿ** - ಆಗುವನು, **ಕೇವಲೇನ ಸಮೇತ್ಯವೈ** - ಪ್ರಾಕೃತ ದೇಹೇಂದ್ರಿಯಾದಿ

**(ಮಮಾಪ್ನುತೇ) ಏತಾವದೇ ತತ್ಕಥಿತಂ ಮಯಾತೇ ತಥ್ಯಂ ಮಹಾರಾಜ ಯಥಾರ್ಥತತ್ವಮ್ । ಅಮತ್ಸರಸ್ತ್ವಂ ಪ್ರತಿಗೃಹ್ಯ ಚಾರ್ಥಂ ಸನಾತನಂ**

---

ಗಳಿಲ್ಲದ ಅಪ್ರಾಕೃತ ದಿವ್ಯಮಂಗಳವಿಗ್ರಹವುಳ್ಳ ಪರಮಾತ್ಮನೊಂದಿಗೆ ಸೇರಿದವನಾಗಿ, **ಏಷಃ ತಥಾ** - ಈ ಮುಕ್ತನೂ ಹಾಗೆಯೇ, **ಕೇವಲಾತ್ಮಾ (ಭವತಿ)** - ಪ್ರಾಕೃತ ದೇಹೇಂದ್ರಿಯಗಳಿಲ್ಲದೆ, ದಿವ್ಯಮಂಗಳವಿಗ್ರಹಯುಕ್ತನಾಗುವನು, **ಸ್ವತಂತ್ರೇಣ ಸಮೇತ್ಯ** - ಅಕರ್ಮವಶ್ಯನೊಂದಿಗೆ ಸೇರಿದವನಾಗಿ ತಾನೂ, **ಸ್ವತಂತ್ರಶ್ಚ** - ಅಕರ್ಮವಶ್ಯನಾಗಿ, **ಸ್ವತಂತ್ರತ್ವಮುಪಾಶ್ನುತೇ**-ಭಗವಂತನ ಸ್ವಾತಂತ್ರ್ಯವನ್ನನುಭವಿಸುವನು. ಸದಾ ಪರಮಾತ್ಮನಿಗಧೀನನಾದವನಾಗುವನು ಎಂಬರ್ಥವು **"ಸಸ್ವರಾಡ್ಭವತಿ"** ಎಂಬ ಶ್ರುತ್ಯರ್ಥವೂ **"ಪಾರತಂತ್ರ್ಯಂ ಪರೇಪುಂಸಿ"** ಪರಮಾತ್ಮನಿಗೆ ತಾನು ಯಾವಾಗಲೂ ಪರತಂತ್ರನೆಂದು ತಿಳಿಯುವನು ಎಂಬ ಶ್ರುತ್ಯರ್ಥವೂ ಇಲ್ಲಿ ಹೇಳಲ್ಪಟ್ಟಿತು. ಇಲ್ಲಿ **ಅಮಾಪ್ನುತೇ** ಎಂಬ ಪಾಠಾಂತರವಾದರೆ ಸ್ವಾತಂತ್ರ್ಯವನ್ನು ಹೊಂದುಪನೆಂಬರ್ಥ ಉಂಟಾಗುವದರಿಂದ, ಅದು **ಸ್ವತಂತ್ರಶ್ಚ** ಎಂಬಲ್ಲಿಯೇ ಉಂಟಾಗುವದರಿಂದ ಈ ಪಾಠಾಂತರವು ಸ್ವಾರಸ್ಯವಾದುದಲ್ಲವು. ಅಕರ್ಮವಶ್ಯನಾಗಿ ಸ್ವತಂತ್ರನಾದರೂ, ಭಗವಂತನಿಗಧೀನವಲ್ಲದೆ ಸ್ವತಂತ್ರನಲ್ಲವು ಎಂದು ಹೇಳುವದಕ್ಕಾಗಿ **ಸ್ವತಂತ್ರತ್ವಮುಪಾಶ್ನುತೇ** - ಭಗವಂತನ ಸ್ವತಂತ್ರವನ್ನನುಭವಿಸುವನು ಎಂದರೆ ಆತನಿಗೆ ಸದಾ ಅಧೀನನಾಗಿರುವದರಲ್ಲಿ ತುಂಬಾ ಆಸಕ್ತಿಯುಳ್ಳವನೆಂಬ ಸ್ವಾರಸ್ಯಾರ್ಥವು ತೋರಿಬರುತ್ತದೆ. ಮುಂದಿನ ವಾಕ್ಯದಿಂದ ಕರಾಳನೃಪನು, ಮುಕ್ತನಿಗೆ ಸರ್ವೇಶ್ವರನ ಕೃಪಯಾ ಪ್ರಾಪ್ತವಾಗುವ ಇಂತಹ ಪರಮ ವೈಭವವನ್ನೂ ಪರಮಾತ್ಮನೊಂದಿಗೆ ಪರಮ ಸಾಮ್ಯವನ್ನೂ ಹೊಂದುವನೆಂದು ತಾವು ವಿಶದವಾಗಿ ಹೇಳಿದ ಮಾತಿನಲ್ಲಿ ಸಂಶಯವುಳ್ಳವನಾದಾನೆಂದು ತಿಳಿದು **ವಸಿಷ್ಠ** ಮಹರ್ಷಿಯು ತಾವು ಈಗ ಹೇಳಿದುದು ಪರಮ ಯಥಾರ್ಥಾಭಿಪ್ರಾಯವೆಂದುಪದೇಶಿಸುತ್ತಾರೆ:—"ಹೇ **ಮಹಾರಾಜ** - ಓ ಮಹಾರಾಜನಾದ ಕರಾಳನೇ, **ಏತಾವತ್** - ಇಷ್ಟು ಮಾತ್ರ ಮೋಕ್ಷ ವಿಷಯದಲ್ಲಿ, **ಮಯಾ** - ನನ್ನಿಂದ, **ತೇ** - ನಿನಗಾಗಿ, **ಯಥಾರ್ಥ ತತ್ವಮ್** - ನಿಜವಾದ ತತ್ವಾಭಿಪ್ರಾಯವೆಂದು, **ಕಥಿತಂ** - ಹೇಳಲ್ಪಟ್ಟದ್ದು, **ತಥ್ಯಂ** - ಸತ್ಯವಾದದ್ದು, **ಅಮತ್ಸರಃ** - ಈ ನಮ್ಮ ಅಭಿಪ್ರಾಯಗಳಲ್ಲಿ ಮಾತ್ಸರ್ಯವಿಲ್ಲದವನಾಗಿ, **ತ್ವಂ** - ನೀನು, **ಅರ್ಥಮ್** - ನಾವು ಹೇಳಿದುದನ್ನು, **ಪ್ರತಿಗೃಹ್ಯ** - ಅಂಗೀಕರಿಸಿ, **ಸನಾತನಂ** - ಅನಾದಿಯಾಗಿರುವ, **ವಿಶುದ್ಧಂ** - ಅವಿದ್ಯಾದಿ ದೋಷಗಂಧವೂ ಇಲ್ಲದ,

ಬ್ರಹ್ಮವಿಶುದ್ಧ ಮಾದ್ಯಮ್" ಎನ್ರು ವಸಿಷ್ಠ ಕರಾಳ ಸಂವಾದತ್ತಿಲುಮ್ ಪರಕ್ಕಪ್ಪೇಶಿ, ಇದುವೇ ಪರಮಾರ್ಥಮೆನ್ರು ಮಹರ್ಷಿ ನಿಗಮಿತ್ತಾರ್. ಇಙ್ಗುಮುಕ್ತನೈ ಸ್ವತನ್ತ್ರನೆಙ್ಗಿರದು ಕರ್ಮವಶ್ಯನನ್ರೆನ್ರುಪಡಿ. ಮುಕ್ತ ವಿಷಯಮಾನ ಸ್ವರಾಟ್ಛಬ್ದತ್ತೈ "ಅಕರ್ಮವಶ್ಯಃ ಎನ್ರು ಭಾಷ್ಯಕಾರರ್ ವ್ಯಾಖ್ಯಾನಮ್ ಪಣ್ಣಿ ಯರುಳಿನಾರ್.

---

ಆದ್ಯಮ್ - ಎಲ್ಲಾದಕ್ಕೂ ಮೂಲಕಾರಣಭೂತನಾದ, ಬ್ರಹ್ಮ - ಪರಬ್ರಹ್ಮನನ್ನು, ಉಪಾಸ್ಯ - ಉಪಾಸನೆ ಮಾಡತಕ್ಕದ್ದು' ಎನ್ರು - ಎಂಬದಾಗಿ, ವಸಿಷ್ಟ ಕರಾಳ ಸಂವಾದದಲ್ಲಿ, ಪರಕ್ಕಪೇಶಿ-ಸವಿಸ್ತರವಾಗಿ ಹೇಳಿ, ಇದುವೇ - ಪರಮಂ ಸಾಮ್ಯಂ ಎಂಬ ಶಬ್ದಕ್ಕೂ ಸಾಯುಜ್ಯಶಬ್ದಕ್ಕೂ ಸಮಾನ ಧರ್ಮವೇ, ಪರಮಾರ್ಥಮೆನ್ರು - ಸಮಂಜಸವಾದ ಸತ್ಯವಾದ ಅರ್ಥವೆಂದು, ಮಹರ್ಷಿ - ವಸಿಷ್ಠ ಮಹರ್ಷಿಯು, ನಿಗಮಿತ್ತಾರ್ - ಮುಗಿಸಿ ಹೇಳಿರುತ್ತಾರೆ. ಹೀಗೆ "ಪರಮ ಸಾಮ್ಯ" ವೆಂಬುದಕ್ಕೂ, "ನಾರಾಯಣ ಸಾಯುಜ್ಯಮವಾಪ್ನೋತಿ" ಎಂಬಲ್ಲಿರುವ "ಸಾಯುಜ್ಯ" ಶಬ್ದಕ್ಕೂ "ಸಾಧರ್ಮ್ಯ" ವೆಂಬರ್ಥವನ್ನು ಶ್ರೀ ಭಗವದ್ಗೀತೆಯಲ್ಲಿ ಹೇಳಿರುವದನ್ನೇ ಇಲ್ಲಿ ವಿವರಿಸಿ ಮುಕ್ತನು ಪರಮಾತ್ಮನಿಗೆ ಸಮಾನವಾದ ಧರ್ಮಗಳುಳ್ಳವನಾಗುತ್ತಾನೆಂದು ಹೇಳಲ್ಪಟ್ಟಿತು. ಆದರೆ ಮೇಲಿನ ಸಂವಾದದಲ್ಲಿ ಪರಮಾತ್ಮನಂತೆ ಸ್ವತಂತ್ರನಾಗುತ್ತಾನೆಂದು ಹೇಳಿರುವದರಿಂದ ಇನ್ನೊಬ್ಬನೂ ಸ್ವತಂತ್ರನಾಗುವನೆಂದರೆ ಪರಮಾತ್ಮನ ಸ್ವಾತಂತ್ರ್ಯಕ್ಕೆ ವಿರುದ್ಧವಾಗುವದರಿಂದ ಸ್ವತಂತ್ರ ಬ್ರಹ್ಮೈಕ್ಯವೆಂಬಭಿಪ್ರಾಯ ಉಂಟಾದೀತೆಂದು ಭಾವಿಸಿ ಸ್ವತಂತ್ರ ಶಬ್ದಕ್ಕೆ ಅಕರ್ಮವಶ್ಯನೆಂದು ಅರ್ಥ ಹೇಳಿ, ಯಾವಾಗ ಕರ್ಮಾಧೀನತೆಯಿಲ್ಲವೋ ಆಗ ಈತನು ಸ್ವತಂತ್ರನ ಹಾಗೆಂಬ ಭಾವವು. ಇಙ್ಗು - ಈ ಮೇಲಿನ ವಸಿಷ್ಠ ಕರಾಳ ಸಂವಾದದಲ್ಲಿ, ಮುಕ್ತನೈ ಸ್ವತಂತ್ರನೆಙ್ಗಿರದು - ಮುಕ್ತನನ್ನು ಸ್ವತಂತ್ರನೆಂದು ಹೇಳಿರುವದು, ಅಕರ್ಮವಶ್ಯನೆನ್ರುಪಡಿ - ಆಗ ಕರ್ಮವಶ್ಯತೆ ಇಲ್ಲದವನೆಂದು ಹೇಳಿದ ಹಾಗೆಂಬ ಭಾವವು. ಮುಕ್ತ ವಿಷಯಮಾನ - ಮುಕ್ತನನ್ನು ಕುರಿತು ಶ್ರುತಿಯಲ್ಲಿ ಹೇಳಿರುವ, ಸ್ವರಾಟ್ಛಬ್ದತ್ತೈ - "ಸಸ್ಸ್ವರಾಡ್ಭವತಿ" (ಛಾಂ. ೭ ೨೫.೨ ) ಎಂಬುದರಲ್ಲಿರುವ ಸ್ವರಾಟ್ ಎಂಬ ಶಬ್ದಕ್ಕೆ, ಅಕರ್ಮವಶ್ಯನೆಂದು ಶ್ರೀ ಭಾಷ್ಯಕಾರರು ವ್ಯಾಖ್ಯಾನ ಮಾಡಿ, ಅರುಳಿನಾರ್ - ಕೃಪಯಾ ಉಪದೇಶಿಸಿದರು "ದಾಸಭೂತಾಸ್ಸ್ವತಸ್ಸರ್ವೇ ಹ್ಯಾತ್ಮಾನಃ ಪರಮಾತ್ಮನಃ"। "ನಾನ್ಯಥಾ ಲಕ್ಷಣಂ ತೇಷಾಂ ಬಂಧೇ ಮೋಕ್ಷೇ ತಥೈವ ಚ॥" ಈ ಚೇತನನು

ಸ್ವಭಾವತಃ ಬದ್ಧಾವಸ್ಥೆಯಲ್ಲಾಗಲಿ ಮುಕ್ತಾವಸ್ಥೆಯಲ್ಲಾಗಲಿ ಪರಮಾತ್ಮನಿಗೆ ದಾಸಭೂತನಾಗಿದ್ದುಕೊಂಡು ಆತನಿಗೆ ಯಾವಾಗಲೂ ಕೈಂಕರ್ಯ ಮಾಡುವದೇ ಸ್ವರೂಪವೆಂದು ಹೇಳಿರುವಾಗ, ಸ್ವತಂತ್ರನು ಹೇಗೆ ಎಂದರೆ ಸರ್ವೇಶ್ವರನು ಹೇಗೆ ಕರ್ಮಕ್ಕೆ ಅಧೀನನಲ್ಲವೋ ಹಾಗೆಯೇ ಈ ಮುಕ್ತನೂ ಅಲ್ಲವೆಂದು ಅರ್ಥ ಹೇಳ ತಕ್ಕದ್ದೆಂದು, ಮುಕ್ತನು ಸ್ವರಾಡ್ಭವತಿ ಎಂದು ಹೇಳಿರುವ ಶ್ರುತಿಯೂ ಈ ಅಕರ್ಮ ವಶ್ಯತೆಯನ್ನೇ ಬೋಧಿಸುತ್ತದೆಂದು ಶ್ರೀ ಭಾಷ್ಯಕಾರರು ಸ್ವರಾಟು ಶಬ್ದಕ್ಕೆ ಅಕರ್ಮವಶ್ಯನೆಂದು ಅರ್ಥ ಬರೆದಿರುತ್ತಾರೆ. ಇದು ಎಲ್ಲಿ ಎಂದರೆ ಶ್ರೀ ಭಾಷ್ಯದಲ್ಲಿ "ಅತ ಏವ ಚಾನನ್ಯಾಧಿಪತಿಃ" (ಶಾ. ಸೂ. ೪. ೪ ೯) ಎಂಬ ಸೂತ್ರ ದಲ್ಲಿ ಮುಕ್ತನು ಅಪಹತಪಾಪ್ಮನು ಸತ್ಯಸಂಕಲ್ಪನೆಂದು ಛಾಂದೋಗ್ಯದಲ್ಲಿ ಹೇಳಿ ರುವದರಿಂದ, ಈತನು ಇನ್ನು ಮುಂದಕ್ಕೆ ಯಾವಾಗಲೂ ಕರ್ಮವಶ್ಯನಾಗುವದಿಲ್ಲ ವೆಂದು ಹೇಳುವ ಸಂದರ್ಭದಲ್ಲಿ "ಸಸ್ವರಾಡ್ಭವತಿ, ತಸ್ಯಸರ್ವೇಷು ಲೋಕೇಷು ಕಾಮಚಾರೋ ಭವತಿ" ಮುಕ್ತನು ಕರ್ಮವಶ್ಯನಾಗುವದಿಲ್ಲವು, ಅವನು ಸಮಸ್ತ ಲೋಕಗಳಲ್ಲೂ ತನ್ನಿಷ್ಟಾನುಸಾರ ಭಗವಂತನಪ್ಪಣೆಯನ್ನು ಪಡೆದು ಸಂಚರಿಸುವನಾಗುವನು, ಎಂದರೆ ಈ ಮುಕ್ತನು ವಿಕಾರಾಸ್ಪದ ಲೋಕಗಳಲ್ಲಿ ಸಂಚರಿಸುವದು ಕರ್ಮವಶ್ಯರ ಹಾಗಲ್ಲವು ಎಂಬ ತಾತ್ಪರ್ಯವು. ಆದುದರಿಂದ ಪರಮಾತ್ಮನು ಹೇಗೆ ಸ್ವತಂತ್ರನೋ ಹಾಗೆ ಮುಕ್ತನು ಸ್ವತಂತ್ರನಲ್ಲವು, ಆಗಲೂ ಸರ್ವೇಶ್ವರನಿಗೆ ಶೇಷಭೂತನಾಗಿ ಅಧೀನನಾಗಿ ಆತನಿಗೆ ದಾಸನಾದುದರಿಂದ, ಆತ ನಿಗೆ ಕೈಂಕರ್ಯ ಮಾಡುವ ಸಾಮ್ರಾಜ್ಯ ಪದವಿಯನ್ನು ಹೊಂದುವನು ಎಂಬ ಭಾವವು. ಆದುದರಿಂದ "ಪಾರತಂತ್ರ್ಯಂ ಪರೇಪುಂಸಿ ಪ್ರಾಪ್ಯ ನಿರ್ಗತ ಬಂಧನಃ । ಸ್ವಾತಂತ್ರ್ಯಮತುಲಂ ಪ್ರಾಪ್ಯತೇನೈವ ಸಹಮೋದತೇ" ಎಂಬ ವಾಕ್ಯದಲ್ಲಿ ತೋರುವ ಪ್ರಕೃತಿ ಸಂಬಂಧ ಕರ್ಮಾವಿದ್ಯಾದಿ ಬಂಧನಗಳಿಲ್ಲದೇ ಇರುವ ಸ್ವತಂತ್ರವು ಇಲ್ಲಿ ತೋರುವ ಅಭಿಪ್ರಾಯವೆಂದೂ ಇದರಿಂದ ಭಗವತ್ಪಾರ ತಂತ್ರ್ಯವಿಲ್ಲವೆಂಬರ್ಥವಲ್ಲವೆಂದೂ ಗ್ರಹಿಸತಕ್ಕದ್ದು. ಈ ವಿಷ್ಣು ತತ್ವಶ್ಲೋಕಾಭಿ ಪ್ರಾಯಕ್ಕೆ ಅಧಿಕಾರಿ ವಿಭಾಗದ ೮೪೪-೫ನೆಯ ಪುಟಗಳನ್ನು ಪರಾಂಬರಿಸತಕ್ಕದ್ದು.

ಆದರೆ ಕೆಲವು ಶ್ರುತಿ ಸ್ಮೃತಿ ಸೂತ್ರಗಳು ಮುಕ್ತನಿಗೆ ಪರಬ್ರಹ್ಮನೊಂದಿಗೆ ಸಮತ್ವವನ್ನಾಗಲಿ ಸಾಧರ್ಮ್ಯವನ್ನಾಗಲಿ ವ್ಯಕ್ತವಾಗಿ ಬೋಧಿಸದೆ ಐಕ್ಯವನ್ನು "ಅಹಂ ಬ್ರಹ್ಮಾಸ್ಮಿ", "ಬ್ರಹ್ಮೈವ ಭವತಿ" ಇತ್ಯಾದಿ ವಾಕ್ಯಗಳಿಂದ ಬೋಧಿ ಸುತ್ತವೆಯಲ್ಲಾ, ಅಂತಹ ಸಂದರ್ಭದಲ್ಲಿ ಹೇಗೆ ಅರ್ಥ ನಿರ್ವಾಹವೆಂದರೆ, ಹೇಳು ತ್ತಾರೆ. ಇವುಗಳಿಗೆ ಅರ್ಥವನ್ನು ಹೇಳುವಾಗ ಸ್ಫುಟವಾಗಿ ಭೇದವನ್ನು ಬೋಧಿಸುವ ಶ್ರುತಿ ಸ್ಮೃತಿ ಸೂತ್ರಗಳಿಗೆ ವಿರೋಧವಿಲ್ಲದ ಹಾಗೆ ಅರ್ಥ ಹೇಳಿ, ಈ ಎರಡು ವಿಧ

## ಮುಕ್ತ ವಿಷಯೇ ಐಕ್ಯಪರಪ್ರಮಾಣಾನಾಂ ಅರ್ಥ ನಿರ್ವಾಹನಮಾಹ.

**ಇಪ್ಪಡಿ ಶ್ರುತಿ ಸ್ಮೃತಿ ಸೂತ್ರಙ್ಗಳಿಲೆ ಸಾಮ್ಯಂ ಕಂಠೋಕ್ತಮಾಗೈಯಾಲ್, ಮುಕ್ತದಶೈಯಿಲ್ ಐಕ್ಯಮ್ ತೋತ್ತಿನ ವಿಡಙ್ಗಳಿಲ್ಲಾಮ್ (೧) "ರಾಮಸುಗ್ರೀವಯೋ ರೈಕ್ಯಂ ದೇವ್ಯೇವಂ ಸಮಜಾಯತ" ಇತ್ಯಾದಿಗಳಿರ್ ಪಡಿಯೇ ಭೇದ ಶ್ರುತ್ಯ ವಿರೋಧೇನ ಕಣ್ಣುಕೊಳ್ವದು.**

---

ಪ್ರಮಾಣಗಳಿಗೂ ಸಾಮಂಜಸ್ಯವನ್ನು ಕಲ್ಪಿಸತಕ್ಕದ್ದು. ಪರಸ್ಪರ ವಿರುದ್ಧಾರ್ಥಗಳನ್ನು ಕಲ್ಪಿಸಕೂಡದು ಶ್ರುತಿಗಳಿಗೂ ಸ್ಮೃತಿಗಳಿಗೂ ಸೂತ್ರಗಳಿಗೂ ಪರಸ್ಪರವಾಗಲಿ ಒಂದಕ್ಕೊಂದಾಗಲಿ ವಿರೋಧವೆಲ್ಲಾದರೂ ಉಂಟೇ ? ಆದುದರಿಂದ ಸಮಂಜಸಾರ್ಥವನ್ನು ಕಲ್ಪಿಸತಕ್ಕದ್ದು ಯುಕ್ತವೆಂದು ಹೇಳುತ್ತಾರೆ. ಇಲ್ಲಿಯೂ ಐಕ್ಯ ಹೇಗೆ ಎಂದರೆ, ಸಮಾನ ಧರ್ಮ ಭೋಗಗಳಿಂದ ಐಕ್ಯವೇ ವಿನಾ, ಶ್ರೀ ಶಂಕರಾಭಿಪ್ರಾಯವಾದ ಸ್ವರೂಪೈಕ್ಯವಲ್ಲವೆಂದು ಮುಂದಿನ ವಾಕ್ಯದಿಂದುಪದೇಶಿಸುತ್ತಾರೆ.

### ಹಾಗಾದರೆ ಮುಕ್ತರಿಗೆ ಪರಬ್ರಹ್ಮನೊಂದಿಗೆ ಐಕ್ಯವನ್ನು ಹೇಳುವ ಪ್ರಮಾಣಗಳಿಗೆ ಅರ್ಥ ನಿರ್ವಾಹ ಹೇಗೆ ?

ಇಪ್ಪಡಿ - ಈ ಮೇಲೆ ಹೇಳಿದ ರೀತಿಯಲ್ಲಿ, ಶ್ರುತಿಯಲ್ಲೂ ಸ್ಮೃತಿಯಲ್ಲೂ **ಸೂತ್ರ**ಗಳಲ್ಲೂ, ಮೇಲೆ ಉದಾಹರಿಸಿದ ಪ್ರಮಾಣಗಳ ಮೂಲಕ, **ಸಾಮ್ಯಂ** - ಮುಕ್ತರಿಗೂ ಪರಮಾತ್ಮನಿಗೂ ಸಹ ಭೋಗದಲ್ಲಿ ಸಾಮ್ಯವೆಂಬುವದು, **ಕಂಠೋಕ್ತಮಾಗೈಯಾಲಿ** - ವ್ಯಕ್ತವಾಗಿ ಹೇಳಿರುವದರಿಂದ, ಮುಕ್ತ ದಶೆಯಲ್ಲಿ, **ಐಕ್ಯಮ್ ತೋತ್ತಿನ ವಿಡಙ್ಗಳಿಲ್ಲಾಮ್** - ಐಕ್ಯವೆಂದು ತೋರುವ ಎಂದರೆ ಯಥಾರ್ಥವಾಗಿ ಐಕ್ಯವಿಲ್ಲದೆ ಐಕ್ಯದ ಹಾಗೆ ತೋರುವ ಸ್ಥಳಗಳಲ್ಲೆಲ್ಲಾ **"ರಾಮ ಸುಗ್ರೀವ ಯೋರೈತ್ಯಂ ದೇವ್ಯೇವಂ ಸಮಜಾಯತ"** "ಶ್ರೀ ರಾಮ ಸುಗ್ರೀವರಿಗೆ ಪರಮಸೌಹಾರ್ದರೂಪ ಐಕ್ಯವು ಓ ಸೀತಾದೇವಿಯೇ ಈ ಪರಿಯಲ್ಲಿ ಉಂಟಾಯಿತು", **ಇತ್ಯಾದಿಗಳಿರ್ ಪಡಿಯೇ** - ಇವೇ ಮೊದಲಾದ ಪ್ರಮಾಣಗಳಲ್ಲಿ ಹೇಳಿರುವ ಹಾಗೆ, **ಭೇದಶ್ರುತ್ಯವಿರೋಧೇನ** - ಭೇದ ಶ್ರುತಿಗಳಿಗೆ ವಿರೋಧವಿಲ್ಲದಹಾಗೆ, **ಕಣ್ಣುಕೊಳ್ವದು** - ತಿಳಿಯತಕ್ಕದ್ದು. ಇಲ್ಲಿ ರಾಮ ಸುಗ್ರೀವರಿಗೆ ಸಖ್ಯದಿಂದ ಐಕ್ಯವೇ ವಿನಾ, ಭಿನ್ನರಾದ ಇವರಿಬ್ಬರಿಗೂ

---

ರಾಮಾ. ಸುಂದರ ೩೫-೫೧.

ಸ್ವರೂಪೈಕ್ಯವು ಸರ್ವಾತ್ಮನಾ ಕೂಡುವದಿಲ್ಲವು. ಹೀಗಿರುವದರಿಂದ ವಿಭುವಾಗಿ ಶೇಷಿಯಾಗಿ ಸರ್ವಾಧಾರನಾಗಿರುವ ಪರಮಾತ್ಮನಾಗಿರುವವನಿಗೂ, ಅಣುವಾಗಿ ಶೇಷನಾಗಿ ಆಧೇಯನಾಗಿಯೂ ಇರುವ ಜೀವಾತ್ಮನಿಗೂ, ಸ್ವರೂಪೈಕ್ಯವು ಕೂಡುವ ದಿಲ್ಲವಾದುದರಿಂದ, ಇಬ್ಬರಿಗೂ ಪರಮ ಮೈತ್ರಿ ಇರುವದರಿಂದ ಐಕ್ಯ ಹೇಳುವ ಸ್ಥಳಗಳಲ್ಲೆಲ್ಲಾ, ರಾಮಸುಗ್ರೀವರಿಗೆ ಮಹರ್ಷಿಯು ಹೇಗೆ ಐಕ್ಯವನ್ನು ಹೇಳಿದರೋ, ಹಾಗೆ ಪರಮ ಮೈತ್ರಿಯಿಂದ ಸಮಾನ ಭೋಗಾದಿ ಧರ್ಮಗಳುಳ್ಳವರೆಂದು ಅರ್ಥ ಹೇಳತಕ್ಕದ್ದೆಂದುಪದೇಶಿಸುತ್ತಾರೆ. ಏಕೆಂದರೆ ಸ್ವರೂಪೈಕ್ಯವೆಂಬರ್ಥ ಮಾಡಿದರೆ ಭೇದ ಶ್ರುತಿಗಳಿಗೆ ವಿರೋಧವಾದುದಾಗುತ್ತದೆ. ಹಾಗೆ ಐಕ್ಯ ತೋರುವ ಪ್ರಮಾಣ ಗಳಾವುವೆಂದರೆ :—

೧ "**ಅಯಮಾತ್ಮಾ ಬ್ರಹ್ಮ**" (ಬೃ.೬.೪.೫) ಈ ಸಂಸಾರಿಯಾದ ಜೀವಾತ್ಮನು ಪರಬ್ರಹ್ಮವೇ ಆಗುತ್ತಾನೆಂದು ಶ್ರೀ ಶಂಕರಾಚಾರ್ಯರು ಅರ್ಥ ಮಾಡಿದರು. ಸರಿಯಾದ ಅರ್ಥವಾದರೋ. ಈ ಆತ್ಮನು ಅಪಹತ ಪಾಪ್ಮತ್ವಾದಿ ಗುಣಗಳಿಂದ ಪರಬ್ರಹ್ಮನಿಗೆ ಸಮಾನನಾಗುವದರಿಂದ, ಈ ಜೀವಾತ್ಮನು ಪರಬ್ರಹ್ಮವೆಂದು ಹೇಳಲ್ಪಟ್ಟಿತು. ಒಬ್ಬ ಬಾಲನು ಸಿಂಹದಹಾಗೆಪರಾಕ್ರಮ ಉಳ್ಳವನಾದರೆ, "ಸಿಂಹೋ ಮಾಣವಿಕಃ" ಎಂಬ ಪ್ರಯೋಗದಲ್ಲಿ ಬಾಲನೇ ಸಿಂಹ ಹೇಗಲ್ಲವೋ, ಹಾಗೆ.

೨. "**ತತ್ತ್ವಮಸಿ ಶ್ವೇತಕೇತೋ**" (ಛಾಂ ೬. ೮. ೭) ಆ ಹೇಯಪ್ರತ್ಯನೀಕನಾಗಿ ಕಲ್ಯಾಣಗುಣಾಕರನಾಗಿ ಜಗತ್ಕಾರಣಭೂತನಾದ ಸತ್ಯಕಾಮಸಂಕಲ್ಪನಾದ ಪರಮಾತ್ಮನೇ ಅಚಿಚ್ಛರೀರಕನಾದ ನಿನ್ನನ್ನೂ ಶರೀರವಾಗಿ ಉಳ್ಳವನು ಓ ಶ್ವೇತಕೇತುವೇ. ಹೀಗೆ ಹೇಳಿದುದರಿಂದ, ಸಾಮಾನಾಧಿಕರಣ್ಯವೂ ಕೂಡುತ್ತದೆ. ಆದುದರಿಂದ ಜಗತ್ಕಾರಣನಲ್ಲದ ಜೀವನೂ ಜಗತ್ಕಾರಣನಾದ ಪರಮಾತ್ಮನೂ ಬೇರೆ ಎಂಬುವದು ಸಿದ್ಧವು. ಶ್ರೀ ಶಂಕರಾಭಿಪ್ರಾಯ ಪ್ರಕಾರ ಸ್ವರೂಪೈಕ್ಯ ಹೇಳಿದರೆ ಸಾಮಾನಾಧಿಕರಣ್ಯವೇ ಸರಿಹೋಗುವದಿಲ್ಲವು.

೩. "**ಬ್ರಹ್ಮವೇದ ಬ್ರಹ್ಮೈವ ಭವತಿ**" (ಮುಂ. ೩. ೨. ೯) ಪರಬ್ರಹ್ಮವನ್ನುಪಾಸಿಸಿ ಪರಬ್ರಹ್ಮ ಸಾಕ್ಷಾತ್ಕಾರ ಹೊಂದಿದವನು ಪರಬ್ರಹ್ಮವೇ ಆಗುವನು ಎಂದರೆ ಆವಿರ್ಭವಿಸಿದ ಸ್ವಸ್ವರೂಪದಿಂದ ಪರಬ್ರಹ್ಮನಿಗೆ ಸಮಾನನಾಗುವನು. ಗುಣದಲ್ಲೂ ಭೋಗದಲ್ಲೂ ತತ್ಸದೃಶನಾಗುವನು. ಬ್ರಹ್ಮನೊಬ್ಬನು ಸಾಕ್ಷಾತ್ಕರಿಸುವನೊಬ್ಬನು ಹೀಗೆ ಇಬ್ಬರೆಂಬುವದು ಬ್ರಹ್ಮವೇದ ಶಬ್ದದಿಂದಲೇ ವ್ಯಕ್ತವು. ಹೀಗಿರುವಲ್ಲಿ ಬ್ರಹ್ಮೈವ ಭವತಿ ಎಂಬಲ್ಲಿ ಸ್ವರೂಪೈಕ್ಯಾರ್ಥವು ಕೂಡುವದಿಲ್ಲವು. **ಅಧಿಕಂತು ಭೇದನಿರ್ದೇಶಾತ್** (ಬ್ರ. ಸೂ. ೨. ೧. ೨೨) ಎಂಬ ಸೂತ್ರದಲ್ಲೂ

**ಅಧಿಕೋಪದೇಶಾತ್** ಎಂಬ ಸೂತ್ರದಲ್ಲೂ ಪರಮಾತ್ಮನು ಜೀವಾತ್ಮನಿಗಿಂತ ಬೇರೆಯಾಗಿ ಅಧಿಕನೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಶ್ರುತಿಯಲ್ಲೂ "**ಪೃಥಗಾತ್ಮಾನಂ ಪ್ರೇರಿತಾರಂಚಮತ್ವಾ**"(ಶ್ವೇತಾ. ೧ ೬) ಎಂದು ಹೇಳಲ್ಪಟ್ಟಿರುತ್ತದೆ.

೪. "**ಅಹಂ ಬ್ರಹ್ಮಾಸ್ಮಿ**" (ಬೃ. ३. ೪. ೧೦) ಉಪಾಸನೆ ಮಾಡುವನು "**ಅಹಂಬ್ರಹ್ಮಾಸ್ಮಿ**" ಎಂದು ಉಪಾಸನೆ ಮಾಡತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ. ಇದು ಸ್ವರೂಪೈಕ್ಯವನ್ನು ಹೇಳುವ ವಾಕ್ಯದ ಹಾಗೆ ತೋರುತ್ತದೆ. ಇದರ ಸಮಂಜಸಾರ್ಥವು "ನನಗೆ ಪರಮಾತ್ಮನು ಆತ್ಮಾ ಎಂದು ತಿಳಿದವನಾಗಿ ಉಪಾಸಿಸತಕ್ಕದ್ದೆಂಬ ಭಾವವು.

೫. "**ವಿಭೇದ ಜನಕೇಽಜ್ಞಾನೇ ನಾಶಮಾತ್ಯಂತಿಕಂಗತೇ । ಆತ್ಮನೋ ಬ್ರಹ್ಮಣೋ ಭೇದಮಸಂತಂ ಕಃ ಕರಿಷ್ಯತಿ ॥**" (ವಿ. ಪು. ೬ ೭. ೯೬) ಇದರರ್ಥವು ಹಿಂದೆಯೇ ವಿವರಿಸಲ್ಪಟ್ಟಿರುತ್ತದೆ.

೬. "**ತದ್ಭಾವ ಭಾವಮಾಪನ್ನ ಸ್ತದಾಸೌ ಪರಮಾತ್ಮನಾ । ಭವತ್ಯಭೇದೀ ಭೇದಶ್ಚ ತಸ್ಯಾಜ್ಞಾನ ಕೃತೋ ಭವೇತ್ ॥**" ಇದರರ್ಥವೂ ಹಿಂದೆ ವಿವರಿಸಲ್ಪಟ್ಟಿರುತ್ತದೆ.

೭. "**ಆತ್ಮೇತಿ ತೂಪಗಚ್ಛನ್ತಿ ಗ್ರಾಹಯನ್ತಿ ಚ** (ಬ್ರ. ಸೂ. ೪ ೧.೩.) ತಾನು ಪರಮಾತ್ಮನೆಂದೇ ಉಪಾಸನೆ ಮಾಡತಕ್ಕದ್ದು, ಶಾಸ್ತ್ರಗಳು ಇದನ್ನೇ ಅಙ್ಗೀಕರಿಸಿರುತ್ತವೆ ಎಂಬರ್ಥವು ಈ ಸೂತ್ರಕ್ಕೆ ತೋರಿಬರುತ್ತದೆ. ಹೀಗೆ ಅರ್ಥ ಹೇಳಿದರೆ ಹಿಂದಿನ "ಅಧಿಕಂತು ಭೇದ ನಿರ್ದೇಶಾತ್ ಇತ್ಯಾದಿ ಬ್ರಹ್ಮಸೂತ್ರಗಳಿಗೆ ವಿರೋಧವುಂಟಾಗುವದರಿಂದ ವಿರೋಧವಿಲ್ಲದಹಾಗೆ ತಾತ್ಪರ್ಯವನ್ನು ಬರೆಯತಕ್ಕದ್ದು. ಉಪಾಸನೆಯನ್ನೇನೋ ತಾನು ಪರಮಾತ್ಮನೆಂಬ ಭಾವದಿಂದಲೇ ಮಾಡತಕ್ಕದ್ದು. ಅಭಿಪ್ರಾಯ ಹೇಗೆಂದರೆ ಪರಮಾತ್ಮನು ತನಗೆ ಆತ್ಮಾವಾದುದರಿಂದ ಆತ್ಮಾ ಎಂದೇ ಉಪಾಸನೆಯನ್ನು ಮಾಡತಕ್ಕದ್ದು. ಅದು ಹೇಗೆಂದರೆ, **ಮನುಷ್ಯೋಽಹಂ** ಎಂಬಲ್ಲಿ ಮನುಷ್ಯ ಶರೀರಕನಾದ ತನಗೆ ಆತ್ಮಾವಾದ ಅಹಂ ಎಂಬ ಶಬ್ದವೂ ಆ ಬುದ್ಧಿಯೂ ಸಹ ಹೇಗೆ ಸಲ್ಲುತ್ತದೋ, ಹಾಗೆಯೇ ಆತ್ಮಶರೀರಕನಾದ ಪರಮಾತ್ಮನಿಗೆ ಜೀವಾತ್ಮನನ್ನು ಬೋಧಿಸುವ ಅಹಂ ಶಬ್ದವೂ ತದ್ಬುದ್ಧಿಯೂ ಸಲ್ಲುತ್ತವೆಂಬ ಭಾವವು. ಆದುದರಿಂದ ಪರಮಾತ್ಮನು ತನಗೆ ಆತ್ಮಾವೆಂದು ಉಪಾಸಿಸತಕ್ಕದ್ದು, ಹಾಗೆಯೇ ಶಾಸ್ತ್ರಗಳು ಹೇಳುತ್ತವೆ.

ಇವುಗಳಿಂದ ನಾವು ಮುಖ್ಯವಾಗಿ ಗ್ರಹಿಸುವ ವಿಷಯವೇನೆಂದರೆ, ಇಂತಹ ಅದ್ವೈತ ತೋರುವ ಶ್ರುತಿಗಳಿಗೆ ಅರ್ಥ ಹೇಳುವಾಗ ಇತರ ವ್ಯಕ್ತಭೇದ ಶ್ರುತಿಗಳಿಗೆ ವಿರೋಧವಿಲ್ಲದ ಹಾಗೆ ಅರ್ಥ ಹೇಳಬೇಕು. ಎಲ್ಲಾ ಶ್ರುತಿಗಳೂ, ಸ್ಮೃತಿಗಳೂ

## ಸ್ವರೂಪೈಕ್ಯೇ ಬಾಧಕ ಪ್ರದರ್ಶನಮ್

ಇಜ್ಞನಲ್ಲಾದಪ್ಪೋದು (೧) "ಯದಾತು ಮನ್ಯತೇ ನ್ಯೋಹ ಮನ್ಯ

---

ಪುರಾಣೇತಿ ಹಾಸಗಳೂ, ಚೇತನ ವರ್ಗವು ಪರಮಾತ್ಮನಿಗೆ ಶರೀರವೆಂದೂ, ಪರಮಾತ್ಮನು ಈ ಚೇತನ ವರ್ಗಕ್ಕೆಲ್ಲಾ ಆತ್ಮಾವೆಂದೂ ಹೇಳಿ, ಪರಮಾತ್ಮನಿಗೂ ಚೇತನ ವರ್ಗಕ್ಕೂ ಸ್ವಾಮಿ ದಾಸ ಸಂಬಂಧವನ್ನು ಉಪಪಾದಿಸಿ, ಚೇತನನು ಪರಮಾತ್ಮನನ್ನು ಕುರಿತು ಹೋಗುವ ಪ್ರಾಪ್ತಾವೆಂದೂ, ಉಪಾಯಾನುಷ್ಠಾನದಿಂದ ಪರಮಾತ್ಮನಾದ ಪ್ರಾಪ್ಯವನ್ನು ಹೊಂದುತ್ತಾನೆಂದೂ, ಹೇಳುತ್ತವೆ ಐಕ್ಯವನ್ನು ಹೇಳುವಾಗ ಈ ಅಭಿಪ್ರಾಯಗಳಿಗೆ ವಿರೋಧವಿಲ್ಲದಹಾಗೆ ಅರ್ಥ ಹೇಳಬೇಕೇ ವಿನಾ, ಐಕ್ಯಬೋಧೆಯಿಂದ ಸ್ವರೂಪೈಕ್ಯವೇ ಹೇಳಲ್ಪಟ್ಟಿತೆಂದು ನಂಬಿ ಪರಸ್ಪರ ವಿರುದ್ಧಾರ್ಥ ಕಲ್ಪನೆಯು ಸರಿಯಲ್ಲವು. ವೇದವೇ ಒಂದು ಕಡೆಯಲ್ಲಿ ಸರಿಯಾಗಿಯೂ ಇನ್ನೊಂದು ಕಡೆಯಲ್ಲಿ ಸರಿಯಲ್ಲದೆಯೂ ಉಪದೇಶಿಸಲಾರದಷ್ಟೇ. ಆದುದರಿಂದ ಸ್ವರೂಪೈಕ್ಯವನ್ನು ಹೇಳದೆ, ರಾಮಸುಗ್ರೀವರು ಒಟ್ಟಿಗೆ ಸೇರಿದರು, ಸಯುಕ್ತಾದರು, ಸಮಾನ ಭೋಗಾದಿಗಳನ್ನು ಹೊಂದಿದರು, ಮಿತ್ರತೆಯನ್ನು ಹೊಂದಿದರು, ಎಂಬಭಿಪ್ರಾಯದಲ್ಲಿ "ರಾಮಸುಗ್ರೀವಯೋರೈಕ್ಯಂ" ಎಂದು ಐಕ್ಯಶಬ್ದಪ್ರಯೋಗವನ್ನು ಮಹರ್ಷಿಯು ಹೇಗೆ ಮಾಡಿರುತ್ತಾರೋ, ಹಾಗೆ ಈ ಐಕ್ಯಶ್ರುತಿಗಳ ವಿಷಯದಲ್ಲಿ ಅನ್ವಯಿಸತಕ್ಕದ್ದೆಂದುಪದೇಶಿಸಿರುತ್ತಾರೆ. ರಾಮಸುಗ್ರೀವರಿಗೆ ಹೇಗೆ ಸ್ವರೂಪೈಕ್ಯವನ್ನು ಹೇಳಲು ಸಾಧ್ಯವಿಲ್ಲವೋ, ಹಾಗೆಯೇ ಈ ಐಕ್ಯಶ್ರುತಿಗಳಲ್ಲೂ ಸಾಧ್ಯವಿಲ್ಲವೆಂಬ ಭಾವವು. ಹಾಗೆ ಸ್ವರೂಪೈಕ್ಯ ಹೇಳಿದರೆ ಬಹು ಬಾಧಕಗಳು ಪ್ರಾಪ್ತವಾಗುತ್ತವೆಂಬುವದನ್ನು ಶ್ರೀ ಭಾಷ್ಯನ್ಯಾಯ ಸಿದ್ಧಾಂಜನಾದಿಗಳಲ್ಲಿ ಕಾಣಬಹುದು.

ಹೀಗೆ ಸ್ವರೂಪೈಕ್ಯವನ್ನು ಈ ಶ್ರುತ್ಯಾದಿಗಳಿಗೆ ಕಲ್ಪಿಸಿದರೆ ಉಂಟಾಗುವ ಬಾಧಕವೇನೆಂದರೆ ಸೂಕ್ಷ್ಮವಾಗಿ ಹೇಳುತ್ತಾರೆ. ಅನೇಕ ಮಹರ್ಷಿಗಳ ವಾಕ್ಯಗಳಿಗೂ ಗೀತಾಚಾರ್ಯೋಪದೇಶಾದಿ ಅನೇಕ ಪ್ರಮಾಣಗಳಿಗೂ ವಿರೋಧ ಉಂಟಾಗುತ್ತದೆಂದುಪದೇಶಿಸುತ್ತಾರೆ.

### ಸ್ವರೂಪೈಕ್ಯ ಹೇಳಿದರೆ ಪ್ರಾಪ್ತವಾಗುವ ಬಾಧಕಗಳು.

ಇಜ್ಞನಲ್ಲಾದ ಪ್ಪೋದು- ಈ ಐಕ್ಯ ಪ್ರತಿಪಾದಕ ಪ್ರಮಾಣಗಳಿಗೆ ಮೇಲೆ

---

(೧) ಭಾರತ. ಶಾಂತಿ. ೩೨೩-೭೭, ೮೦.

**ಏಷ ಇತಿದ್ವಿಜಃ । ತದಾಸಕೇವಲೀಭೂತಷ್ಷಡ್ವಿಂಶ ಮನುಪಶ್ಯತಿ । ಅನ್ಯಶ್ಚ ರಾಜನ್ ಸಪರಃ ಸ್ತಥಾನ್ಯಃ ಪಂಚವಿಂಶಕಃ। ತತ್ಸ್ಥತ್ವಾದನುಪಶ್ಯನ್ತಿ ಹ್ಯೇಕಏವೇತಿ ಸಾಧವಃ। ಅನ್ಯಶ್ಚ ರಾಜನ್ ಸಪರಸ್ತಥಾನ್ಯಃ ಪಂಚವಿಂಶಕಃ। ತೇನೈತನ್ನಾಭಿಜಾನಂತಿ ಪಂಚವಿಂಶಕ ಮಚ್ಯುತಮ್ । ಜನ್ಮಮೃತ್ಯು**

---

ಹೇಳಿದ ಹಾಗೆ ಅರ್ಥ ಹೇಳಿವೆ, ಸ್ವರೂಪೈಕ್ಯವನ್ನು ವಿಪಕ್ಷಿಗಳು ಹೇಳುವ ಹಾಗೆ ಹೇಳಿದರೆ, ಅನೇಕ ಪ್ರಮಾಣಗಳಿಗೆ ವಿರೋಧ ಉಂಟಾಗುತ್ತದೆಂದು ಹೇಳುವ ದಕ್ಕಾಗಿ ಐಕ್ಯಾರ್ಥವನ್ನು ಚೆನ್ನಾಗಿ ಉಪಪಾದಿಸಿ ಹೇಳುವ ತತ್ವಾರ್ಥ ನಿರ್ಣಯ ದಲ್ಲಿ ಮಹಾಗ್ರೇಸರರಾದ ಶ್ರೀ ವ್ಯಾಸಮಹರ್ಷಿಯ ವಾಕ್ಯಗಳನ್ನು ಪ್ರಥಮತಃ ಉದಾಹರಿಸುತ್ತಾರೆ.—"**ಯದಾತು** - ಯಾವಾಗಲಾದರೆ, **ಅಹಂ** - ನಾನು, **ಅನ್ಯಃ** - ಪರಮಾತ್ಮಸ್ವರೂಪಕ್ಕಿಂತ ಬೇರೆಯಾದವನೆಂದೂ, **ಏಷಃ** - ಈ ಪರಮಾತ್ಮನು **ಅನ್ಯಃ** - ಜೀವಾತ್ಮ ಸ್ವರೂಪಕ್ಕಿಂತ ಬೇರೆಯಾದವನೆಂದೂ, **ದ್ವಿಜಃ**-ಬ್ರಾಹ್ಮಣನು, **ಮನ್ಯತೇ** - ತಿಳಿಯುವನೋ, **ತದಾ** - ಆಗ, **ಸಃ** - ಆ ಬ್ರಾಹ್ಮಣನು, **ಕೇವಲೀ ಭೂತಃ** - ಪ್ರಾಕೃತ ದೇಹಾದಿಗಳಿಲ್ಲದವನಾಗಿ, **ಷಡ್ವಿಂಶಂ** - ಇಪ್ಪತ್ತಾರನೆಯ ತತ್ವವಾದ ಪರಮಾತ್ಮನನ್ನು, **ಅನುಪಶ್ಯತಿ** - ಸಾಕ್ಷಾತ್ಕರಿಸುವನು, ಪರಮಪದದಲ್ಲಿ ಪರಮಾತ್ಮನೊಂದಿಗೆ ಸೇರಿ ಅತಿನನ್ನೇ ನೋಡುತ್ತಾ ಆನಂದಿಸುವ ನೆಂಬರ್ಥವು **ಹೇ ರಾಜನ್** - ಓ ಜನಕಮಹಾರಾಜನೇ, ಯಾಜ್ಞವಲ್ಕ್ಯರು ಜನಕಮಹಾರಾಜನನ್ನು ಕುರಿತು ಹೇಳುತ್ತಾರೆ. **ಸಪರಃ** - ಆ ಪರನಸ್ತವಾದ **ಸರ್ವೇಶ್ವರನು**, **ಅನ್ಯಶ್ಚ** - ಬೇರೆಯಾದವನು, **ತಥಾ** - ಹಾಗೆಯೇ, **ಪಂಚವಿಂಶಕಃ** - ಇಪ್ಪತ್ತೈದನೆಯ ತತ್ವವಾದ ಜೀವಾತ್ಮನು, ಅನ್ಯಃ - ಬೇರೆ ಎಂದರೆ ಸ್ವರೂಪತಃ ಇಬ್ಬರೂ ಬೇರೆಬೇರೆಯಾದರೂ, **ಸಾಧವಃ** - ಮಹಾ ಜ್ಞಾನಿಗಳು, **ತತ್ಸ್ಥತ್ವಾತ್** - ಪಂಚವಿಂಶಕನಾದ ಜೀವಾತ್ಮನಿಗೂ ಅಂತರಾತ್ಮಾವಾಗಿರುವದರಿಂದ, **ಏಕಏವೇತಿ** - ಹೀಗೆ ಒಟ್ಟಿಗೆ ಸೇರಿರುವವರ ಮಾತ್ರ**ದಿಂದಲೇ** ಒಬ್ಬರೇ ಎಂದೇ, **ಅನುಪಶ್ಯಂತಿ** - ಕಾಣುವರು, ಭಾವಿಸುವರು ಇದರಿಂದ ಸ್ವರೂಪೈಕ್ಯ **ದಿಂದ** ಒಂದಾಗಿ ಎಣಿಸುವದಿಲ್ಲವೆಂದೂ, ಪರಮಾತ್ಮನಿಗೆ ಜೀವಾತ್ಮನು ಶರೀರವಾಗಿಯೂ ಜೀವಾತ್ಮನು ಪರಮಾತ್ಮನಿಗೆ ಅಂತರಾತ್ಮಾವಾಗಿಯೂ ಇರುವದರಿಂದ ದೇಹಾತ್ಮಗಳಿಗೆ ಹೇಗೆ ಏಕೀಭಾವವೋ ಹಾಗೆ ಏಕೀಭಾವವೆಂಬಭಿಪ್ರಾಯವು, **ಹೇ ರಾಜನ್** - ಓ ಜನಕರಾಜನೇ, **ಸಪರಃ** - ಆ ಪರಮಾತ್ಮನೇ, **ಅನ್ಯಶ್ಚ** - **ಬೇರೆ**, **ಪಂಚವಿಂಶಕಃ** - ೨೫ನೆಯ ತತ್ವವಾದ ಜೀವಾತ್ಮನೇ, **ಅನ್ಯಃ - ಬೇರೆ ;**

ಭಯಾದ್ವಿಭೀತಾಸ್ಸಾಂಖ್ಯಯೋಗಾಶ್ಚ ಕಾಶ್ಯಪ । ಷಡ್ವಿಂಶಮನುಪಶ್ಯನ್ತಿ ಶುಚಯಸ್ತತ್ಪರಾಯಣಾಃ" ॥

**ತೇನ** – ಆ ಕಾರಣದಿಂದ, **ಏತಂ ಅಚ್ಯುತಂ** – ಈ ಅಚ್ಯುತನಾದ ಪರಮಾತ್ಮನನ್ನು, **ಪಂಚವಿಂಶಕಂ** – ಇಪ್ಪತ್ತೈದನೆಯ ತತ್ತ್ವವಾದ ಜೀವಾತ್ಮನನ್ನಾಗಿ, **ನಾಭಿಜಾನಂತಿ** - ತಿಳಿಯುವದಿಲ್ಲವು ಈ ಮಹರ್ಷಿ ವಾಕ್ಯದಿಂದ ಜೀವಾತ್ಮ ಪರಮಾತ್ಮರುಗಳಿಗೆ ಸ್ವರೂಪೈಕ್ಯವಾದವು ದೂರೀಕೃತವಾಯಿತು. **ಹೇ ಕಾಶ್ಯಪ** - ಓ ಕಶ್ಯಪ ಕುಲೋದ್ಭವನೇ, **ಜನ್ಮ ಮೃತ್ಯು ಭಯಾದ್ವಿಭೀತಾಃ** - ಜನನ ಮರಣ ಗಳ ಭಯದಿಂದ ಹೆದರಿದ, **ಸಾಂಖ್ಯಯೋಗಾಶ್ಚ** - ಜ್ಞಾನಯೋಗನಿಷ್ಠರು, **ಶುಚಯಃ** - ಕರ್ಮಯೋಗನಿಷ್ಠೆಯಿಂದ ಸರ್ವ ಪಾಪಗಳ ಸಂಬಂಧವಿಲ್ಲದೆ ಪರಿಶುದ್ಧ ರಾಗಿ, **ತತ್ಪರಾಯಣಾಃ** - ಆ ಪರಮಾತ್ಮನನ್ನೇ ಸೇರಬೇಕೆಂಬ ಆಶೆಯಿಂದ ಸರ್ವದಾ ಆತನನ್ನು ಚಿಂತಿಸುವರಾಗಿ, **ಷಡ್ವಿಂಶಂ** - ೨೬ನೆಯ ತತ್ತ್ವವಾದ ಪರಮಾತ್ಮನನ್ನು, **ಅನುಪಶ್ಯಂತಿ** - ನಿರಂತರ ತೈಲಧಾರೆಯ ಹಾಗೆ ಅವಿಚ್ಛಿನ್ನವಾದ ಸ್ಮೃತಿಸಂತಾನದಿಂದ ಆತನನ್ನು ಸಾಕ್ಷಾತ್ಕರಿಸುತ್ತಾರೆ" ಸರ್ವ ಶಾಸ್ತ್ರಗಳ ವಿಮರ್ಶೆಯನ್ನು ಮಾಡಿ, ಅವುಗಳನ್ನು ಪುನಃ ಪುನಃ ವಿಚಾರ ಮಾಡಿದವರುಗಳಲ್ಲಿ ಅಗ್ರೇಸರರು ಶ್ರೀ ವ್ಯಾಸಮಹರ್ಷಿಯು. ಅವರ ದಿವ್ಯಸೂಕ್ತಿಗಿಂತ ಪರಮಾಪ್ತವಾಕ್ಯವು ಬೇರ ಇರಲಾರದು. ಇಲ್ಲಿ ಕಂಠೋಕ್ತವಾಗಿ ಜೀವನೇ ಬೇರೆ ಪರಮಾತ್ಮನೇ ಬೇರೆ ಎಂದು ಪುನಃ ಪುನಃ ಹೇಳಿ ಸ್ವರೂಪೈಕ್ಯವು ಕೂಡುವದಿಲ್ಲವೆಂದು ಬಹು ಸ್ಫುಟವಾಗಿ ಉಪಪಾದಿಸಿರುತ್ತಾರೆ. ಆದರೆ ಉಪನಿಷತ್ತುಗಳಲ್ಲೂ ಅವುಗಳ ಉಪಬೃಹ್ಮಣಗಳಲ್ಲೂ ಐಕ್ಯವು ಹೇಳಿವೆಯಲ್ಲಾ, ಇದನ್ನನುಸರಿಸಿ ಅನೇಕ ಜ್ಞಾನವೃದ್ಧರು ಐಕ್ಯವನ್ನು ಹೇಳುತ್ತಾರಲ್ಲಾ ಎಂದರೆ ಎಲ್ಲೂ ಸ್ವರೂಪೈಕ್ಯವು ಹೇಳಲ್ಪಡಲಿಲ್ಲವೆಂದೂ, ಜೀವಾತ್ಮನಿಗೆ ಪರಮಾತ್ಮನು ಅಂತರಾತ್ಮಾವಾದುದರಿಂದ ಐಕ್ಯವೆಂದು ಉಪದೇಶಿಸಿರುತ್ತಾರೆ. ಎರಡೂ ಒಂದೇ ಅಲ್ಲವೆಂದು ದೃಢೀಕರಿಸಿ ಹೇಳುವದಕ್ಕಾಗಿ ಜೀವಾತ್ಮನನ್ನು ಪಂಚವಿಂಶಕನೆಂದೂ, ಪರಮಾತ್ಮನನ್ನು ಷಡ್ವಿಂಶಕನೆಂದೂ ಹೇಳಿರುತ್ತಾರೆ ಇಬ್ಬರೂ ಸ್ವರೂಪತಃ ಒಬ್ಬರೇ ಆಗಿದ್ದ ಪಕ್ಷದಲ್ಲಿ ಪಂಚವಿಂಶಕ, ಷಡ್ವಿಂಶಕವೆಂದು ವಿವೇಚನೆ ಮಾಡಿ ಹೇಳಲು ಸಾಧ್ಯವಿಲ್ಲವಷ್ಟೇ. ಬಾಕಿ ೨೪ ತತ್ವಗಳು ಯಾವುವು ಎಂಬುವದಕ್ಕೆ ತತ್ವತ್ರಯಾಧಿಕಾರದ ೫೨ನೆಯ ಪುಟವನ್ನು ಪರಾಂಬರಿಸಬಹುದು. ಹೀಗೆ ೨೪ ತತ್ವಗಳು ಸಾಂಖ್ಯರು ವಿಭಾಗಿಸಿ ಹೇಳಿದುದು ಅಚಿತ್ತತ್ವಗಳು ; ೨೫, ೨೬ ಎರಡೂ ಚಿತ್ತತ್ವ

(೨) "ಉತ್ತಮಃ ಪುರುಷಸ್ತ್ವನ್ಯಃ".

ಗಳು, ಆದರಲ್ಲಿ ೨ನೆಯದು ಜೀವಾತ್ಮ ತತ್ತ್ವವು, ೩ನೆಯದು ಪರತತ್ತ್ವವು.

ಗೀತೆಯಲ್ಲೂ ಹೀಗೆಯೇ ಬಹು ಸ್ಫುಟತರವಾಗಿ ಪರಮಾತ್ಮನು ಎರಡು ವಿಧ ಜೀವಾತ್ಮರುಗಳಿಗಿಂತ ಬೇರೆಯಾದವನೆಂದು ಹೇಳಿರುತ್ತದೆ. ಮುಂದೆ ಆ ಪ್ರಮಾಣವನ್ನುದಾಹರಿಸುತ್ತಾರೆ :—**ದ್ವಾವಿಮೌ ಪುರುಷೌಲೋಕೇಕ್ಷರಶ್ಚಾಕ್ಷರ ಏವಚ । ಕ್ಷರಸ್ಸರ್ವಾಣಿಭೂತಾನಿ ಕೂಟಸ್ಥೋಕ್ಷರ ಉಚ್ಯತೇ । ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ । ಯೋಲೋಕತ್ರಯಮಾವಿಶ್ಯಬಿಭರ್ತ್ಯವ್ಯಯ ಈಶ್ವರಃ ॥** ಸಮಸ್ತ ವೇದಗಳಲ್ಲೂ ಸಾರಭೂತವಾದ ಯಥಾರ್ಥವಾದ ಅರ್ಥವನ್ನು ತನ್ನ ಪ್ರಿಯ ಶಿಷ್ಯನಾದ ಅರ್ಜುನನಿಗೆ ಶ್ರೀ ಕೃಷ್ಣ ಭಗವಾನವರು ಉಪದೇಶಿಸುತ್ತಾರೆ ಪಾರಮಾರ್ಥಿಕವಾದ ಅರ್ಥವನ್ನು ಹೇಳುವ ಸಂದರ್ಭದಲ್ಲಿ ವ್ಯಾವಹಾರಿಕ ವಿಷಯವನ್ನುಪದೇಶಿಸಿದರೆಂದು ಹೇಳುವದು ಅಸಂಗತವಷ್ಟೇ ಆದುದರಿಂದ ತತ್ತ್ವೋಪದೇಶವನ್ನೇ ಮಾಡುತ್ತಾರೆಂದು ನಂಬತಕ್ಕದ್ದಾಗಿರುತ್ತದೆ ಕ್ಷರನೆಂದೂ ಅಕ್ಷರವೆಂದೂ ಇಬ್ಬರು ಪುರುಷರು, ಜೀವಕೋಟಿಗೆ ಸೇರಿದವರು ಚತುರ್ಮುಖ ಮೊದಲುಗೊಂಡು ಕ್ರಿಮಿಕೀಟಾದಿಗಳವರೆಗೂ ಇರುವ ಜೀವರಾಶಿಯು ಎಲ್ಲಾ ದೇಹರೂಪವಾದ ಅಚಿಂತ್ಸಂಸರ್ಗದಿಂದ ಜನ್ಮಸ್ಥಿತ್ಯಾದಿ ಪರಿಣಾಮಗಳುಂಟಾದಹಾಗೆ ತೋರುವದರಿಂದ ಕ್ಷರಶಬ್ದವಾಚ್ಯವು. ಇಂತಹ ಅಚಿತ್ಸಂಸರ್ಗವಿಲ್ಲದೆ ಪರಿಣಾಮಾವಸ್ಥೆಯಿಲ್ಲದುದರಿಂದ, ಸ್ವಸ್ವರೂಪದಿಂದ ವಿರಾಜಿಸುವ ನಿತ್ಯರ ಮತ್ತು ಮುಕ್ತರ ವರ್ಗವು ಅಕ್ಷರ ಶಬ್ದದಿಂದ ಬೋಧಿಸಲ್ಪಟ್ಟಿರುತ್ತದೆ ಇವರಿಬ್ಬರುಗಳಿಗಿಂತಲೂ **ಉತ್ತಮಪುರುಷನು, ಪುರುಷೋತ್ತಮನು,** ಪರಮಾತ್ಮನು ವಿಲಕ್ಷಣನಾಗಿ **ಅನ್ಯಃ** - ಬೇರೆಯಾದವನು ಈ ಬದ್ಧಮುಕ್ತನಿತ್ಯರುಗಳಿಗಿಂತ ಸರ್ವೇಶ್ವರನು ವಿಲಕ್ಷಣನು ಎಂದು ಇಲ್ಲಿ ಹೇಳಲ್ಪಟ್ಟಿತು ಅದು ಹೇಗೆ ಎಂದರೆ ಮುಂದೆ ವಿವರಿಸಿ ತಿಳಿಸುತ್ತಾರೆ **ಯಃ** – ಯಾವ ಪರಮಾತ್ಮನು, **ಲೋಕತ್ರಯಂ** - ಚಿದಚಿದಾತ್ಮಕವಾದ ಮೂರು **ಲೋಕ**ಗಳನ್ನೂ, **ಆವಿಶ್ಯ** - ಅಂತರಾತ್ಮನಾಗಿ ಪ್ರವೇಶಿಸಿ, ಆದರಿಂದ ಯಾವುದೊಂದು ಪರಿಣಾಮಗಳನ್ನು ಹೊಂದದೆ ನಿರ್ವಿಕಾರನಾಗಿ, **ಈಶ್ವರಃ**-ಅವುಗಳಿಗೆಲ್ಲಾ ತಾನು ಸ್ವಾಮಿಯಾಗಿಯೂ ಅವೆಲ್ಲಾ ತನಗೆ, **ಸ್ವಂ** - ಸ್ವತ್ತಾಗಿಯೂ, **ಬಿಭರ್ತಿ** - ನಿಯಮನಾದಿಗಳ ಮೂಲಕ ರಕ್ಷಿಸುತ್ತಾನೋ, ಆ ಕಾರಣದಿಂದಲೇ ಅವನು ವಿಲಕ್ಷಣನು. ಆತನ ಅನುಪ್ರ

(೨) ಗೀ. ೧೫.೧೭.

ವೇಶಕ್ಕೆ, ಈ ಚಿದಚಿತ್ತುಗಳೂ ನಿತ್ಯವಾಗಿ ಇರಬೇಕಷ್ಟೆ. ಅಚಿತ್ತು ಪರಿಣಾಮ ಹೇತುವಾಗಿದ್ದರೂ "ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ" ಎಂಬ ಶ್ರುತಿಯಲ್ಲಿ ಪ್ರಕೃತಿಯು (ಅಚಿತ್ತು) ನಿತ್ಯವೆಂದು ಹೇಳಲ್ಪಟ್ಟಿರುತ್ತದೆ. ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ ಎಂಬಲ್ಲೂ, "ಅಚ್ಛೇದ್ಯೋಯಮದಾಹ್ಯೋಯಂ ಅಕ್ಲೇದ್ಯೋಶೋಷ್ಯ ಏವಚ । ನಿತ್ಯಸ್ಸರ್ವಗತಸ್ಸ್ಥಾಣುರಚಲೋಯಂ ಸನಾತನಃ" (ಗೀ. ೨ ೨೪) ಎಂಬಲ್ಲೂ, ಹಾಗೆಯೇ "ನಿತ್ಯೋನಿತ್ಯಾನಾಂ" ಮೊದಲಾದ ಅನೇಕ ಶ್ರುತಿಗಳಲ್ಲೂ, ಜೀವವರ್ಗವೂ ನಿತ್ಯವೆಂದು ಹೇಳಲ್ಪಟ್ಟಿರುತ್ತದೆ. ಹೀಗೆ ಚಿದಚಿದೀಶ್ವರರಾದ ಮೂರು ತತ್ವಗಳೂ ನಿತ್ಯವಾಗಿರುವಲ್ಲಿ, ಸ್ವರೂಪೈಕ್ಯವನ್ನು ಸಾಧಿಸುವ ವಾದವು ತುಂಬಾ ಸಾಹಸವಾದುದು. ಶ್ರೀ ಶಂಕರಾಚಾರ್ಯರವರು ಕ್ಷರಾಕ್ಷರಗಳೆರಡೂ ಉಪಾಧಿಯಿಂದುಂಟಾದ ಹಾಗೆ ಅಭಿಪ್ರಾಯಪಟ್ಟಿರುತ್ತಾರೆ. ಅದೂ ಅಲ್ಲದೆ ಪರಮಾರ್ಥವನ್ನು ಶ್ರೀ ಕೃಷ್ಣನು ಈ ಶ್ಲೋಕ ಮೂಲಕ ತಿಳಿಸುತ್ತಾನೆಂದು ಹೇಳುತ್ತಾರೆ. ಹಾಗಾದರೆ ವಿಶದವಾಗಿ ಇಲ್ಲಿ ಅವು ಉಪಾಧಿ ಮೂಲಕ ಹಾಗೆ ತೋರುತ್ತವೆಂದು ಹೇಳಬೇಡವೇ ? ಶ್ರೀಧರಾಚಾರ್ಯರವರ ಟೀಕೆಯಲ್ಲಿ ಕೂಟಸ್ಥ ಶಬ್ದಕ್ಕೆ ಪರ್ವತದ ಹಾಗೆ ಚಲಿಸದೇ ಇರುವವನು ಎಂದರೆ, ದೇಹವು ನಾಶ ಹೊಂದಿದರೂ ಸ್ಥಿರವಾಗಿರುವ ಜೀವನೆಂದು ಅರ್ಥ ಬರೆದಿದ್ದಾರೆ. ಇದೀಗ ಸರಿಯಾದಭಿಪ್ರಾಯವು. ಶ್ರೀ ಭಾಷ್ಯಕಾರರು ಕೂಟಸ್ಥ ಶಬ್ದಕ್ಕೆ ಅಚಿತ್ತಿನ ಸಂಸರ್ಗದಿಂದ ಬಿಡಲ್ಪಟ್ಟು ತನ್ನ ನೈಜಸ್ವರೂಪದಿಂದಿರುವ ಮುಕ್ತಾತ್ಮನೆಂದು ಅರ್ಥ ಬರೆದಿರುತ್ತಾರೆ. ಅಕ್ಷರ ಶಬ್ದಕ್ಕೆ ದ್ವೈತ ಸಿದ್ಧಾಂತಿಗಳು ಲಕ್ಷ್ಮೀ ಎಂಬದಾಗಿ ಅರ್ಥ ಮಾಡಿರುತ್ತಾರೆ. ಇದೂ ತುಂಬಾ ಸಾಹಸವಾದ ಹೇಳುವರ್ಥವೇ. ಏಕೆಂದರೆ ದ್ವಾವಿಮೌ ಪುರುಷೌ ಎಂದೂ, ಅಕ್ಷರವೆಂದೂ ಪುಲ್ಲಿಂಗ ಪ್ರಯೋಗವಿರುವಾಗ ಲಕ್ಷ್ಮೀ ಎಂದರ್ಥ ಹೇಳಬಹುದೇ ? ಶ್ರೀ ವ್ಯಾಸಮಹರ್ಷಿಯು ಪರಮಾರ್ಥ ಬೋಧಿಸುವ ಸ್ಥಳದಲ್ಲಿ ಹೀಗೆ ಸಂದಿಗ್ಧವಾದ ಪ್ರಯೋಗವನ್ನು ಮಾಡಿಬಿಟ್ಟು ಭ್ರಾಂತಿಕಕ್ಕೂ ಅಜ್ಞಾನಕಕ್ಕೂ ಸಂಶಯಕ್ಕೂ ಆಸ್ಪದವನ್ನುಂಟುಮಾಡಿಯಾರೇ ? ಇಂತಹ ಅತಿ ಸಾಹಸಾರ್ಥಗಳನ್ನು ಬಿಟ್ಟು ಕ್ಷರವಲ್ಲದುದು ಅಕ್ಷರವೆಂದು ಹೇಳಿ, ಬದ್ಧ ಜೀವನಲ್ಲದವನು ಯಾರೆಂದರೆ ಮುಕ್ತಜೀವನೆಂದು ಅರ್ಥ ಹೇಳುವದು ಯುಕ್ತ ವಿಷಯವಲ್ಲವೇ ? ಆದುದರಿಂದ ಸ್ವರೂಪೈಕ್ಯ ಹೇಳುವ ವಾದವು ಈ ಪ್ರಮಾಣಕ್ಕೆ ಪ್ರಬಲ ವಿರುದ್ಧವೆಂದು ಹೇಳಲೇನೊಂದೂ ಸಂದೇಹವಿರುವದಿಲ್ಲವು. ಜೀವನೇ ಬೇರೆ ಪರಮಾತ್ಮನೇ ಬೇರೆ ಎಂದು ಶ್ರೀ ವ್ಯಾಸ ಮಹರ್ಷಿಯು ಅನೇಕ ಸ್ಥಳಗಳಲ್ಲಿ ಸ್ಪಷ್ಟವಾಗಿ ಹೇಳಿರುತ್ತಾರೆ. ಇದೇ ಗೀತೆಯಲ್ಲೇ "ಅಪರೇಯಂ ಮಿತಸ್ತ್ವ

(೩) "ತತ್ರ ಯಃ ಪರಮಾತ್ಮಾತು ಸನಿತ್ಯೋ ನಿರ್ಗುಣಸ್ಸ್ಮೃತಃ ।

ನ್ಯಾಂ ಪ್ರಕೃತಿಂ ವಿದ್ಧಿಮೇಪರಾಂ । ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥" (೭. ೫) ಎಂದು ತನಗೆ ಶರೀರ ರೂಪದಲ್ಲಿ ಸಂಬಂಧಿಸಿದ ಎರಡು ಪ್ರಕೃತಿಗಳೆಂದೂ, ಒಂದು ಜಡ ಪ್ರಕೃತಿಯೆಂದೂ, ಇನ್ನೊಂದು ಜೀವವರ್ಗವೆಂದು ಹೇಳಿಕೊಳ್ಳುವ ಪರಾ ಪ್ರಕೃತಿಯೆಂದೂ ಹೇಳಿರುವದರಿಂದ ಜೀವರುಗಳೇ ಬೇರೆ ಪರಮಾತ್ಮನೇ ಬೇರೆ ಎಂದೂ ಸ್ಫುಟವಾಗಿ ಹೇಳಿರುತ್ತದೆ. ಹಿಂದೆ ಜೀವನನ್ನು ಪಂಚವಿಂಶಕನೆಂದೂ, ಪರಮಾತ್ಮನನ್ನು ಷಡ್ವಿಂಶಕನೆಂದೂ ಬೇರೆಯಾಗಿ ಉದಾಹರಿಸಿದ ಶಾಂತಿಪರ್ವ ಶ್ಲೋಕಗಳೇ ಸಾಕಾಗಿರುತ್ತವೆ. ಇದೂ ಅಲ್ಲದೆ ಮಹರ್ಷಿಯು ಇನ್ನೊಂದು ಕಡೆಯಲ್ಲಿ ಆದಿಪರ್ವದ ಶಕುಂತಲೋಪಾಖ್ಯಾನದಲ್ಲಿ,

(೪) ಏಕೋಽಹಮಸ್ಮೀತಿ ಚ ಮನ್ಯಸೇತ್ವಂ
ನ ಹೃಚ್ಛಯಂ ವೇತ್ಸಿ ಮುನಿಂ ಪುರಾಣಂ ।
ಯೋವೇದಿತಾ ಕರ್ಮಣಃ ಪಾಪಕಸ್ಯ
ತಸ್ಯಾಂತಿಕೇತ್ವಂ ವೃಜಿನಂ ಕರೋಷಿ ॥

ಎಂದು ಹಿಂದಿನ ಶ್ಲೋಕದಲ್ಲಿ ಈ ಜೀವಾತ್ಮನು ಸ್ವಾಮಿಯು ಸ್ವಂ - ಸ್ವತ್ತಾಗಿದ್ದರೂ ತನ್ನದು ಎಂದು ಚೋರಕೃತ್ಯವನ್ನು ಮಾಡುವನೆಂದು ಹೇಳಿ, ಓ ಜೀವಾತ್ಮನೇ ನೀನೊಬ್ಬನೇ ಎಂದು ದುರಭಿಮಾನದಿಂದಿರುವ ಹಾಗೆ ತೋರುತ್ತದೆ ನಿನ್ನ ಪಕ್ಕದಲ್ಲೇ ನಿನ್ನ ಹೃದಯವೆಂಬ ದೇವಾಲಯದಲ್ಲಿ ನಿನಗಾಗಿ ದಿವ್ಯಮಂಗಳ ವಿಗ್ರಹವನ್ನು ಧರಿಸಿ ನಿನಗೆ ನಿಯಾಮಕನಾಗಿ ಸನಾತನನಾದ ಹಾರ್ದಾವತಾರಿಯು ನೆಲಸಿರುವನೆಂಬುದು ತಿಳಿಯದೋ ಏನು - ಈ ಆತ್ಮಾಪಹಾರ ಚೋರಕೃತ್ಯವನ್ನು ಮಾಡಿದ ಪಾಪಕರ್ಮವನ್ನು ಮೊದಲು ತಿಳಿಯುವನೇ ಆ ಸರ್ವಜ್ಞನು. ಅಂಥಾವನ ಸಮೀಪದಲ್ಲಿಯೇ ಇದ್ದುಕೊಂಡು ನೀನು ಈ ಪಾಪಕೃತ್ಯವನ್ನು ನಡಿಸುತ್ತೀಯೇ. ಇದು ತುಂಬಾ ಶೋಚನೀಯವಾದ ವಿಷಯವೆಂದು ಶಕುಂತಳೆಯು ದುಷ್ಯಂತನಿಗೆ ಹೇಳುತ್ತಾಳೆ.

ಮೇಲೆ ಮಹರ್ಷಿಯ ಪ್ರಮಾಣವೇ ಸಾಕಾಗಿದ್ದರೂ ತೃಪ್ತಿ ಇಲ್ಲದೆ ಶ್ರೀ ದೇಶಿಕರು ಪುನಃ ಇನ್ನೊಂದು ಪ್ರಮಾಣವನ್ನುದಾಹರಿಸಿ, ಜೀವ ಪರಮಾತ್ಮ ಭೇದವನ್ನೇ ಉಪದೇಶಿಸುವದರಿಂದ ಸ್ವರೂಪೈಕ್ಯಕ್ಕೆ ಸುತರಾಂ ಅವಕಾಶ ವಿಲ್ಲವೆಂದು ವ್ಯಕ್ತಪಡಿಸುತ್ತಾರೆ

(೩) ಭಾರ. ಶಾಂತಿ ೩೬೧-೧೪, ೧೫. (೪) ಭಾರ. ಆದಿ ೯೮-೪

**ಸತು ನಾರಾಯಣೋ ಜ್ಞೇಯಸ್ಸರ್ವಾತ್ಮಾ ಪುರುಷೋಹಿ ಸಃ । ನಲಿಪ್ಯತೇ ಕರ್ಮಫಲೈಃ ಪದ್ಮ ಪತ್ರಮಿವಾಂಭಸಾ । ಕರ್ಮಾತ್ಮಾ ತ್ವಪರೋಯೋಸೌ ಮೋಕ್ಷಬಂಧೈಸ್ಸಯುಜ್ಯತೇ" ॥**

---

(೩) ಇದು **"ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋವಿದಧಾತಿ ಕಾಮಾನ್"** ಎಂಬ ಶ್ರುತ್ಯುಪಬ್ರಹ್ಮಣವಾಗಿ **ಚತು**ರ್ಮುಖ ಬ್ರಹ್ಮನು ತನ್ನ ಮಗನಾದ ರುದ್ರನಿಗೆ ಉಪದೇಶಿಸುವ ಪ್ರಕರಣವು, **ತತ್ರ**-ಆ ಜೀವಾತ್ಮನಲ್ಲಿ ಅಂತರ್ಯಾಮಿಯಾಗಿರುವ ವಿಷಯದಲ್ಲಿ, **ಯಃ**-ಯಾವ, **ಪರಮಾತ್ಮಾತು**-ಪರಮಾತ್ಮನಾದರೋ, **ನಿತ್ಯಃ**-ಶಾಶ್ವತನಾದವನು, **ನಿರ್ಗುಣಃ**-ಈ ಲೋಕದ ಗುಣಗಳಿಲ್ಲದವನು ಎಂದು, **ಸ್ಮೃತಃ**-ಸ್ಮರಿಸಲ್ಪಡುವವನು ಅಥವಾ ಸ್ಮೃತಿಯಲ್ಲಿ ಹೇಳಲ್ಪಟ್ಟವನು. ಯಾವ ಗುಣಗಳೂ ಇಲ್ಲದವನೆಂದು ಏಕೆ ಅರ್ಥ ಮಾಡಕೂಡದು ? ಎಂದರೆ ಯಾವ ಗುಣಗಳೂ ಇಲ್ಲದ ವಸ್ತುವು ಇಲ್ಲವೇ ಇಲ್ಲವು ಹಾಗೆ ನಿರ್ಗುಣವಾದ ವಸ್ತುವನ್ನು ಶಾಸ್ತ್ರಗಳು ಹೊಗಳಲಾರವು ಆಗ ಶಾಸ್ತ್ರವು ವ್ಯರ್ಥವಾಗುತ್ತದೆ. ಶ್ರೀ ವ್ಯಾಸಮಹರ್ಷಿಯಭಿಪ್ರಾಯವು ಹಾಗಲ್ಲವೆಂಬುದು ಮುಂದೆ ಇದೇ ಅಧ್ಯಾಯದ ೧೮ನೆಯ ಶ್ಲೋಕದಿಂದ ವ್ಯಕ್ತವು **"ಜ್ಞಾತಾಜ್ಞೇಯಂ ಸಗುಣಂ ನಿರ್ಗುಣಂಚ"** ಎಂದು ಕ್ರಮವಾಗಿ ಹೇಳಿರುವದರಿಂದ **ಜ್ಞಾತಾ** ಇಲ್ಲಿನ ಸತ್ವ ರಜಸ್ತಮೋಗುಣಗಳಿಂದ ಯುಕ್ತನಾಗದಿರವದರಿಂದ ಸಗುಣನಾದ ಜೀವಾತ್ಮನು. **ಜ್ಞೇಯಂ** - ಇಂತಹ ಸತ್ವ ರಜಸ್ತಮೋಗುಣಗಳಿಂದ ಯುಕ್ತನಾಗದಿರುವದರಿಂದ ನಿರ್ಗುಣನೆನಿಸುವ, ಅಪ್ರಾಕೃತ ಕಲ್ಯಾಣಗುಣಗಳಿಂದ ಯುಕ್ತನಾದ ಪರಮಾತ್ಮನು ಎಂದು ಮುಂದೆ ಹೇಳಲ್ಪಟ್ಟಿರುತ್ತದೆ. **ಸತು** - ಅಂತಹ ಪರಮಾತ್ಮನಾದರೋ, **ನಾರಾಯಣಃ** – ನಾರಾಯಣನು, **ಜ್ಞೇಯಃ** - ಆತನೇ ತಿಳಿಯಲ್ಪಡತಕ್ಕ ವಸ್ತುವು, ಶಾಸ್ತ್ರಜನ್ಯ ಜ್ಞಾನದಿಂದ ತಿಳಿಯಲ್ಪಡತಕ್ಕವನು, **ಸರ್ವಾತ್ಮಾ** - ಆತನೇ ಸಮಸ್ತಕ್ಕೂ ಅಂತರಾತ್ಮಾ, **ಸಃ** - ಆತನೇ, **ಪುರುಷೋಹಿ** - ಪರಮಪುರುಷನು, ಅಥವಾ, **ಏಕಃ ಪುರುಷಃ** – ಮುಖ್ಯ ಪುರುಷನು, ಅಥವಾ, **ಸ್ತ್ರೀಪ್ರಾಯಮಿತರತ್** ಎಂಬ ವ್ಯಾಸೋಕ್ತಿಯ ಪ್ರಕಾರ, ಆತನೊಬ್ಬನೇ ಪುರುಷ ಸೂಕ್ತದಲ್ಲಿ ಪ್ರತಿಪಾದಿಸಲ್ಪಟ್ಟಿರುವ ಪುರುಷನು ; **ಅಂಭಸಾ** – ಉದಕದಿಂದ, **ಪದ್ಮಪತ್ರಂ** - ಕಮಲಪತ್ರವು ಹೇಗೆ, **ನಲಿಪ್ಯತೇ** - ಲೇಪಿಸಲ್ಪಡುವದಿಲ್ಲವೋ, ಹಾಗೆ, **ಕರ್ಮಫಲೈಃ** - ಕರ್ಮಗಳ ಫಲದಿಂದ ಎಂದರೆ ತಾನು ಪ್ರೇರಕನಾಗಿ ಮಾಡಿಸುವ ಕರ್ಮಫಲಗಳಿಂದ, **ನಲಿಪ್ಯತೇ** - ಲೇಪಿಸಲ್ಪಡುವದಿಲ್ಲವು. ಆದರೆ ಆ ಕರ್ಮ

(೪) **"ಅಯಃಪಿಂಡೇ ಯಥಾವಹ್ನಿರ್ಭಿನ್ನಸ್ತಿಷ್ಠತ್ಯ ಭಿನ್ನವತ್ । ತಥಾವಿಶ್ವಮಿದಂ ದೇವೋಹ್ಯಾವೃತ್ಯಪರಿತಿಷ್ಠತಿ ॥" ಇತ್ಯಾದಿ ಪ್ರಮಾಣ ಸಹಸ್ರಂ ವಿರೋಧಿಕ್ಕುಮ್.**

---

ಗಳಿಗೆ ಗುರಿ ಯಾರು ? ಎಂದರೆ ಹೇಳುತ್ತಾರೆ. **ಕರ್ಮಾತ್ಮಾತು** - ಆ ಕರ್ಮಗಳ ಸ್ವರೂಪಕ್ಕೆ ಶಿಲುಕಿದವನಾದರೋ, **ಅಪರಃ** - ಆ ಪರಮಾತ್ಮನ ಹಾಗೆ ಸರ್ವೋತ್ಕೃಷ್ಟನಲ್ಲದ, **ಯೋಽಸೌ** - ಯಾವ ಈ ಜೀವಾತ್ಮನಾದರೋ, **ಅಸೌ** ಎಂದು ಹೇಳಿರುವದರಿಂದ ನಿನ್ನಲ್ಲೂ ನನ್ನಲ್ಲೂ ಇದ್ದು ಹೀಗೆ ಅನೇಕರಾಗಿರುವ ಈ ಜೀವಾತ್ಮನಾದರೋ ಎಂಬ ಭಾವವು ಕೆಲವು ಪುಸ್ತಕಗಳಲ್ಲಿ **ಅವರಃ** ಎಂಬುದಕ್ಕೆ ಬದಲಾಗಿ **ಅಪರಃ** ಎಂಬ ಪಾಠಾಂತರವುಂಟು, ಆಗ **ಪರಮಾತ್ಮನಿಗಿಂತ ಬೇರೆ** ಯಾದವನು ಈ ಜೀವಾತ್ಮನು ಎಂಬರ್ಥವು. ಆಗಲೂ ಜೀವ ಪರಮಾತ್ಮರ ಭೇದವೇ ಹೇಳಲ್ಪಟ್ಟಿತು. ಮೊದಲನೆಯ ಪಾಠವೇ ಸರಸವಾದುದು ; **ಸಃ** - ಅಂತಹ ಜೀವಾತ್ಮನು, **ಮೋಕ್ಷಬಂಧೈಃ** - ಮೋಕ್ಷಫಲವೇನು, ಸಂಸಾರಬಂಧ ವೇನು ಈ ಫಲಗಳಿಂದ, **ಯುಜ್ಯತೇ** - ಹೊಂದುವನಾಗುತ್ತಾನೆ " ಇಲ್ಲಿ **ಸತು ನಾರಾಯಣೋಜ್ಞೇಯಃ** ಎಂಬ ವಾಕ್ಯವು ಚತುರ್ಮುಖನು ರುದ್ರನಿಗೆ ಉಪದೇಶಿಸುವ ವಾಕ್ಯದಲ್ಲಿರುವದರಿಂದ, ಈ ಇಬ್ಬರಿಗಿಂತ ವಿಲಕ್ಷಣನಾಗಿ ಉತ್ಕೃಷ್ಟನೆಂಬುದು ವ್ಯಕ್ತವು.

(೪) "**ಅಯಃಪಿಂಡೇ** - ಕಾದ ಕಬ್ಬಿಣದ ಮುದ್ದೆಯಲ್ಲಿ, **ವಹ್ನಿಃ** - ಅಗ್ನಿಯು, **ಭಿನ್ನಃ** - ಯಥಾರ್ಥವಾಗಿ ಭಿನ್ನವಾಗಿದ್ದರೂ, **ಯಥಾ** - ಹೇಗೆ, **ಅಭಿನ್ನವತ್** - ಭಿನ್ನವಲ್ಲವೆಂಬ ಹಾಗೆ, **ತಿಷ್ಠತಿ** - ಇರುತ್ತದೆಯೋ, **ತಥಾ** - ಹಾಗೆಯೇ, **ದೇವೋಹಿ** - ಕ್ರೀಡಾಪರನಾದ ಪರಮಾತ್ಮನೂ ಕೂಡ, **ವಿಶ್ವಮಿದಂ ಆವೃತ್ಯ** - ವಾಸ್ತವವಾಗಿಯೂ ತನಗಿಂತಲೂ ಬೇರೆಯಾದ ಈ ವಿಶ್ವವನ್ನೆಲ್ಲಾ ಪ್ರವೇಶಿಸಿ, **ಪರಿತಿಷ್ಠತಿ** - ಅದರೊಂದಿಗೆ ಸೇರಿರುವದರಿಂದ ಒಂದೆಯೋ ಎನ್ನುವಹಾಗೆ, "**ಯಚ್ಚ ಕಿಂಚಿತ್ ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣ ಸ್ಥಿತಃ ॥**" ಎಂದು ಹೇಳಿರುವ ಹಾಗೆ ಇರುತ್ತಾನೆಂಬ ಭಾವವು ಇಲ್ಲಿ **ಅಭಿನ್ನವತ್** - ಬೇರೆಯಲ್ಲವೋ ಎನ್ನುವ ಹಾಗೆ, ಎಂದಿರುವದರಿಂದ ಭಿನ್ನವಾದುದೆಂಬುದು ಸುಸ್ಪಷ್ಟವು." **ಇತ್ಯಾದಿ** - ಇವೇ ಮೊದಲಾದ, **ಪ್ರಮಾಣ ಸಹಸ್ರಂ** - ಸಾವಿರಾರು ಪ್ರಮಾಣಗಳು, **ವಿರೋ**

---

(೪) **ಜಯಾಖ್ಯಸಂಹಿತೆ.**

## ಪರಮಸಾಮ್ಯ ಶ್ರುತೇರಭಿಪ್ರಾಯಃ

ಆಗೈಯಾಲ್ ಮುಕ್ತನುಕ್ಕು ಜ್ಞಾನ ಭೋಗಾದಿಗಳಾಲ್ ವನ್ದ ಪರಮಸಾಮ್ಯಮೇ ಯುಳ್ಳದು.

---

**ಧಿಕ್ಕುವಮ್** - ವಿರೋಧವಾದವುಗಳಾಗುತ್ತವೆ ಇಲ್ಲಿ **ಸಹಸ್ರ** ಶಬ್ದವು ಅನೇಕವೆಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿರುತ್ತದೆ. ಸ್ವರೂಪೈಕ್ಯ ಹೇಳಿದರೆ ಸಾವಿರಾರು ಪ್ರಮಾಣಗಳಿಗೆ ವಿರೋಧವಾಗುತ್ತವೆಂಬ ಭಾವವು ಹಾಗಾದರೆ ಐಕ್ಯವನ್ನು ಹೇಳುವ ವಾಕ್ಯಗಳಿಗೆ ಅರ್ಥ ಹೇಗೆ ಎಂದರೆ **ರಾಮಸುಗ್ರೀವಯೋರೈಕ್ಯಂ** ಎಂದು ಹೇಳಿರುವ ಹಾಗೆ ಸಯುಕ್ತಾಗಿರುವ ಭಾವವೆಂದು ಹಿಂದೆಯೇ ಹೇಳಲ್ಪಟ್ಟಿತು.

## ಪರಮಸಾಮ್ಯವನ್ನು ಹೇಳುವ ಶ್ರುತಿಯ ಅಭಿಪ್ರಾಯವು.

• ಇಷ್ಟು ದೂರ ಉಪಪಾದನ ಮಾಡಿ ದ್ವೈತಿಗಳ ಆನಂದತಾರತಮ್ಯವನ್ನೂ, ಅದ್ವೈತಿಗಳ ಸ್ವರೂಪೈಕ್ಯವನ್ನೂ, ಖಂಡಿಸಿದುದರಿಂದ "**ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ**" ಎಂಬ ಶ್ರುತಿಯಲ್ಲಿ ಸಾಮ್ಯದ ಅಭಿಪ್ರಾಯವೇನು ಎಲ್ಲಾ ವಿಷಯದಲ್ಲೂ ಸಮವೇ ? ಎಲ್ಲಾ ವಿಷಯದಲ್ಲೂ ಸಮವಾದರೆ ಐಕ್ಯಾಭಿಪ್ರಾಯವೇ ಆಗುತ್ತದೆ ಆದುದರಿಂದ ಯಾವಾಗ ಪರಮಾತ್ಮನಿಗೆ ಸಮವೆಂದು ಹೇಳಲ್ಪಟ್ಟಿತೋ, ಅದರಿಂದಲೇ ಕೆಲವು ವಿಷಯಗಳಲ್ಲಿ ಸಮವಲ್ಲವೆಂಬುದು ವ್ಯಕ್ತವು ಮೊದಲು ಯಾವ ವಿಷಯದಲ್ಲಿ ಸಮಭಾವವೆಂಬುದನ್ನು ಹೇಳಿ, ಅನಂತರ ಯಾವ ವಿಷಯಗಳಲ್ಲಿ ಭಿನ್ನತೆಯೆಂಬುದನ್ನು ತಿಳಿಸುತ್ತಾರೆ

**ಆಗೈಯಾಲ್** - ಆದುದರಿಂದ, ಮುಕ್ತನಿಗೆ, **ಜ್ಞಾನಭೋಗಾದಿಗಳಾಲ್**- **ಜ್ಞಾನ** ವೆಂದರೆ ಏಕಕಾಲದಲ್ಲಿ ಪ್ರತ್ಯಕ್ಷವಾಗಿ ಸಮಸ್ತವನ್ನೂ ವಿಷಯೀಕರಿಸುವ ಸರ್ವಜ್ಞತ್ವವು, ಭೋಗವೆಂದರೆ ತನಗೆ ಯಾವಾಗಲೂ ಅನುಕೂಲವಾಗಿರುವ ಹಾಗೆ ಎಲ್ಲವೂ ಸರ್ವೇಶ್ವರನಿಗೆ ಶರೀರವಾಗಿರುವದರಿಂದ ಹೀಗೆ ಎಲ್ಲಾ ವಿಭೂತಿಯಿಂದಲೂ ಸೇರಿದವನಾಗಿ ಪರಮಾತ್ಮನನ್ನು ಅನುಭವಿಸುವಿಕೆಯು, ಇಲ್ಲಿ ಆದಿ ಶಬ್ದದಿಂದ ಅಪಹತ ಪಾಪ್ಮತ್ವಾದಿ ಗುಣಾಷ್ಟಕವು ಬೋಧಿಸಲ್ಪಟ್ಟಿತು, ಇವುಗಳಿಂದ, **ವನ್ದ** - ಪ್ರಾಪ್ತವಾದ, **ಪರಮಸಾಮ್ಯವೇ ಉಳ್ಳದು** - ಪರಮಾತ್ಮನೊಂದಿಗೆ ಸಮತ್ವವೇ ಇಲ್ಲಿ ಅಭಿಪ್ರಾಯವು. ಸರ್ವೇಶ್ವರನೊಂದಿಗೆ ಸಾಮ್ಯವೆಂಬುದರ ಅಭಿಪ್ರಾಯವು

**ಮುಕ್ತೇ ಅವಿದ್ಯಮಾನಾಃ ಭಗವದಸಾಧಾರಣಧರ್ಮಾಃ.**

**ಈಶ್ವರನುಕ್ಕು ಛತ್ರಚಾಮರಾದಿಗಳೈಪ್ಪೋಲೆ, ಲಕ್ಷಣಮಾಗ**

ಏನೆಂದರೆ (೧) ಪರಮಾತ್ಮನ ಹಾಗೆ, ಎಲ್ಲವನ್ನೂ ಏಕಕಾಲದಲ್ಲಿ ಸಾಕ್ಷಾತ್ಕರಿಸುವ ಸರ್ವಜ್ಞತೆಯನ್ನು ಹೊಂದುವದು. (೨) ಎಲ್ಲವೂ ಅನುಕೂಲವಾಗುವದರಿಂದ, ಸರ್ವವೂ ಅನುಕೂಲವಾದುದಾಗಿ ಉಭಯವಿಭೂತಿವಿಶಿಷ್ಟನಾದ ಪರಮಾತ್ಮನನ್ನ ನುಭವಿಸುವ ನಿರತಿಶಯ ಸುಖವನ್ನು ಹೊಂದುವದು. (೩) ಸ್ವಸ್ವರೂಪಾವಿರ್ಭಾವವು ಉಂಟಾಗುವದರಿಂದ ಸರ್ವೇಶ್ವರನ ಹಾಗೆ ಅಪಹತಪಾಪ್ಮತ್ವಾದಿ ಗುಣಾಷ್ಟಕಗಳನ್ನುಳ್ಳವನಾಗುವದು. ಈ ಅಭಿಪ್ರಾಯಗಳೆಲ್ಲಾ ಬ್ರಹ್ಮಸೂತ್ರದ ಸಂಪದ್ಯಾವಿರ್ಭಾವ ಸಙ್ಕಲ್ಪಾಧಿಕರಣಗಳಲ್ಲೂ, ಮತ್ತು **ಭೋಗಮಾತ್ರಸಾಮ್ಯ ಲಿಙ್ಗಾಚ್ಚ** ಎಂಬ ಸೂತ್ರದಲ್ಲೂ ಉಪಪಾದಿತಗಳಾಗಿವೆ ಆದುದರಿಂದ ಜ್ಞಾನಭೋಗಾದ ಸಾಮ್ಯದಲ್ಲಿ ಮಾತ್ರವೇ "**ಪರಮಸಾಮ್ಯ**" ಶ್ರುತಿಗೆ ಅಭಿಪ್ರಾಯವೆಂದು ತಿಳಿಯತಕ್ಕದ್ದು.

ಹಿಂದೆ "ಇದು ಕುದುರೆಗೆ ಸಮ" ಎಂದು ಹೇಳಿದರೆ, ಇದು ಕುದುರೆಯಲ್ಲವು ಕುದುರೆಯ ಕೆಲವು ಗುಣಗಳು ಮಾತ್ರವಿರುವದರಿಂದ ಕುದುರೆಗೆ ಸಮವೆಂದು ಹೇಳಲ್ಪಟ್ಟಿತೆಂದೂ, ಇದಕ್ಕೂ ಕುದುರೆಗೂ ವ್ಯತ್ಯಾಸ ಉಂಟೆಂಬುವದು ಸ್ವತಃ ವ್ಯಕ್ತವೆಂದೂ ಹೇಳಲ್ಪಟ್ಟಿತು. ಹಾಗೆಯೇ ಇಲ್ಲಿಯೂ ಮುಕ್ತನು ಪರಮಾತ್ಮನಿಗೆ ಸಮನಾಗುವನು ಎಂದರೆ ಯಾವ ಧರ್ಮಗಳಲ್ಲಿ ಸಮವೆಂಬುವದು ಇಲ್ಲಿ ವ್ಯಕ್ತಗೊಳಿಸಲ್ಪಟ್ಟಿತು. ಇನ್ನು ಮುಂದೆ ಯಾವ ವಿಷಯಗಳಲ್ಲಿ ಭಿನ್ನತೆ ಎಂಬುದನ್ನು ವಿಶದೀಕರಿಸುತ್ತಾರೆ. ಪರಮಾತ್ಮನಿಗೆ ಮಾತ್ರವೇ ಅಸಾಧಾರಣವಾದ ಧರ್ಮಗಳು ಯಾವುವು, ಹಾಗೆಯೇ ಜೀವಕೋಟಿಗೆ ಸೇರಿರುವ ಮುಕ್ತನಿಗೆ ಮಾತ್ರವೇ ಅಸಾಧಾರಣವಾದ ಧರ್ಮಗಳಾವುವು ಎಂಬುವದನ್ನು ಮುಂದೆ ತಿಳಿಸುತ್ತಾರೆ.

**ಮುಕ್ತನಲ್ಲಿಲ್ಲದಿರುವ ಭಗವಂತನಲ್ಲಿ ಮಾತ್ರವಿರುವ ಧರ್ಮಗಳು.**

**ಈಶ್ವರನುಕ್ಕು** - ಸರ್ವೇಶ್ವರನಿಗೆ, ಛತ್ರ ಚಾಮರ ಮೊದಲಾದವುಗಳ ಹಾಗೆ, ಇಲ್ಲಿ ಆದಿಪದದಿಂದ ಶ್ರೀವತ್ಸ, ಕೌಸ್ತುಭ ವೈಜಯಂತೀ ಮೊದಲಾದವು ಹೇಳಲ್ಪಟ್ಟಿತು, **ಲಕ್ಷಣಮಾಗಚ್ಚೊನ್ನ** - ಪರಮಾತ್ಮನಿಗೆ ಮಾತ್ರವೇ ಅಸಾಧಾರಣ ವಿಶೇಷಣಗಳಾಗಿ ಹೇಳಲ್ಪಟ್ಟ, ಎಂದರೆ ಛತ್ರಚಾಮರಾದಿಗಳು ಭಗವಂತನಿಗೆ ಮಾತ್ರವೇ ಹೇಗೆ ಅಸಾಧಾರಣ ವಿಶೇಷಣಗಳೋ ಹಾಗೆ ಎಂಬರ್ಥವು, **ಲಕ್ಷಣ**

ವೆಂದರೆ ಅಸಾಧಾರಣವಾದ ಧರ್ಮವೆಂಬರ್ಥವು, ಅವುಗಳು ಹೇಗೆ ಲಕ್ಷಣಗಳೋ ಹಾಗೆಯೇ ಮುಂದೆ ಹೇಳುವ ಧರ್ಮಗಳೆಲ್ಲಾ ಪರಮಾತ್ಮನಿಗೆ ಮಾತ್ರವೇ ಅಸಾಧಾರಣ ಧರ್ಮಗಳೇ ವಿನಾ ಇನ್ಯಾರಲ್ಲೂ ಎಂದರೆ ಚತುರ್ಮುಖರುದ್ರಾದಿ ಸರ್ವ ಜೀವಾತರಲ್ಲೂ ಇಲ್ಲವೆಂಬ ಭಾವವು ಇವುಗಳು ಮುಖ್ಯವಾಗಿ ಜಗದ್ವ್ಯಾಪಾರಧರ್ಮಗಳಾದುದರಿಂದ ಶ್ರೀ ವ್ಯಾಸರು ಇವುಗಳನ್ನೆಲ್ಲಾ ಜಗದ್ವ್ಯಾಪಾರ ವರ್ಜಂ ಎಂಬ ಸೂತ್ರದ ಮೂಲಕ ಬೋಧಿಸಿದರು ಅವುಗಳು ಯಾವುವೆಂದರೆ —

(೧) **ಜಗತ್ಕಾರಣತ್ವ** - ಸಮಸ್ತ ಜಗತ್ತಿಗೂ ಕಾರಣಭೂತನಾಗಿರುವಿಕೆಯು, "ಯತೋವಾ ಇಮಾನಿ ಭೂತಾನಿ ಜಾಯನ್ತೇ ಯೇನ ಜಾತಾನಿ ಜೀವಂತಿ ಯತ್ಪ್ರಯನ್ತ್ಯಭಿ ಸಂವಿಶನ್ತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮ" (ತೈ. ಭೃಗು) ಎಂಬ ಶ್ರುತ್ಯನುಸಾರವಾಗಿಯೂ ಜನ್ಮಾದ್ಯಸ್ಯಯತಃ ಎಂಬ ಸೂತ್ರಾನುಸಾರವಾಗಿಯೂ, ಜಗತ್ತಿನ ಜನ್ಮಸ್ಥಿತಿಲಯಾದಿಗಳಿಗೆ ಕಾರಣಭೂತನ್ಯಾರೋ ಆತನೇ ಪರಬ್ರಹ್ಮವೆಂದು ಬೋಧಿಸುವದರಿಂದಲೂ, ಮುಕ್ತರೇ ಮೊದಲಾದವರಿಗೆ ಇಂತಹ ಶಕ್ತಿ ಇಲ್ಲದಿರುವದರಿಂದ, ಪರಬ್ರಹ್ಮನಿಗೆ ಮಾತ್ರವೇ ಅಸಾಧಾರಣ ಧರ್ಮವು ಕಾರಣವು ಮೂರು ವಿಧ, ಉಪಾದಾನ ಕಾರಣ, ನಿಮಿತ್ತಕಾರಣ, ಸಹಕಾರಿಕಾರಣ. ಘಟವೆಂಬ ಕಾರ್ಯಕ್ಕೆ ಮೃತ್ತು ಉಪಾದಾನ ಕಾರಣವು, ಕುಲಾಲನು ನಿಮಿತ್ತಕಾರಣವು, ದಂಡ ಚಕ್ರಾದಿಗಳು ಸಹಕಾರಿ ಕಾರಣಗಳು. ಈ ಜಗತ್ತೆಂಬ ಕಾರ್ಯಕ್ಕೆ ಈ ಮೂರುವಿಧ ಕಾರಣವೂ ಪರಬ್ರಹ್ಮನೇ. ಹಾಗೆಯೇ ಶ್ರುತಿಯು ಹೇಳುತ್ತದೆ.—"ಯಥೋರ್ಣನಾಭಿಸ್ಸೃಜತೇ ಗೃಹ್ಣತೇ ಚ" (ಮುಂ. ೧. ೧ ೭) ಜೇಡರ ಹುಳವು ತಂತುವನ್ನುಂಟುಮಾಡಿ ಅದನ್ನೇ ಹೇಗೆ ನುಂಗುತ್ತದೋ ಹಾಗೆ, ಜೇಡರಹುಳುವಿನ ದ್ರವ್ಯದಿಂದಲೇ ತಂತುವಾಗಿರುವದರಿಂದ ಜೇಡರಹುಳುವು ತಂತುವಿಗೆ ಉಪಾದಾನಕಾರಣವು ಅದು ಸಂಕಲ್ಪಿಸಿ ತಂತುವನ್ನು ಬಿಡುವದರಿಂದ ಅದೇ ನಿಮಿತ್ತಕಾರಣವು ತನ್ನ ಕಾಲುಗಳ ಸಹಾಯದಿಂದ ನೂಲುವದರಿಂದ ಸಹಕಾರಿ ಕಾರಣವೂ ಅದೇ. ಹೀಗೆ ಸರ್ವೇಶ್ವರನು ಸೃಷ್ಟಿಸಿದ ಒಂದು ಹುಳಕ್ಕೇನೇ ಮೂರು ವಿಧ ಕಾರಣವೂ ಆಗಲು ಶಕ್ತಿಯಿದ್ದರೆ, ಸರ್ವಶಕ್ತನಾದ ಸರ್ವೇಶ್ವರನಿಗೆ ಅಂತಹ ಶಕ್ತಿಯಿಲ್ಲವೇ? ಹೀಗಿದ್ದರೂ, ದ್ವೈತಸಿದ್ಧಾಂತಿಗಳು ಸರ್ವೇಶ್ವರನು ನಿಮಿತ್ತಕಾರಣಮಾತ್ರವೆಂದೂ ಪ್ರಕೃತಿಯು ಉಪಾದಾನಕಾರಣವೆಂದೂ ಹೇಳುವರು ನಮ್ಮ ಸಿದ್ಧಾಂತ ಪ್ರಕಾರ ಸೂಕ್ಷ್ಮಚಿದಚಿದ್ವಿಶಿಷ್ಟ ಸರ್ವೇಶ್ವರನೇ ಕಾರಣವು, ಸ್ಥೂಲಚಿದಚಿದ್ವಿಶಿಷ್ಟ ಸರ್ವೇಶ್ವರನೇ ಕಾರ್ಯವು, ಹೀಗೆ ಹೇಳುವದರಿಂದ ಪರಮಾತ್ಮನಿಗೇ ಜಗತ್ಕಾರಣತ್ವವನ್ನು ಹೇಳುವ ಶ್ರುತಿಗಳು ನಮಗೆ ಸಮಂಜಸವಾದವು. ಕಾರ್ಯವೂ ಕಾರಣವೂ ಒಂದೇ ಎಂದು ಹೇಳುವ, "ತದನನ್ಯ

ಚಿತ್ತ್ವ, ಜಗತ್ಕಾರಣತ್ವ, ಮೋಕ್ಷಪ್ರದತ್ವ, ಸರ್ವಾಧಾರತ್ವ, ಸರ್ವನಿಯಂತೃತ್ವ, ಸರ್ವಶೇಷಿತ್ವ, ಸರ್ವಶರೀರಿತ್ವ, ಸರ್ವಶಬ್ದವಾಚ್ಯತ್ವ, ಸರ್ವವೇದ

---

ತ್ವಂ ಆರಂಭಣ ಶಬ್ದಾದಿಭ್ಯಃ" ಎಂಬ ಸೂತ್ರಾರ್ಥವೂ ನಮಗೆ ಸಮಂಜಸವಾದುದೇ. ದ್ವೈತ ಸಿದ್ಧಾಂತಿಗಳು ನಿಮಿತ್ತಕಾರಣ ಮಾತ್ರವನ್ನು ಹೇಳುವದರಿಂದ ಈ ಸೂತ್ರಕ್ಕೆ ಬೇರೇ ವಿಧವಾಗಿ ಅರ್ಥವನ್ನು ಹೇಳುತ್ತಾರೆ

(೨) **ಮೋಕ್ಷಪ್ರದತ್ವ** - ಮೋಕ್ಷವನ್ನು ಕೊಡುವ ಶಕ್ತಿಯು. ಇದು ಶ್ರೀಮನ್ನಾರಾಯಣನಿಗೆ ಮಾತ್ರವೇ ಇದೆಯೇ ವಿನಾ ಇನ್ನಾರಿಗೂ ಇಲ್ಲವು. ಚತುರ್ಮುಖ ರುದ್ರಾದಿಗಳಿಗೆ ಈ ಶಕ್ತಿಯಿಲ್ಲವೆಂಬುದಕ್ಕೆ ಪರದೇವತಾ ಪಾರಮಾರ್ಥ್ಯಾಧಿಕಾರದ ೬೯೦-೭೦೦ ನೆಯ ಪುಟಗಳನ್ನು ನೋಡಿ. ಇತಿಹಾಸಗಳಲ್ಲಿ ಎಲ್ಲಿಯೂ ರುದ್ರನು ಮೋಕ್ಷವನ್ನಿತ್ತನೆಂಬುದಕ್ಕೆ ನಿದರ್ಶನವಿಲ್ಲವು. ಮಾರ್ಕಂಡೇಯರಿಗೆ ರುದ್ರನಿಂದ ಅಸದ್ರಕ್ಷಣೆಯೂ "ನಾರಾಯಣನರುಳೇ" (ತಿರು. ೪. ೧೦. ೮) ಶ್ರೀಮನ್ನಾರಾಯಣನ ಕೃಪೆಯೇ ಯೆಂದು ಹೇಳಲ್ಪಟ್ಟಿರುತ್ತದೆ.

(೩) ಸರ್ವಾಧಾರತ್ವ - ಸಮಸ್ತಕ್ಕೂ ಆಧಾರಭೂತನಾಗಿರುವಿಕೆಯು, ಇದು ನಾರಾಯಣ ಶಬ್ದದಿಂದ ವ್ಯಕ್ತವು

(೪) ಸರ್ವನಿಯಂತೃತ್ವ - ಸಮಸ್ತಕ್ಕೂ ಅಂತರ್ಯಾಮಿಯಾಗಿ ಸಮಸ್ತವನ್ನೂ ನಿಯಮಿಸೋಣವು, "ಭೋಕ್ತಾ ಭೋಗ್ಯಂ ಪ್ರೇರಿತಾರಂಚ ಮತ್ವಾ" (ಶ್ವೇ. ೧. ೧. ೨) ಎಂಬ ಶ್ರುತಿಯಲ್ಲಿ ಎಲ್ಲಕ್ಕೂ ಪ್ರೇರಕನೆಂದು ಹೇಳಿರುತ್ತದೆ. ಹಾಗೆಯೇ "ಅಂತರೋಯಮಯತಿ" ಎಂಬಿವೇ ಮೊದಲಾದ ವಾಕ್ಯಗಳಿಂದಲೂ ತೋರಿಬರುತ್ತದೆ

(೫) ಸರ್ವಶೇಷಿತ್ವ - ಸಮಸ್ತವನ್ನೂ ತನಗೆ ಶೇಷಭೂತವಾಗಿ ಉಳ್ಳೋಣವು ಸಮಸ್ತವೂ ಪರಮಾತ್ಮನ ಸ್ವಂ-ಸ್ವತ್ತಾದುದರಿಂದ ಸರ್ವಶೇಷಿತ್ವವೂ ಪರಮಾತ್ಮನಿಗೆ ಮಾತ್ರವೇ ಸಲ್ಲುತ್ತದೆ. ಜೀವಾತ್ಮನಿಗೆ ಸಲ್ಲುವದಿಲ್ಲವು. "ಪತಿಂ ವಿಶ್ವಸ್ಯ" ಎಂಬ ಶ್ರುತಿಪ್ರಮಾಣವಿರುತ್ತದೆ.

(೬) ಸರ್ವ ಶರೀರಿತ್ವ - ಸಮಸ್ತವೂ ತನಗೆ ಶರೀರವಾಗಿ ಅವಕ್ಕೆಲ್ಲಾ ತಾನು ಆತ್ಮಾವಾಗಿರುವದು ಇದು ಬೃಹದಾರಣ್ಯಕ ೫. ೭. ೧-೨೨ ದಲ್ಲೂ ಮತ್ತು ಸುಬಾಲ. ೭ ಖಂಡದಲ್ಲೂ ಛಾಂ. ೬ ೮. ೭ ರಲ್ಲೂ ಉಪಪಾದಿತವಾಗಿರುತ್ತದೆ. ಶರೀರಿ ಶರೀರ ಲಕ್ಷಣವ್ಯಾವುದೆಂಬುದಕ್ಕೆ ಪ್ರಧಾನ ಪ್ರತಿತಂತ್ರಾಧಿಕಾರದ ೨೫೭-೨೬೨ ನೆಯ ಪುಟಗಳನ್ನು ನೋಡಿ

ವೇದ್ಯತ್ವ, ಸರ್ವಲೋಕ ಶರಣ್ಯತ್ವ, ಸರ್ವಮುಮುಕ್ಷೂಪಾಸ್ಯತ್ವ, ಸರ್ವಫಲ

(೭) ಸರ್ವಶಬ್ದವಾಚ್ಯತ್ವ - ಇದು ಶರೀರಿತ್ವದಿಂದ ಪ್ರಾಪ್ತವಾಗುವ ಧರ್ಮವು, ಶರೀರವನ್ನು ಬೋಧಿಸುವ ಶಬ್ದವು ಶರೀರಿಗೂ ಅನ್ವಯಿಸುವದರಿಂದ, ಸಮಸ್ತ ವಸ್ತುಗಳನ್ನು ಬೋಧಿಸುವ ಶಬ್ದಗಳು ತತ್ತಚ್ಛರೀರಕ ಪರಮಾತ್ಮನನ್ನೇ ಬೋಧಿಸುತ್ತವೆ ಎಂಬ ಭಾವವು.

(೮) ಸರ್ವವೇದ ವೇದ್ಯತ್ವ - ಸಮಸ್ತ ವೇದಗಳಿಂದಲೂ ತಿಳಿಯಲ್ಪಡುವದು. "ವೇದೈಶ್ಚ ಸರ್ವೈ ರಹಮೇವ ವೇದ್ಯಃ" (ಗೀ. ೧೫ ೧೫) ಸಮಸ್ತ ವೇದಗಳೂ ಆತನನ್ನೇ ಹೇಗೆ ಬೋಧಿಸುತ್ತವೆ ಎಂದರೆ ಕೆಲವು ವಾಕ್ಯಗಳೇನೋ ಆತನ ಸ್ವರೂಪ, ರೂಪ, ಗುಣ ವಿಭವೈಶ್ವರ್ಯ ಚೇಷ್ಟೆ ಮೊದಲಾದವುಗಳನ್ನು ಪ್ರತಿಪಾದಿಸಬಹುದು. ಇನ್ನು ಕೆಲವು ಚಂದ್ರ, ಅಗ್ನಿ, ಸೂರ್ಯ, ಇಂದ್ರ ಮೊದಲಾದವರುಗಳ ಸ್ವರೂಪಾದಿಗಳನ್ನು ತಿಳಿಸಬಹುದು. ಇವರುಗಳಿಗೆಲ್ಲಾ ಸರ್ವೇಶ್ವರನೇ ಅಂತರಾತ್ಮಾವಾದುದರಿಂದ, ಅವರನ್ನು ಕುರಿತು ಯಜ್ಞ, ಹವಿಸ್ಸಮರ್ಪಣೆ, ಮೊದಲಾದ ಆರಾಧನೆಗಳೆಲ್ಲಾ ಸರ್ವೇಶ್ವರನನ್ನೇ ಹೋಗಿ ಸೇರುವದರಿಂದ, ಸರ್ವವೇದ ವೇದ್ಯತ್ವವು ಆತನಿಗೆ ಉಂಟು ಜೀವಾತ್ಮನಿಗೆ ಈ ಧರ್ಮವಿಲ್ಲವು.

(೯) ಸರ್ವಲೋಕ ಶರಣ್ಯತ್ವ - ಇದನ್ನೇ ಶ್ರೀ ಭಾಷ್ಯಕಾರರು ಅನಾಲೋಚಿತ ವಿಶೇಷಾಶೇಷಲೋಕ ಶರಣ್ಯತ್ವವೆಂದು ಹೇಳಿರುತ್ತಾರೆ. ಕುಲ, ಗುಣ, ವೃತ್ತದಿಂದ ಹೀನರಾಗಿದ್ದರೂ ಶರಣಾಗತರಾದ ಪಕ್ಷದಲ್ಲಿ ಎಲ್ಲರನ್ನೂ ಉದ್ಧರಿಸುವಿಕೆಯು. ಇದು ಹಿಂದೆಯೇ ಪ್ರಪತ್ತಿಗೆ ಸರ್ವಾಧಿಕಾರತ್ವವನ್ನು ಪಪಾದಿಸುವ ಸಂದರ್ಭದಲ್ಲಿ ಸಮರ್ಥಿಸಲ್ಪಟ್ಟಿರುತ್ತದೆ. ದ್ವೈತ ಸಿದ್ಧಾಂತಿಗಳು ಕೆಲವರಿಗೆ ಎಂದಿಗೂ ಮೋಕ್ಷವೇ ಇಲ್ಲವೆಂದೂ, ಕೆಲವರು ನಿತ್ಯ ಸಂಸಾರಿಗಳಾಗಿಯೂ ಕೆಲವರು ನಿತ್ಯ ನರಕಭಾಗಿಗಳಾಗಿಯೂ ಇರುತ್ತಾರೆಂದೂ ಹೇಳುವರು. ಗೀತೆಯಲ್ಲಿ "ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮ್ಯಜಸ್ರ ಮಶುಭಾನ್ ಆಸುರೀಷ್ವೇವಯೋನಿಷು ॥ ಆಸುರೀಂ ಯೋನಿಮಾಪನ್ನಾಃ ಮೂಢಾಃ ಜನ್ಮನಿ ಜನ್ಮನಿ ಮಾಮಪ್ರಾಪ್ಯೈವ ಕೌನ್ತೇಯ ತತೋ ಯಾನ್ತ್ಯಧಮಾಂಗತಿಂ" (ಗೀ. ೧೬. ೧೯, ೨೦) ಎಂದರೆ ನನಗೆ ಪರತ್ವವನ್ನು ಸಾಧಿಸಿದರೆ ಸಹಿಸದೇ ಇರುವ ಅತಿ ಕ್ರೂರರಾದ ಮನುಷ್ಯಾಧಮರನ್ನು ಜನನ ಮರಣಾದಿ ರೂಪದಲ್ಲಿ ಸುತ್ತುವ ಸಂಸಾರದಲ್ಲಿ, ಅದರಲ್ಲೂ ನನಗೆ ಎಂದಿಗೂ ಅನುಕೂಲರಲ್ಲದೇ ಇರುವ ಯೋನಿಗಳಲ್ಲಿ ಯಾವಾಗಲೂ ತಳ್ಳಿಬಿಡುವೆನು, ಎಂದು

ಹೇಳಿರುವದರಿಂದ, ಇಂಥಾವರಿಗೆ ಎಂದಿಗೂ ಮೋಕ್ಷವಿಲ್ಲವೆಂದೂ ಅವರು ನಿತ್ಯ ಸಂಸಾರಿಗಳೆಂದೂ ಹೇಳುವರು. ಹೀಗೆ ಹೇಳದಿದ್ದರೆ ಲೀಲಾವಿಭೂತಿಗೆ ನಿತ್ಯತ್ವವು ಇಲ್ಲದೆ ಹೋಗುವದೆಂದೂ ಹೇಳುವರು; ಏಕೆಂದರೆ ಎಲ್ಲರಿಗೂ ಒಂದಾನೊಂದು ಕಾಲದಲ್ಲಿ ಮುಕ್ತಿಯಾಗಿಬಿಟ್ಟರೆ. ಲೀಲಾವಿಭೂತಿಯಲ್ಲಿ ಚೇತನರೇ ಇಲ್ಲವಾಗಿ ಹೋಗಬಹುದೆಂಬುದು ಅವರಭಿಪ್ರಾಯವು. ಇದು ಸರಿಯಾದ ಅಭಿಪ್ರಾಯವಾಗುವದಿಲ್ಲವು; ಏಕೆಂದರೆ ಒಂದುವೇಳೆ ಅಂತಹ ನಿತ್ಯಸಂಸಾರಿಗಳು ಮಾತ್ರವೇ ಈ ಲೀಲಾವಿಭೂತಿಯಲ್ಲಿ ನಿಂತುಹೋಗಿ ಎಲ್ಲಾ ಮುಕ್ತಿಹೊಂದಲು ಯೋಗ್ಯರಾದವರು ಮುಕ್ತಿಯನ್ನು ಹೊಂದಿದರೂ, ಆಗಲೂ ಸರ್ವೇಶ್ವರನಿಗೆ ಲೀಲಾವಿಭೂತಿಯಲ್ಲಿ ಏನೂ ಕೆಲಸವಿಲ್ಲದುದರಿಂದ ಈ ಲೀಲಾವಿಭೂತಿಯು ಇದ್ದರೂ ವ್ಯರ್ಥವಾದುದಾಗುತ್ತದೆ. ಆದುದರಿಂದ ಮನುಷ್ಯನು ತಾನು ಮಾಡುವ ಕ್ರೂರ ಕರ್ಮಗಳಿಂದ ಉಪಾಯಾನುಷ್ಠಾನವನ್ನು ಮಾಡದೇ ನಿತ್ಯಸಂಸಾರಿಯಾಗಬಹುದು "ಯದಿವಾ ರಾವಣಸ್ಸ್ವಯಂ" ಎಂದು ಹೇಳಿರುವಹಾಗೆ ಅಂತಹ ಕ್ರೂರಕರ್ಮಿಯೇ ಉಪತ್ಸನ್ನಕೃತವಮಾಡಿದರೆ, ತನ್ಮೂಲಕ ಪ್ರೀತನಾಗುವ ಶ್ರೀ ಹರಿಯು ಆತನಿಗೂ ಮಾರ್ಗವನ್ನು ತೋರಿಸಿ ರಕ್ಷಿಸುವನೆಂಬುದರಲ್ಲಿ ಸಂದೇಹವಿಲ್ಲವು ಹೀಗೆ ಹೇಳಿದರೇನೇ ಸ್ವಾಮಿಯ ನಿರ್ಹೇತುಕ ಕೃಪೆಗೆ ನ್ಯೂನತೆ ಇಲ್ಲವಾಗುತ್ತದೆ ಆತನಿಗೆ ವೈಷಮ್ಯ ನೈರ್ಘೃಣ್ಯರೂಪವಾದ ಅಪವಾದ ಹೊರಿಸಿದ ಹಾಗೂ ಆಗುವದಿಲ್ಲವು.

ಆದುದರಿಂದ ಸ್ವಾಮಿ ದೇಶಿಕರವರು ತಮ್ಮ ಶಾಸ್ತ್ರಸಮ್ಮತವಾದಭಿಪ್ರಾಯವೇನೆಂಬುವದನ್ನು ತಮ್ಮ ನ್ಯಾಯ ಸಿದ್ಧಾಂಜನದಲ್ಲಿ ಸೂಚಿಸಿರುತ್ತಾರೇನೆಂದರೆ, ಈ ಜೀವಾತ್ಮನ ಸ್ವರೂಪವನ್ನಾಲೋಕಿಸಿದರೆ ಆತನು ಸ್ವತಸ್ಸುಖಿಯು, ಉಪಾಧಿವಶದಿಂದ ಸಂಸಾರಪದವಿಯನ್ನು ಹೊಂದುತ್ತಾನೆ. ಆತ್ಮರು ಎರಡು ವಿಧ, ಸಂಸಾರಿ, ಅಸಂಸಾರಿ ಎಂಬದಾಗಿ; ಪುಣ್ಯಪಾಪಗಳ ಸಂಬಂಧವಿರುವವರು ಸಂಸಾರಿಗಳು. ಅವುಗಳ ಸಂಬಂಧವಿಲ್ಲದವರು ಅಸಂಸಾರಿಗಳು (ನಿತ್ಯರೂ ಮುಕ್ತರೂ). ಸಂಸಾರಿಗಳು ಎರಡು ವಿಧವು. ನಿತ್ಯಸಂಸಾರಿಗಳು ಮತ್ತು ಭಾವಿ ಸಂಸಾರ ವಿರಹಿಗಳು. ನಿತ್ಯಸಂಸಾರಿಗಳು ಯಾರೆಂದರೆ, ಈಗ ಸೃಷ್ಟಿ ಮೊದಲುಗೊಂಡು ಈವರೆಗೂ ಮುಕ್ತಿ ಹೊಂದದಿರುವದರಿಂದ ಇದರಂತೆಯೇ ಮುಂದಕ್ಕೂ ಬಹು ಕಾಲ ಹೀಗೆಯೇ ಸಂಸಾರದಶೆಯಲ್ಲಿರುವವರು. ಇಂಥಾವರಿಗೂ ಕೂಡ ಉಪಾಯಾನುಷ್ಠಾನ ಸಂಬಂಧವು ವಿರುದ್ಧವಲ್ಲದುದರಿಂದ ಬಹು ಕಾಲಾನಂತರ ಈಶ್ವರ ಕೃಪೆಯು ಪ್ರಾಪ್ತವಾಗಲು ಅಭ್ಯಂತರವಿಲ್ಲದುದರಿಂದ ಸರ್ವೇಶ್ವರನು ಸರ್ವಲೋಕ ಶರಣ್ಯನೆಂದು ಹೇಳಲ್ಪಡಲು ಏನೊಂದೂ ವಿರೋಧವಿಲ್ಲವು. ಪ್ರಪದನರೂಪ ಉಪಾಯಾನುಷ್ಠಾನಕ್ಕೆ ಸರ್ವಾಧಿಕಾರತ್ವವನ್ನು ಹಿಂದೆಯೇ ಶಾಸ್ತ್ರಮುಖೇನ ಸ್ಥಾಪಿಸಿರು

**ಪ್ರದತ್ವ, ಸರ್ವವ್ಯಾಪ್ತಜ್ಞಾನಾನಂದಸ್ವರೂಪತ್ವ, ಲಕ್ಷ್ಮೀಸಹಾಯತ್ವಾದಿ ಗಳ್ ಪ್ರತಿ ನಿಯತೆಜ್ಞಳ್.**

---

ವದರಿಂದ, ಸರ್ವಲೋಕ ಶರಣ್ಯತ್ವವೂ ಸಹ ಸರಸವಾದಭಿಪ್ರಾಯವು. ಭಾವಿ ಸಂಸಾರ ವಿರಹಿಗಳ್ಯಾರೆಂದರೆ, ಮುಂದೆ ಉಪಾಯಾನುಷ್ಠಾನ ಮಾಡಿ ಮೋಕ್ಷ ಹೊಂದುವ ಚೇತನರು.

(೧೦) **ಸರ್ವಮುಮುಕ್ಷೂಪಾಸ್ಯತ್ವ** - ಸಮಸ್ತ ಮೋಕ್ಷಾರ್ಥಿಗಳಿಂದಲೂ ಉಪಾಸಿಸಲ್ಪಡಲು ಯೋಗ್ಯತೆಯು. ಮೋಕ್ಷ ಕೊಡುವ ಶಕ್ತಿ ಇರುವವನ್ನು ತಾನೇ ಮೋಕ್ಷಾರ್ಥಿಯು ಉಪಾಸಿಸತಕ್ಕದ್ದು. ಈ ಶಕ್ತಿಯು ಚತುರ್ಮುಖ ರುದ್ರಾದಿ ಮೊದಲುಗೊಂಡು ಯಾವ ಜೀವಾತ್ಮರಿಗೂ ಇಲ್ಲದಿರುವ ಧರ್ಮವು. ಆದರೆ ಯೋಗ ರೂಪ ಉಪಾಸನೆಯು ತ್ರೈವರ್ಣಿಕರಿಗೆ ಮಾತ್ರ ಹೇಳಿರುವಾಗ ಸರ್ವ ಮುಮುಕ್ಷೂಪಾಸ್ಯತ್ವ ಹೇಗೆ ಎಂದಾಕ್ಷೇಪಿಸಿದರೆ ಭಕ್ತಿಯೋಗರೂಪ ಉಪಸನಾನುಷ್ಠಾನಾಧಿಕಾರವು ತ್ರೈವರ್ಣಿಕರಿಗೆ ಮಾತ್ರ ಇದ್ದರೂ, ತದಿತರರಿಗೂ ಕೂಡ ಭರನ್ಯಾಸಾನಂತರವೂ ಆತನು, ಫಲರೂಪ ಭಕ್ತಿಯ ಮೂಲಕ ಧ್ಯೇಯವಸ್ತುವಾದುದರಿಂದ ಸರ್ವ ಮುಮುಕ್ಷೂಪಾಸ್ಯತ್ವವು ಸಜ್ಜತವಾದದೆಂಬ ಭಾವವು

(೧೧) **ಸರ್ವಫಲಪ್ರದತ್ವ** - ಯಾವಾಗ ಶ್ರಿಯಃಪತಿಯು ಸರ್ವ ಮುಮುಕ್ಷುಗಳಿಂದಲೂ ಉಪಾಸ್ಯನಾದನೋ, ಆಗ ಆವರ ಇಷ್ಟಾರ್ಥಗಳನ್ನೆಲ್ಲಾ ಸಲ್ಲಿಸಲು ಶಕ್ತಿಯುಳ್ಳವನೆಂಬುದು ಏರ್ಪಟ್ಟಿತು. ಆದುದರಿಂದ ಆತನಿಗೆ ಸರ್ವ ಫಲಗಳನ್ನೂ ಕೊಡುವ ಶಕ್ತಿಯುಂಟೆಂದು ಹೇಳತಕ್ಕದ್ದು. ಚತುರ್ವಿಧ ಪುರುಷಾರ್ಥಗಳಲ್ಲಿ, ಮೋಕ್ಷವಲ್ಲದ ಇತರ ಮೂರಾದ ಧರ್ಮಾರ್ಥಕಾಮಗಳನ್ನು ಬ್ರಹ್ಮರುದ್ರಾದಿಗಳೂ ಕೊಟ್ಟರೂ, ಸರ್ವೇಶ್ವರನ ಅನುಮತಿ ಮೂಲಕ ಕೊಡುತ್ತಾರೆ. ಮೋಕ್ಷವನ್ನು ಇವರುಗಳು ತಮ್ಮನ್ನು ಕುರಿತು ತಪಸ್ಸು ಮಾಡಿದವರಿಗೆ ಕೊಟ್ಟರೆಂಬ ಯಾವದೊಂದು ಇತಿಹಾಸವೂ ಶಾಸ್ತ್ರದಲ್ಲಿ ಇಲ್ಲವಾದದರಿಂದ, ಇವರುಗಳಿಗೆ ಆ ಶಕ್ತಿ ಇಲ್ಲವೆಂಬುದು ವ್ಯಕ್ತವು. ಈ ಮೂರು ಪುರುಷಾರ್ಥಗಳೊಂದಿಗೆ ಮೋಕ್ಷವನ್ನೂ ಸಹ ಕೊಡುವ ಶಕ್ತಿಯು ಲಕ್ಷ್ಮೀಪತಿಗೆ ಮಾತ್ರ ಇರುವದರಿಂದ ಆತನೇ ಸರ್ವರಿಂದಲೂ ಉಪಾಸ್ಯನು, ಆತನೇ ಸರ್ವಫಲಪ್ರದನು

(೧೨) **ಸರ್ವವ್ಯಾಪ್ತಜ್ಞಾನಾನಂದಸ್ವರೂಪತ್ವ** - ಸಮಸ್ತ ಜಗತ್ತಿನಲ್ಲೂ ವ್ಯಾಪಿಸಲ್ಪಡುವ ಜ್ಞಾನಾನಂದ ಸ್ವರೂಪವುಳ್ಳೋಣವು, ಎಂದರೆ ವಿಭು ಸ್ವರೂಪವುಳ್ಳೋಣವು. ಸರ್ವಗತತ್ವವು. **"ಯಚ್ಚ ಕಿಂಚಿಜ್ಜಗತ್ಯಸ್ಮಿನ್ದೃಶ್ಯತೇ ಶ್ರೂ**

## ಮುಕ್ತ ಪ್ರತಿನಿಯತ ಧರ್ಮಾಃ

ಮುಕ್ತನುಕ್ಕು ಅಧೇಯತ್ವ, ವಿಧೇಯತ್ವ, ಶೇಷತ್ವಾಣಾತ್ವಾದಿಗಳ್ ವ್ಯವಸ್ಥಿತಙ್ಗಳ್.

---

ಯತೇಪಿವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಥಿತಃ" ಎಂದು ಹೇಳಿರುವ ಹಾಗೆ ಇರುವ ವಿಭು ಸ್ವರೂಪವು ಯದ್ಯಪಿ ಜೀವಾತ್ಮನೂ ಜ್ಞಾನಾನಂದ ಸ್ವರೂಪನು. ಆದರೆ ಈತನು ಎಲ್ಲವನ್ನೂ ವ್ಯಾಪಿಸಿಲ್ಲವು. ಆದುದರಿಂದ ಸರ್ವವ್ಯಾಪ್ತಜ್ಞಾನಾನಂದತ್ವವು ಜೀವನಲ್ಲಿಲ್ಲವು. ಆದರೆ ಧರ್ಮಭೂತಜ್ಞಾನ ದ್ವಾರಾ ವ್ಯಾಪನೆಯುಂಟು.

(೧೩) **ಲಕ್ಷ್ಮೀ ಸಹಾಯತ್ವ** - ಲಕ್ಷ್ಮಿಯು ಪತ್ನಿಯಾಗಿ, ಆಕೆಯ ಸಹಾಯವನ್ನು ಆತನ ಎಲ್ಲಾ ವ್ಯಾಪಾರಗಳಲ್ಲೂ ಹೊಂದಿರೋಣವು; ಸರ್ಗಸ್ಥಿತಿಲಯಾದಿ ವ್ಯಾಪಾರಗಳಲ್ಲೂ ಅಂತರ್ಯಾಮಿಯಾಗಿ ಸತ್ತಾಪ್ರದಾಯಕನಾಗಿರುವಾಗಲೂ ವಿಭವಾವತಾರಿಯಾಗಿ ಅಧರ್ಮೋನ್ಮೂಲನವನ್ನು ಮಾಡಿ ಧರ್ಮಸಂಸ್ಥಾಪನ ಮಾಡುವಾಗಲೂ, ಆಶ್ರಿತ ಪರಿಪಾಲನವನ್ನು ಮಾಡುವಾಗಲೂ, ದುಷ್ಟ ನಿಗ್ರಹ ಮಾಡುವಾಗಲೂ, ಲಕ್ಷ್ಮಿಯು ಸಹಾಯಕಳಾದುದರಿಂದ ಲಕ್ಷ್ಮೀ ಸಹಾಯವನ್ನು ಹೊಂದಿರುವಿಕೆಯು. ಇದು ಇನ್ಯಾರಿಗೂ ಇಲ್ಲವು.

ಇಲ್ಲಿ **ಆದಿಗಳ್** - ಎಂಬ ಪದದಿಂದ ಭೂನೀಳಾನಾಯಕತ್ವ, ಅನಂತ ಭೋಗಪರ್ಯಂಕತ್ವ, ಗರುಡಧ್ವಜಾದಿಗಳು ಹೇಳಲ್ಪಟ್ಟವು ಈ ಧರ್ಮಗಳೆಲ್ಲಾ ಸರ್ವೇಶ್ವರನಿಗೆ ಮಾತ್ರ **ಪ್ರತಿನಿಯತಙ್ಗಳ್** - ಅಸಾಧಾರಣವಾದ ಧರ್ಮಗಳು. ಈ ಧರ್ಮಗಳು ಭಗವಂತನಲ್ಲದೆ ಇನ್ಯಾರಿಗೂ ಇಲ್ಲವೆಂಬ ಭಾವವು ಪರಮಾತ್ಮನಿಗೆ ಹೇಳಿದ ಈ ಅಸಾಧಾರಣ ಧರ್ಮಗಳು ತನ್ನೊಂದಿಗೆ ಯಾವಾಗಲೂ ಸೇರಿರುವ ಲಕ್ಷ್ಮಿಗೂ ಉಂಟೆಂದು ಭಾವಿಸತಕ್ಕದ್ದು ಆದರೆ **ಸರ್ವನಿಯಂತೃತ್ವವು** ಲಕ್ಷ್ಮಿಗೆ ಹೇಗೆ ಎಂದರೆ ತನ್ನ ವಾಲ್ಲಭ್ಯಾತಿಶಯದಿಂದ ಪರಮಾತ್ಮನನ್ನು ವಶ ಮಾಡಿಕೊಂಡು ನಿಯಮಿಸಬಲ್ಲಳೆಂದು ಭಾವಿಸಬಹುದು, ಅಥವಾ ಪರಮಾತ್ಮನ ಅನುಮತಿಯಿಂದ ಆತನ ವಿನಾ ಎಲ್ಲವನ್ನೂ ನಿಯಮಿಸುವ ಶಕ್ತಿಯುಳ್ಳವಳೆಂದೂ ಊಹಿಸಬಹುದು ಲಕ್ಷ್ಮಿಗೆ ಅನ್ವಯಿಸುವಾಗ ಲಕ್ಷ್ಮೀಸಹಾಯತ್ವಕ್ಕೆ ಬದಲಾಗಿ ಸರ್ವೇಶ್ವರ ಸಹಾಯತ್ವವೆಂದಿಟ್ಟುಕೊಳ್ಳಬಹುದು. ಹೀಗೆ ಸರ್ವೇಶ್ವರನಿಗೆ ಮಾತ್ರವೇ ಅಸಾಧಾರಣವೆಂದು ವ್ಯವಸ್ಥೆ ಹೊಂದಿದ ಧರ್ಮಗಳನ್ನು ಹೇಳಿ, ಜೀವಾತ್ಮನಿಗೆ ಮಾತ್ರವೇ ಅಸಾಧಾರಣವೆಂದು ವ್ಯವಸ್ಥೆ ಹೊಂದಿದ ಧರ್ಮಗಳನ್ನು ಬೋಧಿಸುತ್ತಾರೆ.

## ಮುಕ್ತಸ್ಯ ಪುನರಾವರ್ತಿ ಶಂಕಾ ನಿರಾಸಃ.

ಇಪ್ಪಡಿಯಾಗಿಲ್, (೧) "ನಸಂಪದಾಂ ಸಮಾಹಾರೇ ವಿಪದಾಂ

---

### ಮುಕ್ತನಿಗೆ ಮಾತ್ರ ವ್ಯವಸ್ಥಿತವಾದ ಧರ್ಮಗಳು.

**ಮುಕ್ತನುಕ್ಕು** - ಮುಕ್ತನಿಗೆ (ಜಾತ್ಯೇಕ ವಚನವು.) ಆಧೇಯತ್ವ, ವಿಧೇಯತ್ವ, ಶೇಷತ್ವ, ಅಣುತ್ವ ಮೊದಲಾದವುಗಳು, ವ್ಯವಸ್ಥಿತಙ್ಗಳ್ - ಎಂದರೆ ಸರ್ವೇಶ್ವರನಿಗೆ ಅನ್ವಯಿಸದೆ ಮುಕ್ತನಿಗೆ ಮಾತ್ರ ಏರ್ಪಟ್ಟ ಧರ್ಮಗಳು. ಯಾವಾಗ ಮುಕ್ತನಿಗೇ ಇವುಗಳು ಉಂಟೆಂದು ಹೇಳಲ್ಪಟ್ಟವೋ ಬದ್ಧರಿಗೂ ಉಂಟೆಂಬುವದು ಕೈಮುತಿಕನ್ಯಾಯ ಸಿದ್ಧವು ಇಲ್ಲಿ ಆದಿ ಶಬ್ದದಿಂದ ವಿಧೇಯತ್ವದಿಂದ ಪ್ರಾಪ್ತವಾದ ಪಾರತಂತ್ರ್ಯವೂ, ರಕ್ಷ್ಯತ್ವವೇ ಮೊದಲಾದವೂ ಸಹ ಹೇಳಲ್ಪಟ್ಟವು. ಆಧೇಯತ್ವ, ವಿಧೇಯತ್ವ, ಶೇಷತ್ವ ಶಬ್ದಗಳ ಅರ್ಥಕ್ಕೆ ಪ್ರಧಾನ ಪ್ರತಿತಂತ್ರಾಧಿಕಾರದ ಪ್ರಥಮ ಶ್ಲೋಕವನ್ನು ಪರಾಂಬರಿಸತಕ್ಕದ್ದು.

### ಮುಕ್ತನಿಗೆ ಪುನರಾವೃತ್ತಿಯುಂಟಾದೀತೆಂಬ ಶಙ್ಕೆಯ ನಿರಸನವು.

ಒಂದು ವೇಳೆ ಪುನರಾವೃತ್ತಿಯುಂಟಾದರೆ ಸರ್ವೇಶ್ವರನ ಮೂಲಕವಾಗಿಯಾಗಲಿ ಅಥವಾ ಮುಕ್ತನ ಮೂಲಕವಾಗಿಯಾಗಲಿ ಆಗತಕ್ಕದ್ದಾಗಿದೆ. ಸರ್ವೇಶ್ವರನ ಮೂಲಕವೆಂದರೆ — ಇಲ್ಲವೇ ಆತನ ಸಙ್ಕಲ್ಪಮೂಲಕವಾಗಿ **ಮೋಕ್ಷಯಿಷ್ಯಾಮಿ** ಎಂದು ಹೇಳಿರುವ ಹಾಗೆ, **ಆವರ್ತಯಿಷ್ಯಾಮಿ** ಅಥವಾ **ನಿವರ್ತಯಿಷ್ಯಾಮಿ** ಎಂದು ಸಙ್ಕಲ್ಪಿಸಿ ಈತನಿಗಧೀನನಾದ ಮುಕ್ತನಿಗೆ ಪುನರಾವೃತ್ತಿಯನ್ನುಂಟುಮಾಡಬೇಕು ಅಥವಾ ಆತನ ಪ್ರಪತ್ತಿಗಳಿಂದ ಅತೃಪ್ತನಾಗಿ ಪುನರಾವೃತ್ತಿಯನ್ನುಂಟುಮಾಡಬೇಕು. ಹಾಗೆಯೇ ತನ್ನ ಮೂಲಕವಾಗಿ ಆಗಬಹುದೇ ಎಂದು ವಿಕಲ್ಪಿಸಿದರೆ, ಬೇರೆ ಪುರುಷಾರ್ಥದಲ್ಲಿ ಇಚ್ಛೆಯುಂಟಾಗಿ ಆಗಬಹುದು ಎಂದು ಶಙ್ಕಿಸಬಹುದು. ಅಥವಾ ಆ ಮುಕ್ತನ ಅಜ್ಞಾನದಿಂದ ಹಾಗೆ ಆವೃತ್ತಿಯನ್ನಪೇಕ್ಷಿಸಬಹುದು. ಹೀಗೆ ನಾಲ್ಕು ವಿಧವಾಗಿ ವಿಕಲ್ಪಿಸುವದರಿಂದ ತೋರುವ ಶಙ್ಕೆಗಳಿಗೂ ಕಾರಣವಿಲ್ಲವೆಂದು ಮುಂದೆ ಉಪಪಾದಿಸುತ್ತಾರೆ. (೧) ಭಗವತ್ಸಂಕಲ್ಪದಿಂದಾಗಲಿ, (೨) ಭಗವದಪ್ರೀತಿಯಿಂದಾಗಲಿ, (೩) ತನ್ನ ಇಚ್ಛಾನುಸಾರವಾಗಲಿ, (೪) ತನ್ನ ಅಜ್ಞಾನ ಮೂಲಕವಾಗಲಿ ಪುನರಾವರ್ತಿಯುಂಟಾಗುವ ಸಂಭವವಿಲ್ಲವೆಂದುಪದೇಶಿಸುತ್ತಾರೆ :—

---

೧. ವಿ ಪು.

ವಿನಿವರ್ತನೇ। ಸಮರ್ಥೋ ವಿದ್ಯತೇಕಶ್ಚಿತ್ತ್ರಿಂವಿನಾ ಪುರುಷೋತ್ತಮಮ್"(೧) ಎಙ್ಗಿರನಿಲ್ಲೈಯಾಯ್, ಸ್ವತಂತ್ರರಲ್ಲಾದ ಮುಕ್ತರುಕ್ಕು ಏದೇನು ಮೊರು ಹೇತುವಾಲೆ ಆವೃತ್ತಿಶಙ್ಕೈವಾರಾದೋ ವೆನ್ನಿಲ್? ಅದು ವಾರಾದು. (೧) "ಸಾಯುಜ್ಯಮ್ ಪ್ರತಿಪನ್ನಾಯೇ ತೀವ್ರಭಕ್ತಾಸ್ತಪಸ್ವಿನಃ। ಕಿಙ್ಕರಾ

---

ಇಪ್ಪಡಿಯಾಗಿಲ್-ಹೀಗೆ ಮುಕ್ತನಿಗೆ ಆಧೇಯತ್ವ, ವಿಧೇಯತ್ವ, ಶೇಷತ್ವ ಪಾರತಂತ್ರ್ಯಾದಿಗಳು ವ್ಯವಸ್ಥಿತ ಧರ್ಮಗಳಾದ್ದಪಕ್ಷದಲ್ಲಿ, "ಸಂಪದಾಂ - ಸರ್ವ ಸಂಪತ್ತುಗಳ, ಶ್ರೇಯಸ್ಸುಗಳ, ಸಮಾಹಾರೇ - ಸೇರಿಸುವದರಲ್ಲೂ, ವಿಪದಾಂ - ವಿಪತ್ತುಗಳ, ವಿನಿವರ್ತನೇ - ಹೋಗಲಾಡಿಸುವದರಲ್ಲೂ, ಪುರುಷೋತ್ತಮಂ ವಿನಾ - ಪುರುಷರಲ್ಲಿ ಸರ್ವಶ್ರೇಷ್ಠನಾದ ಶ್ರಿಯಃಪತಿಯಲ್ಲದೆ, ಕಶ್ಚಿತ್ ಸಮರ್ಥಃ- ಯಾವನೊಬ್ಬ ಸಮರ್ಥನೂ, ನ ವಿದ್ಯತೇ - ಇರುವದಿಲ್ಲವು" ಎಙ್ಗಿರನಿಲ್ಲೈ ಯಾಯ್ - ಎನ್ನುವ ಸಿದ್ಧಾಂತಾನುಸಾರವಾಗಿ, ಸ್ವತಂತ್ರರಲ್ಲಾದ - ಸ್ವತಂತ್ರ ರಲ್ಲದೆ ಭಗವಂತನಿಗೆ ಸಂಪೂರ್ಣ ಪರತಂತ್ರರಾದ, ಮುಕ್ತರುಕ್ಕು - ಮುಕ್ತರಿಗೆ ಏದೇನುಮೊರು ಹೇತುವಾಲೇ - ಯಾವುದೋ ಒಂದು ಕಾರಣದಿಂದ, ಆವೃತ್ತಿ ಶಙ್ಕೈ ವಾರಾದೋ ವೆನ್ನಿಲ್ - ಆವೃತ್ತಿ ಉಂಟೆಂಬ ಶಙ್ಕೆಯು ಉಂಟಾಗ ಲಾರದೋ ಎಂದರೆ, ಅದುವಾರಾದು - ಅಂತಹ ಶಂಕೆಯುಂಟಾಗಲು ಕಾರಣ ವಿಲ್ಲವು. ಈ ಚೇತನನು ಮುಕ್ತನಾದ ನಂತರ ಯಾವುದಾದರೂ ಒಂದು ಕಾರಣ ದಿಂದ ಪುನಃ ಈ ಲೀಲಾವಿಭೂತಿಗೇನೆ ಬರುವ ಸಂದರ್ಭದ ಶಂಕಾ ಉಂಟೇ! ಎಂದರೆ ಅಂತಹ ಶಂಕೆಗೆ ಹೇಗೆ ಯೋಚಿಸಿದರೂ ಕಾರಣವೇ ಇಲ್ಲವೆಂದುಪದೇಶಿ ಸುತ್ತಾರೆ. ಈ ಶಂಕಾ ನಾಲ್ಕು ವಿಧವಾಗಿರಬಹುದೆಂದು ಈ ವಾಕ್ಯದ ಅವತಾರಿಕೆ ಯಲ್ಲಿ ತೋರಿಸಿರುತ್ತದೆ. ಶ್ರಿಯಃಪತಿಯು "ಮೋಕ್ಷಯಿಷ್ಯಾಮಿ ಮಾಶುಚಃ" ಎಂದು ಲೀಲಾಸಾರಥಿಯಾಗಿ ಹೇಳಿದ ಅಮೋಘವಾದ ಅನ್ಯತರಸಪ್ರಾಯವಾದ ವಾಕ್ಕಿಗೆ ವಿರೋಧವಾಗಿ ತಾನೇ ಈಗ "ನಿವರ್ತಯಿಷ್ಯಾಮಿ" ಎಂದು ಹೇಳಿ ಆವ ರ್ತಿಸಿ ತನ್ನ ಸತ್ಯಸಂಕಲ್ಪತೆಯನ್ನು ಹಾಳುಮಾಡಿಕೊಳ್ಳುವನೇ? ಹಾಗೆ ಎಂದಿಗೂ ಇಲ್ಲವೆಂಬುದಕ್ಕೆ ಪ್ರಮಾಣವನ್ನು ತೋರಿಸುತ್ತಾರೆ:—"ಸಾಯುಜ್ಯಂ ಪ್ರತಿ ಪನ್ನಾಃ - ಪರಮಪದದಲ್ಲಿ ಪರಮಾತ್ಮ ಸಾಯುಜ್ಯವನ್ನು ಹೊಂದುವವರು, ತೀವ್ರಭಕ್ತಾಃ-ಪರಮಭಕ್ತಿಯುಳ್ಳವರಾಗಿ, ಭಕ್ತಿಯೋಗನಿಷ್ಠರಾಗಿ, ತಪಸ್ವಿನಃ- "ತಸ್ಮಾನ್ನ್ಯಾಸಮೇಷಾಂ ತಪಸಾಮತಿರಿಕ್ತಮಾಹುಃ" ಎಂದರೆ "ಈ ಭರನ್ಯಾ

---

(೧) ಪರಮ ಸಂಹಿತೆ.

ಮಮತೇ ನಿತ್ಯಂ ಭವಂತಿ ನಿರುಪದ್ರವಾಃ” ಎನ್ರು ತಾನೇ ಅರುಳಿಚ್ಚೆಯ್ ದಾನಿರೇ. ಮುಮುಕ್ಷುದಶೈಯಿಲ್ ಕೇವಲಾಚಿತ್ತೈಯುಮ್, ಕೇವಲ ಚಿತ್ತೈಯುಮ್, ಅನುಭವಿಕ್ಕೈಯಾಗಿರ ಐಶ್ವರ್ಯ ಕೈವಲ್ಯಙ್ಗಳಿಲ್ ವೈರಾಗ್ಯಮ್ ಪಿರನ್ದವಿದು ಮುಕ್ತನುಕ್ಕು ಬ್ರಹ್ಮಾತ್ಮಕಮಾಗ ಸರ್ವತ್ತೈಯುಮ್ ಕಾಣ್ಗೈಯಾಲೇ ಕೇವಲಾನುಭವ ಪ್ರಸಙ್ಗಮಿಲ್ಲಾಮೈಯಾಲುಮ್ ಅನ್ಯ ಪುರುಷಾರ್ಥಾಂತರಙ್ಗಳಿನುಡೈಯ ದೋಷಮೆಲ್ಲಾಮ್ ನಿತ್ಯಪ್ರತ್ಯಕ್ಷಿತಮಾ

---

ಸವು ಇತರ ತಪಸ್ಸುಗಳಿಗಿಂತಲೂ ಮೇಲಾದುದು ಎಂದು ಹೇಳುವರು’ ಎಂದು ಶ್ರುತಿಯು ಹೇಳಿರುವ ಹಾಗೆ ನ್ಯಾಸರೂಪತಪೋನಿಷ್ಠರು, **ಯೇ** - ಯಾರೋ, **ತೇ** - ಅವರೂ, **ನಿತ್ಯಂ** - ಯಾವಾಗಲೂ, **ಮಮ ಕಿಙ್ಕರಾಃ** - ನನ್ನ ದಾಸಭೂತರಾಗಿ, **ನಿರುಪದ್ರವಾಃ** - ಏನೊಂದೂ ಕ್ಲೇಶತಾಪಗಳಿಲ್ಲದವರಾಗಿ, **ಭವಂತಿ** - ಆಗುವರು,” **ಎನ್ರು ತಾನೇ** - ಎಂದು ತಾನೇ, **ಅರುಳಿಚ್ಚೆಯ್ ದಾನಿರೇ** - ಹೇಳಿರುವನಷ್ಟೇ. ಇಲ್ಲಿ **ನಿತ್ಯಂ ಮಮ ಕಿಙ್ಕರಾಃ** ಎಂದು ಹೇಳಿರುವದರಿಂದ, ಸದಾ ಮುಕ್ತದೆಶೆಯಲ್ಲೇ ಇರುವವರೆಂಬುದು ವ್ಯಕ್ತವು. ಇಲ್ಲಿ **ತೀವ್ರಭಕ್ತಾಃ** ಎಂಬುದರಿಂದ ಭಕ್ತ್ಯುಪಾಯನಿಷ್ಠರು ಹೇಳಲ್ಪಟ್ಟರು, **ತಪಸ್ವಿನಃ** - ಎಂಬುದರಿಂದ ಭರನ್ಯಾಸನಿಷ್ಠರು. ಹೀಗೆ ಎರಡು ವಿಧವಾದ ಉಪಾಯಾನುಷ್ಠಾನದಿಂದಲೂ ಮುಕ್ತಿಯನ್ನು ಹೊಂದಿದವರಿಗೆ ಪುನರಾವೃತ್ತಿ ಭಯವಿಲ್ಲವೆಂಬುದು ಮುಖ್ಯತಾತ್ಪರ್ಯವು.

ಮುಂದೆ ತನ್ನ ಇಚ್ಛೆಯಿಂದೇನಾದರೂ ಆವೃತ್ತಿಶಂಕಾ ಉಂಟೋ ಎಂದರೆ ಅದಕ್ಕೆ ಅವಕಾಶವೇ ಇಲ್ಲವೆಂದು ಹೇಳುತ್ತಾರೆ:—**ಮುಮುಕ್ಷು ದಶೈಯಿಲ್** - ಮೋಕ್ಷಾರ್ಥಿಯಾಗಿರುವ ಅವಸ್ಥೆಯಲ್ಲಿ, **ಕೇವಲಾಚಿತ್ತೈಯುಮ್** - ಅಬ್ರಹ್ಮಾತ್ಮಕವಾಗಿ ಬರೀ ಅಚಿತ್ತನ್ನೂ, **ಕೇವಲ ಚಿತ್ತೈಯುಮ್** - ಅಬ್ರಹ್ಮಾತ್ಮಕವಾಗಿ ಚಿತ್ತನ್ನೂ, **ಅನುಭವಿಕ್ಕೈಯಾಗಿರ** - ಅನುಭವಿಸೋಣವಾಗಿರುವ, ಐಶ್ವರ್ಯ ಕೈವಲ್ಯಗಳಲ್ಲಿ, **ವೈರಾಗ್ಯಮ್** - ವಿರಕ್ತಿಭಾವವು, ಆಶೆಯಿಲ್ಲದಿರೋಣವು, **ಪಿರನ್ದವಿದು** - ಹುಟ್ಟಿದಂಥಾ ಇದು, **ಮುಕ್ತನುಕ್ಕು** - ಮುಕ್ತನಿಗೆ, **ಬ್ರಹ್ಮಾತ್ಮಕಮಾಗ** - ಪರಬ್ರಹ್ಮನನ್ನೇ ಆತ್ಮಾವಾಗಿ ಉಳ್ಳ ಭಾವದಿಂದ, **ಸರ್ವತ್ತೈಯುಮ್ ಕಾಣ್ಗೈಯಾಲೇ** - ಸಮಸ್ತವನ್ನೂ ಕಾಣುವದರಿಂದ, **ಕೇವಲಾನುಭವ ಪ್ರಸಙ್ಗಮಿಲ್ಲಾಮೈಯಾಲುಮ್** - ಬರೀ ಅನುಭವ ಉಂಟಾಯಿತೆಂಬುದು ಇಲ್ಲದುದರಿಂದಲೂ, ಮತ್ತು **ಅನ್ಯ ಪುರುಷಾರ್ಥಾಂತರಙ್ಗಳಿನುಡೈಯ** - ಆ ಮೋಕ್ಷೇತರ ಪುರುಷಾರ್ಥಗಳಾದ ಐಶ್ವರ್ಯ ಕೈವಲ್ಯಗಳ, **ದೋಷಮೆಲ್ಲಾಮ್** - ಎಲ್ಲಾ

**ಗ್ನ್ಯೆಯಾಲುವ್ ಪ್ರತಿಷ್ಠಿತವನಾಯಿತ್ತು. ಆಗ್ಯೆಯಾಲ್ ತನ್ನಿಚ್ಛೈಯುಡಿ ಯಾಗ ಆವೃತ್ತಿ ಶಙ್ಕೈ ಯಿಲ್ಲೈ.**

---

**ದೋಷವೂ, ನಿತ್ಯ ಪ್ರತ್ಯಕ್ಷಿತ ವಾಗ್ಯೆಯಾಲುವ್** - ಮುಕ್ತನು ಸರ್ವಜ್ಞತೆಯನ್ನು ಹೊಂದುವದರಿಂದ, ಸದಾ ಪ್ರತ್ಯಕ್ಷವಾಗಿಯೇ **ತೋರುವದರಿಂದಲೂ, ಪ್ರತಿಷ್ಠಿತವನಾಯಿತ್ತು** - ಸಿದ್ಧಾನ್ತಿಸಲ್ಪಟ್ಟಿತು. ಇದಕ್ಕೆ ಕರ್ತೃಪದವು **"ಆವೃತ್ತಿ ಶಙ್ಕಾ ವಾರಾದು"** ಎಂಬುವದು. ಇದು ಹಿಂದಿನ ವಾಕ್ಯದಲ್ಲಿರುತ್ತದೆ. ಮೋಕ್ಷಾರ್ಥಿಗೆ ಕೇವಲ ಅಚಿದನುಭವರೂಪವಾದ ಐಶ್ವರ್ಯದಲ್ಲೂ, ಕೇವಲ ಚಿದನುಭವರೂಪವಾದ ಕೈವಲ್ಯದಲ್ಲೂ ಮಮತೆ ಇರುವದಿಲ್ಲವು ಏಕೆಂದರೆ ಆತನಿಗೆ ಇವುಗಳಲ್ಲಿ ವೈರಾಗ್ಯ ಉಂಟಾಗಿರುತ್ತದೆ. ಈ ಪುರುಷಾರ್ಥಗಳು ಅಲ್ಪಾಸ್ಥಿರವಾದುವುಗಳಾದುದರಿಂದ ಆತನಿಗೆ ಈ ಐಶ್ವರ್ಯ ಕೈವಲ್ಯಗಳಲ್ಲಿ ಮಮತೆ ಇರುವದಿಲ್ಲವು. ಮುಮುಕ್ಷುವಿಗೇನೇ ಹೀಗಿರುವಾಗ ಇನ್ನು ಮುಕ್ತನಿಗೆ ಹೇಳತಕ್ಕದ್ದೇನಿರುತ್ತದೆ. ಮುಮುಕ್ಷುವಿಗೆ ಬ್ರಹ್ಮಾತ್ಮಕವೆಂದು ತೋರದೇ ಇದ್ದುದೂ ಕೂಡ ಮುಕ್ತನಿಗೆ ಸ್ವಸ್ವರೂಪಾವಿರ್ಭಾವದೊಡನೆ ಸರ್ವಜ್ಞತೆಯು ಪ್ರಾಪ್ತವಾಗಿ ಸಮಸ್ತವೂ ಬ್ರಹ್ಮಾತ್ಮಕವಾಗಿಯೇ ತೋರುವದರಿಂದ ಮೋಕ್ಷೇತರ ಪುರುಷಾರ್ಥಗಳೆಲ್ಲ ಅಸಾರವಾದುವು, ದೋಷಯುಕ್ತವಾದುವೆಂಬುದನ್ನು ಸದಾ ಪ್ರತ್ಯಕ್ಷಿಸುತ್ತಿರುವನು. ಇಂಥಾವನು ನಿರತಿಶಯ ಪರಿಪೂರ್ಣಬ್ರಹ್ಮಾನುಭವದ ಆನಂದವನ್ನು ತ್ಯಜಿಸಿ, ಅಲ್ಪಾಸ್ಥಿರ ಫಲಗಳಿಗಾಗಿ ಪರಮಪದವನ್ನು ಬಿಟ್ಟು ಬರುವನೇ ? ಆದುದರಿಂದ ಆವೃತ್ತಿ ಶಙ್ಕೆಗೆ ಅವಕಾಶವೇ ಇಲ್ಲವೆಂದು ಹೇಳಿದುದು ಸ್ಥಾಪಿತವಾಯಿತೆಂದು ಹೇಳಲ್ಪಟ್ಟಿತು. ಹಾಗೆಯೇ ಶ್ರೀ ಭಾಷ್ಯಕಾರರವರು ಕೊನೆಯ ಸೂತ್ರದ ಭಾಷ್ಯದಲ್ಲಿ ಹೇಳಿರುವದೇನೆಂದರೆ :—ಮುಕ್ತನಿಗೆ ಆವರ್ತಿ ಶಙ್ಕೆಗೆ ಕಾರಣವೇ ಇಲ್ಲವೆಂದು ಉಪಪಾದಿಸಿ, ಆವರ್ತಿ ಶಙ್ಕಾ (೧) ಕರ್ಮಮೂಲಕವಾಗಿಯಾಗಲಿ (೨) ಮುಕ್ತನ ಸ್ವೇಚ್ಛಾಮೂಲಕವಾಗಲಿ (೩) ಭಗವಂತನ ಸಙ್ಕಲ್ಪ ಮೂಲಕವಾಗಲಿ ಪ್ರಾಪ್ತವಾಗಬಹುದೆಂದು ವಿಕಲ್ಪಿಸಿ, 'ಮೂರರ ಮೂಲಕವೂ ಶಙ್ಕಾವಿಗೆ ಕಾರಣವೇ ಇಲ್ಲವೆಂದುಪಪಾದಿಸಿರುತ್ತಾರೆ ಕರ್ಮದ ವಿಷಯದಲ್ಲಿ ಹೇಳಿರುವದೇನೆಂದರೆ:- **"ಉಪಾಸೀನಾನನಾದಿ ಕಾಲ ಪ್ರವೃತ್ತಾನನ್ತದುಸ್ತರ ಕರ್ಮಸಂಚಯರೂಪಾವಿದ್ಯಾಂ ವಿನಿವರ್ತ್ಯ ಸ್ವಯಾಥಾತ್ಮ್ಯಾನು ಭವರೂಪಾನವಧಿಕಾತಿಶಯಾನನ್ದಂ ಪ್ರಾಪಯ್ಯಪುನಃ ನಾವರ್ತಯತೀತ್ಯಪಿ ಶಬ್ದಾದೇವಾವಗಮ್ಯತೇ"** (ಶಾ. ಸೂ. ೪. ೪. ೨೨) ಅನಾದಿಕಾಲದಿಂದ ಅನುಸರಿಸಿ ಬಂದ ಅನಂತಗಳಾಗಿ

ದಃಟಿಲಸಾಧ್ಯವಾದ ಕರ್ಮಸಮೂಹರೂಪವಾದ ಅವಿದ್ಯೆಯನ್ನು ಹೋಗಲಾಡಿಸಿ ತನ್ನ ನಿಜವಾದ ಅನುಭವರೂಪವಾದ ನಿರವಧಿಕವಾದ ಅತಿಶಯವುಳ್ಳ ಆನಂದವನ್ನುಂಟುಮಾಡಿ ಪುನಃ ಸಂಸಾರರೂಪ ಆವೃತ್ತಿಯನ್ನು ಹೊಂದಿಸುವದಿಲ್ಲವೆಂಬುದು ಶ್ರುತಿವಾಕ್ಯದಿಂದಲೇ ತೋರಿಬರುತ್ತದೆ ಆ ಶ್ರುತಿ ವಾಕ್ಯವು ಯಾವುದೆಂದರೆ:- **"ಸಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ ನ ಚ ಪುನರಾವರ್ತತೇ"** (ಛಾಂ. ೮-೧೫-೧) ಬ್ರಹ್ಮಪ್ರಾಪ್ತಿಗಾಗಿ ಉಪಾಸನವು ಮರಣವಾಗುವವರೆಗೂ ಮಾಡಬೇಕೆಂಬ ವಿಧಿ ಇರುವವರಿಂದ ಹೀಗೆ ಇರುವವನಾಗಿ ಎಂದರೆ ಆ ಮರಣಾಂತ ಉಪಾಸಿಸುವನಾಗಿ, ಬ್ರಹ್ಮವಿತ್ತಾದವನು ದಿವ್ಯ ವೈಕುಂಠ ಲೋಕವನ್ನು ಹೊಂದುತ್ತಾನೆ, ಆತನಿಗೆ ಪುನರಾವೃತ್ತಿ ಇಲ್ಲವೆಂದು ಹೇಳಿರುತ್ತದೆ ಹಾಗೆಯೇ ಗೀತೆಯಲ್ಲೂ **"ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಂ। ನಾಪ್ನುವಂತಿ ಮಹಾತ್ಮಾನಸ್ಸಂಸಿದ್ಧಿಂ ಪರಮಾಂ ಗತಾಃ"** ಹೀಗೆ ಬ್ರಹ್ಮವಿತ್ತಾದವರು ನನ್ನನ್ನು ಹೊಂದಿ ಪರಮನಿಶ್ರೇಯಸವನ್ನು ಪಡೆದ ಬಳಿಕ ದುಃಖಕ್ಕೆ ತೌರುಮನೆಯಾಗಿಯೂ ಅಶಾಶ್ವತವಾಗಿಯೂ ಇರುವ ಈ ಪ್ರಕೃತಿ ಮಂಡಲವನ್ನು ಕುರಿತು ಬರುವದಿಲ್ಲವು ಏಕೆಂದರೆ ಅವರು ಮಹಾತ್ಮಾನಃ, ಮಹತ್ತಾದ ಉತ್ಕೃಷ್ಟವಾದ ಮನಸ್ಸುಳ್ಳವರು ಎಂದರೆ ನನ್ನ ಯಥಾವತ್ತಾದ ಸ್ವರೂಪಜ್ಞಾನವುಳ್ಳವರಾಗಿ ನನಗೆ ಅತಿ ಪ್ರಿಯರಾಗಿ ನಾನಿಲ್ಲದೆ ಶರೀರಧಾರಣೆಯನ್ನು ಹೊಂದದವರಾಗಿ ನನ್ನಲ್ಲೇ ಸಕ್ತವಾದ ಮನಸ್ಸುಳ್ಳವರು. (ಗೀ. ೮. ೧೫. )

(೨) ಮುಕ್ತನ ಸ್ವೇಚ್ಛಾಮೂಲಕವಾಗಿಯೂ ಆವರ್ತಿ ಶಜ್ಕಾವಿಲ್ಲವೆಂದು ಹೇಳುತ್ತಾರೆ:—**"ನಚೋಚ್ಛಿನ್ನ ಕರ್ಮಬಂಧಸ್ಯಾ ಸಙ್ಕುಚಿತಜ್ಞಾನಸ್ಯ ಪರಬ್ರಹ್ಮಾನುಭವೈಕ ಸ್ವಭಾವಸ್ಯ ತದೇಕ ಪ್ರಿಯಸ್ಯಾ ನವಧಿಕಾತಿಶಯಾನನ್ದಂ ಬ್ರಹ್ಮಾನುಭವತಃ ಅನ್ಯಾಪೇಕ್ಷಾ; ತದರ್ಥಾರಮ್ಭಾದ್ಯ ಸಮ್ಭವಾತ್ಪುನರಾವೃತ್ತಿ ಶಙ್ಕಾ"** ಕರ್ಮಬಂಧವು ನಿಶ್ಶೇಷವಾಗಿ ತೊಲಗಿ, ಇವರ ಸಙ್ಕೋಚವಿಲ್ಲದೆ ಸ್ವಸ್ವರೂಪಾವಿರ್ಭಾವ, ಗುಣಾಷ್ಟಕಗಳ ಪ್ರಾಪ್ತಿ ಉಂಟಾಗಿ, ಪರಬ್ರಹ್ಮಾನುಭವನನ್ನೇ ಮುಖ್ಯ ಸ್ವಭಾವವಾಗಿ ವುಳ್ಳ, ಪರಮಾತ್ಮನಿಗೆ ಪರಮಪ್ರಿಯಸಖನಾಗಿರುವ ಮುಕ್ತನಿಗೆ, ನಿರವಧಿಕವಾಗಿ ನಿರತಿಶಯವಾದ ಆನನ್ದರೂಪನಾದ ಪರಬ್ರಹ್ಮನನ್ನು ಅನುಭವಿಸುವದಕ್ಕಿಂತಲೂ ಬೇರೇ ವಿಧವಾದಪೇಕ್ಷೆಯು ಎಂದಿಗೂ ಹುಟ್ಟಲಾರದು. ಆದುದರಿಂದ ಪರಮಪದವನ್ನು ಬಿಟ್ಟುಹೋಗುವ ಪ್ರಯತ್ನವು ಅಸಂಭವವಾದುದರಿಂದ, ಈ ವಿಧವಾದ ಪುನರಾವರ್ತಿ ಶಙ್ಕಾವಿಗೂ ಕಾರಣವಿಲ್ಲವು.

(೩) ಪರಮಪುರುಷನ ಸಙ್ಕಲ್ಪ ಮೂಲಕವಾಗಿಯೂ ಆವೃತ್ತಿ ಶಙ್ಕಾವಿಲ್ಲ

**ಚಿದಚಿದೀಶ್ವರ ತತ್ತ್ವತ್ರಯ ವಿಷಯಮಾಗವುಮ್, ಹೇಯೋಪಾದೇಯ ವಿಷಯಮಾಗವುಮ್, ಮುನ್ಬು ಪಿರನ್ಬು ಜ್ಞಾನಮಿಲ್ಲಾದು**

ವೆಂದು ಶ್ರೀ ಭಾಷ್ಯಕಾರರು ತಮ್ಮ ಭಾಷ್ಯದ ಪರಿಸಮಾಪ್ತಿಯಲ್ಲಿ ಉಪದೇಶಿಸಿರುತ್ತಾರೆ. ಹೇಗೆಂದರೆ—"**ನ ಚ ಪರಮಪುರುಷಸ್ಸತ್ಯ ಸಙ್ಕಲ್ಪೋಽತ್ಯರ್ಥ ಪ್ರಿಯಂ ಜ್ಞಾನಿನಂ ಲಬ್ಧ್ವಾ ಕದಾಚಿದಾವರ್ತಯಿಷ್ಯತಿ**" ಆತನು ಸಾಮಾನ್ಯ ಪುರುಷರ ಹಾಗೆ ತನ್ನ ಮನಬಂದಹಾಗೆ ನಡಿಸುವನಲ್ಲವು, ಪರಮಪುರುಷನು **ಸರ್ವೋತ್ಕೃಷ್ಟನು**, ಏನೋ ತನ್ನ ಸಙ್ಕಲ್ಪವನ್ನು ಬದಲಾಯಿಸಲಾರನೋ ಎಂದರೆ ಸತ್ಯಸಙ್ಕಲ್ಪನು, "**ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ**" ಶರಣಾಗತನನ್ನು ಎಂದಿಗೂ ಬಿಡುವನಿಲ್ಲವೆಂದೂ, "**ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ**" ಶರಣಾಗತನಿಗೆ ಅಭಯಪ್ರದಾನ ಮಾಡುವೆನೆಂದೂ, ಸ್ಥಿರಸಙ್ಕಲ್ಪಮಾಡಿದವನೆಂದು ಹೇಳಲು **ಸತ್ಯಸಙ್ಕಲ್ಪಃ** ಎಂದು ಪ್ರಯೋಗಿಸಿರುತ್ತಾರೆ. ತುಂಬಾ ಪ್ರಿಯತಮನನ್ನು ಬಹುಕಾಲಕ್ಕೆ ದಿವ್ಯ ವೈಕುಂಠಕ್ಕೆ ಬರಮಾಡಿಕೊಂಡವನಾಗಿ "**ಸಮಹಾತ್ಮಾಸು ದುರ್ಲಭಃ**" ಅಂತಹ ಮಹಾತ್ಮರು ತನಗೆ ವೈಕುಂಠ ವಾಸಿಗಳಾಗಿ ಸಿಕ್ಕುವದು ಅತಿ ದುರ್ಲಭವೆಂದು ಹೇಳಿ, ಅಂತಹ ಮಹಾತ್ಮನನ್ನು ಪುನಃ ಅಲ್ಲಿಂದ ದಬ್ಬಿಬಿಡುವನೇ ? ಹೀಗೆ ಎಂದಿಗೂ ಇಲ್ಲವು ಮೂರು ವಿಧವಾದ ಶಙ್ಕೆಗಳೂ ಅಸಂಭವವೆಂದು ತೋರಿಸಿರುತ್ತಾರೆ.

ಇದರಂತೆಯೇ ಶ್ರೀ ದೇಶಿಕರವರೂ ಈ ವಿಧ ಶಙ್ಕೆಗಳಿಗೆ ಕಾರಣವಿಲ್ಲವೆಂದುಪದೇಶಿಸುವರಾಗಿ ಮುಕ್ತನ ಸ್ವೇಚ್ಛಾಮೂಲಕವಾಗಿ ಶಙ್ಕಾ ಅಸಂಭವವೆಂದು ಹೇಳಿದರು. ಆದರೆ ತಾನೇ ಅಪೇಕ್ಷಿಸಿ ಆವರ್ತಿಯನ್ನುಂಟುಮಾಡಿಕೊಳ್ಳದಿದ್ದರೂ ಅಜ್ಞಾನಮೂಲಕವಾಗಲಿ ಆವರ್ತಿಯನ್ನು ಹೊಂದುವನೋ ಎಂದರೆ ಅಂತಹ ಅಜ್ಞಾನದ ಶಙ್ಕೆಗೂ ಅವಕಾಶವಿಲ್ಲವೆಂದು ತಿಳಿಸುತ್ತಾರೆ. **ಚಿದಚಿದೀಶ್ವರ ತತ್ತ್ವತ್ರಯ ವಿಷಯಮಾಗವುಮ್** - ಚಿತ್ತು, ಅಚಿತ್ತು ಈಶ್ವರರಾದ ಮೂರು ತತ್ತ್ವಗಳ ಯಥಾರ್ಥವಾದ ವಿಷಯದಲ್ಲೂ, **ಹೇಯೋಪಾದೇಯ ವಿಷಯಮಾಗವುಮ್** - ಅಲ್ಪಾಸ್ಥಿರ ಫಲಗಳುಳ್ಳವುಗಳಲ್ಲಿ ಅಭಿರುಚಿಯು ಹೇಯವಾದುದರಿಂದ ತ್ಯಾಜ್ಯವೆಂಬ ಮತ್ತು ಮಹತ್ತಾದ ಶಾಶ್ವತ ಫಲಗಳುಳ್ಳವುಗಳಲ್ಲಿ ಅಭಿರುಚಿಯು ಉಪಾದೇಯವಾದುದರಿಂದ ಗ್ರಾಹ್ಯವೆಂಬ ವಿಷಯದಲ್ಲೂ, **ಮುನ್ಬು** - ಈ ಲೀಲಾ ವಿಭೂತಿಯಲ್ಲಿ ಮುಮುಕ್ಷುವಾದ ಅವಸ್ಥೆಯಲ್ಲಿ, **ಪಿರನ್ಬು** -

**ವಿಚ್ಛೇದ ಸಙ್ಕೋಚಙ್ಗಳಿಲ್ಲಾದ ಪಡಿ ವಿಕಸಿತಮಾಯಿತ್ತು. ಆಗೈಯಾಲ್ ತನ್ ಅಜ್ಞಾನಮಡಿಯಾಗ ಆವೃತ್ತಿ ಶಙ್ಕಿಕ್ಕವೊಣ್ಣಾದು.**

**ಭಗವದ್ವಿಷಯ ವೈಲಕ್ಷಣ್ಯಜ್ಞಾನತ್ತಾಲೆ ಮುನ್ಬು ಪಿರನ್ದ ಭಕ್ತಿ ಶಬ್ದವಾಚ್ಯಮಾನ ಪ್ರೀತಿರೂಪಾಪನ್ನ ಜ್ಞಾನಮಿಪ್ಪೋದು ಶಾಸ್ತ್ರಙ್ಗಳುಕ್ಕು ನಿಲಮಿಲ್ಲಾದ ಭಗವದ್ವೈಲಕ್ಷಣ್ಯಮೆಲ್ಲಾಮ್ ಪ್ರತ್ಯಕ್ಷಮಾನಪಡಿಯಾಲೆ**

---

ಶಾಸ್ತ್ರಮೂಲಕವಾಗಿಯೂ, ಗುರೂಪದೇಶ ಮೂಲಕವಾಗಿಯೂ, ವಿವೇಕಮೂಲಕವಾಗಿಯೂ ಹುಟ್ಟಿದ, ಜ್ಞಾನವು, **ಇಪ್ಪೋದು**- ಈ ಮುಕ್ತಾವಸ್ಥೆಯಲ್ಲಿ, **ವಿಚ್ಛೇದ ಸಙ್ಕೋಚಗಳಿಲ್ಲಾದ ಪಡಿ** - ನಾಶ ಮತ್ತು ಸಙ್ಕೋಚಗಳಿಲ್ಲದ ಹಾಗೆ, **ವಿಕಸಿತಮಾಯಿತ್ತು** – ವಿಕಾಸವನ್ನು ಹೊಂದಿತು ಸ್ವಸ್ವರೂಪಾವಿರ್ಭಾವ ಉಂಟಾಗುವದರಿಂದ ಶಾಸ್ತ್ರಾದಿಗಳ ಮೂಲಕ ಉಂಟಾದ ಜ್ಞಾನಕ್ಕೆ ನಾಶವಾಗಲಿ, ನ್ಯೂನತೆಯಾಗಲಿ, ಇಲ್ಲದೆ ಸದಾ ಪ್ರಕಾಶಿಸುವಂಥಾದ್ದಾಗಿರುತ್ತದೆ ಮುಮುಕ್ಷು ದೆಶೆಯಲ್ಲಿ ಈ ಲೋಕದಲ್ಲಿರುವಾಗ ಜ್ಞಾನಕ್ಕೆ ವಿಚ್ಛೇದ ಹ್ರಾಸವೃದ್ಧಿಗಳುಂಟು ಮುಕ್ತ ದೆಶೆಯಲ್ಲಿ ಜ್ಞಾನ ತಿರೋಧಾನವಿಲ್ಲದುದರಿಂದ ಸದಾ ಸರ್ವಜ್ಞನಾಗಿರುವನು. **ಆಗೈಯಾಲ್**-ಆ ಕಾರಣದಿಂದ, **ತನ್ ಅಜ್ಞಾನ ಮಡಿಯಾಗ** ತನ್ನ ಅಜ್ಞಾನ ಮೂಲಕವಾಗಿ, ಆವೃತ್ತಿ ಉಂಟಾಗುವದೆಂದು **ಶಙ್ಕಿಕ್ಕವೊಣ್ಣಾದು** - ಶಙ್ಕಿಸತಕ್ಕದ್ದಲ್ಲವು. ಮುಕ್ತನಿಗೆ ಅಜ್ಞಾನವಿದ್ದರಲ್ಲವೇ ಆವೃತ್ತಿಯ ಶಙ್ಕೆಯನ್ನು ಆರೋಪಿಸಬಹುದು ಅಜ್ಞಾನಕ್ಕೆ ಕಾರಣವೇ ಇಲ್ಲದಿದ್ದರೆ, **ಕಾರಣಾಭಾವೇ ಕಾರ್ಯಾಭಾವಃ** ಎಂಬುವಹಾಗೆ, ಆವೃತ್ತಿ ಶಙ್ಕೆಯೇ ಉಂಟಾಗುವದಿಲ್ಲವೆಂಬ ಭಾವವು.

ಮುಂದೆ ಪರಮ ಪುರುಷನ ಸಙ್ಕಲ್ಪ ಮೂಲಕವಾಗಿ ಏನಾದರೂ ಆವೃತ್ತಿಯುಂಟೋ ಎಂಬ ಶಙ್ಕೆಗೆ ಕಾರಣವಿಲ್ಲವೆಂದುಪದೇಶಿಸುತ್ತಾರೆ:—**ಭಗವದ್ವಿಷಯ ವೈಲಕ್ಷಣ್ಯಜ್ಞಾನತ್ತಾಲೆ**-ಭಗವಂತನ ವಿಷಯವಾದುದು, ಪ್ರಾಕೃತ ವಿಷಯಗಳಿಂದ ವಿಲಕ್ಷಣವಾಗಿ ನಿರತಿಶಯ ಮಹಿಮೆಯುಳ್ಳದು ಎಂಬ ಜ್ಞಾನದಿಂದ, **ಮುನ್ಬು ಪಿರನ್ದ** - ಮುಕ್ತ ದೆಶೆಗೆ ಮುಂದೆ ಮುಮುಕ್ಷಾವಸ್ಥೆಯಲ್ಲುಂಟಾದ, **ಭಕ್ತಿ ಶಬ್ದ ವಾಚ್ಯಮಾನ** - ಭಕ್ತಿ ಶಬ್ದದಿಂದ ಹೇಳಿಸಿಕೊಳ್ಳುವ, **ಪ್ರೀತಿರೂಪಾಪನ್ನ ಜ್ಞಾನಮ್** ಪ್ರೀತಿರೂಪವಾಗಿ ಪರಿಣಮಿಸಿದ ಜ್ಞಾನವು, **ಇಪ್ಪೋದು** - ಈ ಮುಕ್ತಾವಸ್ಥೆಯಲ್ಲಿ, **ಶಾಸ್ತ್ರಙ್ಗಳುಕ್ಕು ನಿಲಮಿಲ್ಲಾದ** ಶಾಸ್ತ್ರಗಳಿಗೂ ಕೂಡ ಹೇಳುವದಕ್ಕಾಗಲಿ ಅಥವಾ ತಿಳಿಸುವದಕ್ಕಾಗಲಿ ಸಾಧ್ಯವಲ್ಲದ, **ಭಗವದ್ವೈಲಕ್ಷಣ್ಯ**

**ನಿರತಿಶಯ ಪ್ರೀತಿರೂಪಾಪನ್ನಜ್ಞಾನಮಾಯ್ ತಲೈಕಟ್ಟಿತ್ತು.**

**ಮೆಲ್ಲಾಮ್** - ಭಗವಂತನ ಅಪ್ರಾಕೃತ ವಿಷಯವೆಲ್ಲವೂ, **ಪ್ರತ್ಯಕ್ಷಮಾನಪಡಿಯಾಲೇ** - ಪ್ರತ್ಯಕ್ಷವಾಗುವದರಿಂದ, **ನಿರತಿಶಯ ಪ್ರೀತಿರೂಪಾಪನ್ನಜ್ಞಾನಮಾಯ್** – ಅತ್ಯಂತಾತಿಶಯವಾದ ಪ್ರೀತಿಯಾಗಿ ಪರಿಣಮಿಸಿದ ಜ್ಞಾನವಾದುದಾಗಿ ಎಂದರೆ ಪರಮಾಭಕ್ತಿ ಎಂದು ಹೇಳಿಸಿಕೊಳ್ಳುವ ಜ್ಞಾನರೂಪವಾಗಿ, **ತಲೈ ಕಟ್ಟಿತ್ತು** - ಸಂಪೂರ್ಣತೆಯನ್ನು ಹೊಂದಿತು ಶಾಸ್ತ್ರಮೂಲಕವಾಗಿಯಾಗಲಿ, ಗುರೂಪದೇಶಮೂಲಕವಾಗಲಿ ಭಗವಂತನು ಸರ್ವಚಿದಚಿತ್ತುಗಳಿಗಿಂತಲೂ ವಿಲಕ್ಷಣನಾಗಿ, ಪುರುಷೋತ್ತಮನೆಂದು ಪ್ರಥಿತನಾಗಿರುತ್ತಾನೆ. ಅಂತಹ ಭಗವಂತನಿಗೆ ಅಧೀನವಾಗಿ ತನ್ನ ಸರ್ವಸತ್ತಾಸ್ಥೇಮಪ್ರಯತನ ಫಲಾದಿಗಳೆಲ್ಲಾ ಇವೆ ಎಂದು ಯಾವಾಗ ಅರಿತನೋ, ಆವಾಗ ಈತನಿಗೆ ಅಂತಹ ಪರಮೋಪಕಾರಕನಲ್ಲಿ ಭಕ್ತಿಯುಂಟಾಗುತ್ತದೆ. ಭಕ್ತಿ ಎಂದರೆ **ಸ್ನೇಹರೂಪಮನುಧ್ಯಾನಂ ಭಕ್ತಿರಿತ್ಯಭಿಧೀಯತೇ** ಎಂದು ಹೇಳಿರುವ ಹಾಗೆ ಪ್ರೀತಿರೂಪಾಪನ್ನಜ್ಞಾನವೆಂದು ಇಲ್ಲಿ ಉಪಪಾದಿಸಿರುತ್ತಾರೆ ಈ ಭಕ್ತಿಯೇ ಉತ್ಕರ್ಷಾವಸ್ಥೆಯನ್ನು ಹೊಂದಿದಾಗ **ಪರಾಭಕ್ತಿಃ** ಎಂದೂ, ಅತ್ಯುತ್ಕರ್ಷಾವಸ್ಥೆಯನ್ನು ಹೊಂದಿದಾಗ **ಪರಮಾಭಕ್ತಿಃ**ಯೆಂದೂ ಹೇಳಿಸಿಕೊಳ್ಳುತ್ತದೆ. (೮೮೨-೮೯ಳನೆಯ ಪುಟಗಳನ್ನು ನೋಡಿ. ಶಾಸ್ತ್ರಗಳಿಗೆ ಪರಮಪುರುಷನ ವೈಲಕ್ಷಣ್ಯವನ್ನು ಚೆನ್ನಾಗಿ ತಿಳಿಸುವ ಶಕ್ತಿಯು ಸಾಲದು; **ಯತೋವಾಚೋ ನಿವರ್ತಂತೇ ಅಪ್ರಾಪ್ಯಮನಸಾಸಹ** ಎಂದು ಶ್ರುತಿಯು ಹೇಳುತ್ತದೆ. ಅಥವಾ ಒಂದುವೇಳೆ ಶ್ರುತಿಯು ತಿಳಿಸುವ ಶಕ್ತಿಯುಳ್ಳದ್ದೆಂದು ಒಪ್ಪಿಕೊಂಡರೂ ಅದನ್ನು ಗ್ರಹಿಸುವ ಶಕ್ತಿಯು ನಮಗಿಲ್ಲವು. ಆದುದರಿಂದ ಶಾಸ್ತ್ರಗಳಿಂದ ಭಗವಂತನ ವೈಲಕ್ಷಣ್ಯದ ಮಹಿಮೆಯನ್ನರಿಯುವದು ಸುತರಾಂ ಸಾಧ್ಯವಲ್ಲವು. ಮುಕ್ತದೆಶೆಯಲ್ಲಾದರೋ ಹಾಗಲ್ಲವು. ಪ್ರತ್ಯಕ್ಷದಲ್ಲಿ ಸರ್ವವೂ ವೇದ್ಯವಾಗುವದರಿಂದ, ಭಗವಂತನಲ್ಲಿ ಮುಕ್ತನಿಗುಂಟಾಗುವ ಪ್ರೀತಿಯು ನಿರತಿಶಯವಾದುದೆಂದು ಹೇಳಿರುತ್ತಾರೆ. ಆದುದರಿಂದ ಮುಕ್ತದೆಶೆಯಲ್ಲಿ ಈ ಭಕ್ತಿಯು ಪರಮಾತ್ಮನಿಂದ ವಿಶ್ಲೇಷವನ್ನು ಒಂದು ಕ್ಷಣವಾಗಲಿ ಸಹಿಸದ ಪರಮ ಭಕ್ತಿರೂಪವಾಗಿರುವ ಸರ್ವೋತ್ಕೃಷ್ಟರೂಪವಾದುದು ಆಗುವದರಿಂದ **ತಲೈ ಕಟ್ಟಿತ್ತು** ಎಂದು ಪ್ರಯೋಗಿಸಿರುತ್ತಾರೆ. ಇಂತಹ ನಿರತಿಶಯ ಪ್ರೀತಿಯು ಭಗವಂತನ ವಿಷಯದಲ್ಲಿ ಈ ಮುಕ್ತನಿಗೆ ಉಂಟಾಗಿರುವಾಗ, ಯಾವ ಕಾಲದಲ್ಲೇ ಯಾಗಲಿ ಈ ಮುಕ್ತನಿಗೆ ಭಗವಂತನ ವಿಷಯದಲ್ಲಿ ಅಪ್ರೀತಿ ಎಂಬುವದು **ಪ್ರಾಪ್ತವಾದೀತೇ ? ಎಂದಿಗೂ ಇಲ್ಲವೆಂಬ ಭಾವವು.**

**ಇಪ್ಪಡಿ ಇರುಕ್ಕೈಯಾಲೇ (೧) "ಸ ಚ ಮಮ ಪ್ರಿಯಃ" ಎನ್ರ ಈಶ್ವರನುಡೈಯ ಪ್ರೀತ್ಯತಿಶಯಂ ಅವರ್ಣತನ್ನಾಲುಮ್ ನಿಯಮಿಕ್ಕ ವೊಣ್ಣಾದ ಪಡಿ ಕರೈಪುರಣ್ಡು ವನೋಡು ಪರಂಪರಯಾ ಸಂಬಂಧಮುಡೈಯ ತಿಡರ್ ನಿಲಙ್ಗಳಿಲುಂ ಮೇರಿಪ್ಪಾಯುಮ್ಪಡಿಯಾಯಿತ್ತು. ಆಗೈಯಾಲ್ ಕರ್ಮ**

---

ಈ ಮುಕ್ತನಿಗೆ ಆವೃತ್ತಿಯನ್ನುಂಟುಮಾಡಬೇಕೆಂಬ ಭಗವತ್ಸಂಕಲ್ಪ ಉಂಟಾಗಬೇಕಾದರೆ ಮೂರು ಕಾರಣಗಳಿಂದುಂಟಾಗಬಹುದು :—(೧) ಮುಕ್ತನಿಗೇನೇ ಭಗವಂತನಲ್ಲಿ ಅಪ್ರೀತಿಯುಂಟಾಗುವದರ ಮೂಲಕ ಭಗವಂತನು ಈತನನ್ನು ಶಿಕ್ಷಿಸುವದಕ್ಕಾಗಿ ಆವರ್ತಿಸಬಹುದು ಅಥವಾ (೨) ಭಗವದಾಜ್ಞೆಯನ್ನು ಉಲ್ಲಂಘಿಸೋಣದಿಂದರಾಗಲಿ ಆವರ್ತಿಯನ್ನುಂಟುಮಾಡಬಹುದು. ಅಥವಾ (೩) ಭಗವಂತನಿಗೇನೇ ಮುಕ್ತನಲ್ಲುಂಟಾಗುವ ಅಪ್ರೀತಿಯಿಂದಲಾಗಲಿ ಆಗಬಹುದು. ಮೇಲಿನ ವಾಕ್ಯದಲ್ಲಿ ಮುಕ್ತನಿಗೆ ಶ್ರೀಯಃಪತಿಯಲ್ಲಿ ಸರ್ವೋತ್ಕೃಷ್ಟವಾದ ವಿಶ್ಲೇಷ ದುಸ್ಸಹವಾಗುವಂತಹ ನಿರತಿಶಯ ಪ್ರೀತಿ ಇರುವಾಗ, ಆ ಮುಕ್ತನಿಗೆ ಭಗವಂತನಲ್ಲಿ ಅಪ್ರೀತಿ ಎಂಬುವದು ಅಂಕುರಿಸೀತೇ ? ಎಂದಿಗೂ ಇಲ್ಲವು. ಆದುದರಿಂದ ಪ್ರಥಮ ವಿಕಲ್ಪದ ಶಂಕ್ಕಾವಿಗೆ ಆಸ್ಪದವಿಲ್ಲವು. ಮುಂದೆ ಆಜ್ಞಾತಿಲಂಘನ ದ್ವಾರಾ ಭಗವತ್ಸಂಕಲ್ಪಮೂಲಕ ಆವೃತ್ತಿಯುಂಟಾದೀತೆಂಬ ಶಂಕೆಗೂ ಕಾರಣವಿರುವದಿಲ್ಲವೆಂದುಪದೇಶಿಸುತ್ತಾರೆ.

**ಇಪ್ಪಡಿ ಇರುಕ್ಕೈಯಾಲೇ** - ಇಂತಹ ವಿಶ್ಲೇಷ ಸಹಿಸದಿರುವ ನಿರತಿಶಯ ಪ್ರೀತಿಯು ಮುಕ್ತನಿಗೆ ಭಗವಂತನಲ್ಲಿರುವದರಿಂದಲೇ, **"ಸ ಚ ಮಮ ಪ್ರಿಯಃ"** ಅವನೂ ಕೂಡ ನನಗೆ ತುಂಬಾ ಪ್ರಿಯನು," **ಎನ್ರ**-ಎಂದು ಹೇಳಿರುವ, ಪ್ರೀತ್ಯತಿಶಯವು, **ಅವರ್ಣ ತನ್ನಾಲುಮ್** ಆ ಭಗವಂತನಿಂದಲೂ, **ನಿಯಮಿಕ್ಕ ವೊಣ್ಣಾದಪಡಿ** ನಿಯಮಿಸಲು ಸಾಧ್ಯವಿಲ್ಲದಹಾಗೆ, **ಕರೈಪುರಂಡು** ಎಲ್ಲೆಯನ್ನು ಮೀರಿ, **ಇವನೋಡು** - ಈ ಮುಕ್ತನೊಂದಿಗೆ, **ಪರಂಪರಯಾಸಂಬಂಧಮುಡೈಯ**-ಪರಂಪರೆಯಾಗಿ ಸಂಬಂಧವನ್ನು ಹೊಂದಿದ, **ತಿಡರ್ ನಿಲಙ್ಗಳಿಲುಮ್** ಎತ್ತರವಾದ ಪ್ರದೇಶಗಳಲ್ಲೂ, **ಏರಿಪ್ಪಾಯುಮ್ಪಡಿ** - **ಹತ್ತಿ** ಪ್ರವಹಿಸುವಹಾಗೆ **ಆಯಿತ್ತು** - ಆಗುತ್ತದೆ. ಹಿಂದಿನ ವಾಕ್ಯದಲ್ಲಿ ಮುಕ್ತನಿಗೆ ಸರ್ವೇಶ್ವರನಲ್ಲಿರುವ ಪ್ರೀತ್ಯತಿಶಯವು ಸರ್ವೋತ್ಕೃಷ್ಟವಾದುದಾಗಿ ಸರ್ವೇಶ್ವರನಿಂದ ಒಂದು ಕ್ಷಣಕಾಲ ವಿಶ್ಲೇಷೆಯನ್ನೂ ಕೂಡ ಸಹಿಸನೆಂದು ಹೇಳಲ್ಪಟ್ಟಿತು ಹೀಗೆ ಸರ್ವೋತ್ಕೃಷ್ಟ

---

(೧) ಗೀ. ೭.೧೭.

ವಾದ ಪ್ರೀತಿಯನ್ನು ತೋರಿದರೆ ಅದಕ್ಕೆ ಬದಲಾಗಿ ಕರುಣಾಸಾಗರನು ಈ ಮುಕ್ತ ನಲ್ಲಿ ಎಂದಿಗಾದರೂ ಅಪ್ರೀತಿಯನ್ನು ತೋರಿಸುವನೇ ? ಶ್ರೀ ಕೃಷ್ಣ ಭಗವಾನ್ ರವರೇ ಹೇಳಿರುವದೇನೆಂದರೆ :—

" ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿ ರ್ವಿಶಿಷ್ಯತೇ ।
ಪ್ರಿಯೋ ಹಿ ಜ್ಞಾನಿನೋऽತ್ಯರ್ಥ ಮಹಂ ಸ ಚ ಮಮಪ್ರಿಯಃ " ॥

**ತೇಷಾಂ** – ಆ ನಾಲ್ಕು ಜನ ಭಕ್ತರಾದ ಆರ್ತನು, ಜಿಜ್ಞಾಸುವು, ಅರ್ಥಾರ್ಥಿಯು, ಜ್ಞಾನೀ ಇವರುಗಳಲ್ಲಿ ಜ್ಞಾನಿಯಾದವನು ಪರಮಶ್ರೇಷ್ಠನು. ಏಕೆಂದರೆ, ಇನ್ನು ಮೂರು ಜನವು ಹಾಗಲ್ಲದೆ ಜ್ಞಾನಿಯು ಮಾತ್ರ **ಏಕಭಕ್ತಿಃ** - ನನ್ನೊಬ್ಬನಲ್ಲೇ ಮುಖ್ಯವಾದ ಭಕ್ತಿಯುಳ್ಳವನು ಆದುದರಿಂದ **ವಿಶಿಷ್ಯತೇ** – ಇತರರಿಗಿಂತ ವಿಲಕ್ಷಣನು, ಎಂದರೆ ಸಾಧನ ದೆಶೆಯಲ್ಲೂ ಪ್ರಾಪ್ಯದೆಶೆಯಲ್ಲೂ ನಿರತಿಶಯ ಪ್ರೇಮರೂಪ ಭಕ್ತಿಯುಳ್ಳವನಾಗಿದ್ದಾನೆಂಬ ಭಾವವು. ಇತರ ಭಕ್ತರಾದರೋ ಹಾಗಲ್ಲವು, ಅವರು ಏಕಭಕ್ತಿಯುಳ್ಳವರಲ್ಲವು. ಏಕೆಂದರೆ ಫಲದಲ್ಲೇ ಅವರಿಗೆ ಮುಖ್ಯ ದೃಷ್ಟಿ, ಪರಮಾತ್ಮನಲ್ಲಿ ಭಕ್ತಿಯು ಸಾಧನರೂಪ ಮಾತ್ರವಾಗಿ ಎಂಬ ಭಾವವು ಇಷ್ಟೇ ಅಲ್ಲವು. ಆ ಜ್ಞಾನಿಯು **ನಿತ್ಯಯುಕ್ತಃ**-ಸದಾ ಧ್ಯಾನ ಯೋಗಿಯು, ಯಾವಜ್ಜೀವವೂ, ಉಪಾಸಕನು ಅನಂತರವೂ ಭಕ್ತನು. ಇತರರು ಯೋಗಿಯಾಗಿರುವದು ಫಲಪ್ರಾಪ್ತಿಯವರೆಗೆ ಮಾತ್ರವೇ. ಅನಂತರವಿಲ್ಲವು ಆದುದರಿಂದ ಅವರು ನಿತ್ಯಯುಕ್ತರಲ್ಲವು. ಆದುದರಿಂದ **ಜ್ಞಾನೀ ವಿಶಿಷ್ಯತೇ** ಎಂದು ಹೇಳಲ್ಪಟ್ಟಿತು. ಇತರರು ಮೂರುಜನ ಭಕ್ತರೂ ಚ್ಯವನಧರ್ಮವುಳ್ಳವರೆಂದೂ "**ಪ್ರತಿಬುದ್ಧಸ್ತು ಮೋಕ್ಷಭಾಕ್**" ಎಂದು ಜ್ಞಾನಿಯು ಮಹಾಪ್ರಾಜ್ಞನೆಂದೂ, ಇನ್ನೊಂದು ಕಡೆಯಲ್ಲೂ ಪ್ರಶಂಸಿಸಲ್ಪಟ್ಟಿರುತ್ತಾನೆ. **ಅಹಂ**-ನಾನು ಯದ್ಯಪಿ ಸರ್ವಜ್ಞನಾಗಿ ಸರ್ವ ಶಕ್ತನಾಗಿದ್ದರೂ ಕೂಡ, ಜ್ಞಾನಿಗೆ **ಅತ್ಯರ್ಥಂ**-ಇಷ್ಟೆಂದು ಹೇಳಲಸಾಧ್ಯವಾಗುವಷ್ಟು, **ಪ್ರಿಯೋಹಿ**-ಆತನಿಗೆ ಪರಮಪ್ರಿಯ ವಸ್ತುವಲ್ಲವೇ ? ಆ **ಕಾರಣದಿಂದಲೇ ಸ ಚ** ಆ ಪರಮಭಕ್ತನೂ ಕೂಡ, **ಅತ್ಯರ್ಥಂ ಮಮ ಪ್ರಿಯಃ**-"**ಮಮ ಪ್ರಾಣಾ ಹಿ ಪಾಂಡವಾಃ**" ಎಂದು ನಾನೇ ಇನ್ನೊಂದು ಸಂದರ್ಭದಲ್ಲಿ ಹೇಳಿದ ಹಾಗೆ, ನನಗೆ ಪ್ರಾಣಪ್ರಿಯನು. **ಏಕಭಕ್ತಿರ್ವಿಶಿಷ್ಯತೇ** ಎಂದು ಹೇಳಲ್ಪಟ್ಟಿತಲ್ಲಾ, ಇದಕ್ಕೇನಾದರೂ ನಿದರ್ಶನವುಂಟೋ ಎಂದರೆ, ಮಹಾ ಪ್ರಾಜ್ಞನಾದ ಆಂಜನೇಯನು ಒಂದು ಒಳ್ಳೇ ನಿದರ್ಶನವೆಂದು ಭಾವಿಸತಕ್ಕದ್ದು. ಆ ಪರಮಭಕ್ತನು ಹೇಳಿಕೊಂಡಿರುವದೇನೆಂದರೆ:—"**ಸ್ನೇಹೋ ಮೇ ಪರಮೋ ರಾಜನ್ ತ್ವಯಿ ನಿತ್ಯಂ ಪ್ರತಿಷ್ಠಿತಃ । ಭಕ್ತಿಶ್ಚ ನಿಯತಾವೀರಭಾವೋ ನಾನ್ಯತ್ರ ಗಚ್ಛತಿ**" ಓ ಸರ್ವಜನ **ಚಿತ್ತಾಹ್ಲಾದಕರನಾದ ಶ್ರೀ ರಾಮನೇ ನಿನ್ನಲ್ಲಿ ನನಗಿರುವ ನಿರತಿಶಯವಾದ**

**ಮಿಲ್ಲೈಯೇ ಯಾಗಿಲುಮ್ ಸ್ವತಂತ್ರನಾನ ಈಶ್ವರನುಡೈಯ ಇಚ್ಛೈ**

---

ಪ್ರೀತಿಯು ಸದಾ ಶಾಶ್ವತವಾಗಿರುವಂಥಾದ್ದಾಗಿರುತ್ತದೆ. ನಿನ್ನಲ್ಲಿ ಭಕ್ತಿ ಎಂಬುದು ಸ್ವಭಾವಜನ್ಯವಾದುದಾಗಿ ನಿಯತವಾಗಿರುತ್ತದೆ ನನ್ನ ಮನಸ್ಸು ನಿನ್ನನ್ನು ಬಿಟ್ಟು ಮತ್ತೆಲ್ಲಿಯೂ ಹೋಗುವದಿಲ್ಲನೆಂದು ಹೇಳಿಕೊಂಡಿರುತ್ತಾನೆ. ಶ್ರೀ ಯತಿವರ್ಯರೂ ಒಂದು ಒಳ್ಳೇ ನಿದರ್ಶನವನ್ನು ಪ್ರದರ್ಶಿಸುತ್ತಾರೆ:—"**ತತ್ಸಾಸಕ್ತಮತಿಃ ಕೃಷ್ಣೇ ದಶ್ಯಮಾನೋ ಮಹೋರಗೈಃ ನ ವೇದಾತ್ಮನೋ ಗಾತ್ರಂ ತತ್ಸ್ಮೃತ್ಯಾಹ್ಲಾದ ಸಂಸ್ಥಿತಃ**" (ವಿ ಪು ೧ ೧೭. ೩೯.) ಜ್ಞಾನಿಗಳಲ್ಲಿ ಅಗ್ರೇಸರರಾದ **ಪ್ರಹ್ಲಾದರು** ಶ್ರೀ ಕೃಷ್ಣನಲ್ಲೇ ಮಗ್ನವಾದ ಮನಸ್ಸುಳ್ಳವರಾದ ಪ್ರಯುಕ್ತ ತನ್ನ ದುಷ್ಟ ಪಿತಾವಿನ ಆಜ್ಞೆಯ ಪ್ರಕಾರ ಘಟಸರ್ಪಗಳಿಂದ ಕಚ್ಚಲ್ಪಟ್ಟರೂ ತನ್ನ ಶರೀರಕ್ಕೆ ವೇದನೆಯುಂಟಾಯಿತೆಂದು ಆ ಪರಮ ಭಾಗವತರರಿಯಲೇ ಇಲ್ಲವು; ಏಕೆಂದರೆ **ತತ್ಸ್ಮೃತ್ಯಾಹ್ಲಾದಸಂಸ್ಥಿತಃ**, ಎಂದರೆ ಆ ಪರಮಾತ್ಮನನ್ನು ನಿರಂತರ ಸ್ಮರಿಸುವ ಏಕಾಂತಬುದ್ಧಿಯಿಂದುಂಟಾದ ಪರಮ ಸಂತೋಷದಲ್ಲಿ ಮಗ್ನನಾಗಿರುವದರಿಂದ, ಅವರಿಗೆ ಯಾವ ಕ್ಲೇಶವೂ ತೋರಲಿಲ್ಲವು. ಇಂತಹ ಪ್ರಹ್ಲಾದರಲ್ಲಿ ಸರ್ವೇಶ್ವರನಿಗಿರುವ ಪ್ರೀತ್ಯತಿಶಯವು ಎಂಥಾದ್ದೆಂಬುದನ್ನು ಸರ್ವೇಶ್ವರನು ಪ್ರಹ್ಲಾದ ಪರಿಪಾಲನವನ್ನು ಮಾಡುವದಕ್ಕಾಗಿ ಒಂದ ವಿಲಕ್ಷಣವಾದ ಅವತಾರ ವಿಶೇಷವನ್ನೇ ಕೈಕೊಂಡನೆಂಬುದು ಎಲ್ಲರಿಗೂ ತಿಳಿದಂಥವೇ ಆಗಿರುತ್ತದೆ. ಈ ಪ್ರೀತ್ಯತಿಶಯವನ್ನು ಒಂದು ಜಲಪ್ರವಾಹಕ್ಕೆ ಹೋಲಿಸಿರುತ್ತಾರೆ. ಪ್ರಬಲ ಪ್ರವಾಹವನ್ನು ಹೇಗೆ ತಡೆಯುವದಶಕ್ಯವಾಗಿ, ಅದು ದಡಗಳನ್ನತಿಕ್ರಮಿಸಿ, ಮೇಲಕ್ಕೆ ಹಾಯ್ದು, ಎತ್ತರ ಪ್ರದೇಶವನ್ನೂ ಕೂಡ ನೀರಿನಲ್ಲಿ ಮುಳುಗುವಹಾಗೆ ಮಾಡುತ್ತದೋ, ಹಾಗೆಯೇ ಸರ್ವೇಶ್ವರನಿಗೆ ಏಕಾಂತಭಕ್ತನಲ್ಲಿರುವ ಪ್ರೀತ್ಯತಿಶಯದ ಪ್ರವಾಹವು, ಪಾಪ ಪ್ರಾಚುರ್ಯದಿಂದ ಸರ್ವೇಶ್ವರನ ಅಂತಹ ಪ್ರೀತ್ಯತಿಶಯಕ್ಕೆ ಅನರ್ಹವಾಗಿದ್ದರೂ, ಅಂತವುಗಳನ್ನೂ ಸಹ ಹೋಗಲಾಡಿಸುವಹಾಗೆ ಅತ್ರಮಿಸುತ್ತದೆ ಎಂಬ ಭಾವವು. ಇದುದರಿಂದ ಸ್ವಾಮಿಯು ತಾನೇ ಸ್ವತಂತ್ರಿಸಿ ಅಂತಹ ಮುಕ್ತನನ್ನು ಎಂದಿಗೂ ಆವರ್ತಿಸುವಹಾಗೆ ಮಾಡಲಾರನೆಂದು ಮುಂದೆ ಹೇಳುತ್ತಾರೆ:—**ಆಗೈಯಾಲ್** - ಆದುದರಿಂದ ಎಂದರೆ ಅಂತಹ ಮುಕ್ತನಲ್ಲಿ ಸರ್ವೇಶ್ವರನಿಗೆ ನಿರವಧಿಕವಾದ ಪ್ರೀತ್ಯತಿಶಯವು ಸರ್ವದಾ ನಿತ್ಯವಾಗಿರುವದರಿಂದ, **ಕರ್ಮಮಿಲ್ಲೈ ಯೇ ಯಾಗಿಲುಮ್** - ಮುಕ್ತನಲ್ಲಿ ಕರ್ಮಲೇಶವೇನೂ ಇಲ್ಲದಿದ್ದರೂ, **ಸ್ವತಂತ್ರನಾನ ಈಶ್ವರನುಡೈಯ** - ಸ್ವತಂತ್ರನಾದ ಸರ್ವೇಶ್ವರನ,

**ಯಾಲೆ ಪುನರಾವರ್ತ್ತಿಯುಣ್ಡಾಗಿರದೋ ವೆನ್ನು ಶಙ್ಕಿಕ್ಕವೊಣ್ಣಾದು. ಶಾಸ್ತ್ರವಶ್ಯಾಧಿಕಾರವ್ ಕಳಿಗೈಯಾಲೇ ಮುಕ್ತ ದಶೈಯಿಲ್ ಆಜ್ಞಾತಿ ಲಂಘನಮಿಲ್ಲೈ. ಅವನುಕಪ್ಪಾಲೇ (ಪ್ಪೇ) ತನಕ್ಕು ಕಪ್ಪಾಗೈಯಾಲೇ**

---

**ಇಚ್ಚೈಯಾಲೆ** – ಇಷ್ಟಪ್ರಕಾರ, **ಪುನರಾವೃತ್ತಿಯುಂಡಾಗಿರದೋ ವೆನ್ನು** - ಪುನರಾವೃತ್ತಿ ಏನಾದರೂ ಸಂಭವಿಸೀತೋ ಎಂದು, **ಶಙ್ಕಿಕ್ಕವೊಣ್ಣಾದು** - ಶಙ್ಕಿಸಲು ಸಾಧ್ಯವಿಲ್ಲವು ಏಕೆಂದರೆ ಮುಂದಿನ ವಾಕ್ಯದಿಂದ ಕಾರಣವನ್ನು ಹೇಳುತ್ತಾರೆ. **ಶಾಸ್ತ್ರವಶ್ಯಾಧಿಕಾರವ್** - ಸ್ವಾಮಿಯು ವೇದರೂಪದಲ್ಲಿ ದಯ ಪಾಲಿಸಿರುವ ವಿಧಿ ನಿಷೇಧವಾಕ್ಯಗಳಿಗೆ ವಶವಾಗಿರುವ ಅಧಿಕಾರವು, **ಕಳಿಗೈ ಯಾಲೆ** - ಮುಕ್ತದೆಶೆಯಲ್ಲಿ ಕಳೆದುಹೋಗುವುದರಿಂದ, ಮುಕ್ತದಶೆಯಲ್ಲಿ, **ಆಜ್ಞಾತಿಲಂಘನಮಿಲ್ಲೈ** – ಭಗವದಾಜ್ಞೆಯನ್ನು ಮೀರಿ ನಡೆಯುವ ಸಂಭ ವವೇ ಇಲ್ಲವು. ಭಗವಂತನು ಏನೊಂದೂ ಕಾರಣವಿಲ್ಲದೆ, ತನ್ನನ್ನು ಪರಮಭಕ್ತಿ ಯಿಂದ ಬಂದು ಸೇರಿದವನನ್ನು ಕೈಬಿಟ್ಟು ತನ್ನ ಪರಮ ಪದದಿಂದ ತಳ್ಳಿಬಿಡುವ ದಿಲ್ಲವು. ಈಗಿನ ಮದಾಂಧರಾದ ಅಧಿಕಾರಿಗಳ ಹಾಗೆ ಭಗವಂತನಲ್ಲವು. ತಾನು ಸ್ವತಂತ್ರನಾದರೂ ಮಾರ್ಗತಪ್ಪಿ ಎಂದಿಗೂ ನಡೆಯುವವನಲ್ಲವು. ತಾನು ಮಾಡಿದ ವಿಧಿ ನಿಷೇಧ ವಾಕ್ಯಗಳಿಗೆ ಕಟ್ಟುಬಿದ್ದೇ ಎಲ್ಲವನ್ನೂ ನಡೆಸುವನು. ಭಗವಂತನು ಲೋಕಾಪವಾದಕ್ಕೆ ಎಂದಿಗೂ ಸಿಕ್ಕುವವನಲ್ಲವು. ಶ್ರೀರಾಮನೇ ಇದಕ್ಕೆ ನಿದರ್ಶನವು. ಸ್ಯಮಂತಕೋಪಾಖ್ಯಾನವು ಇದನ್ನೇ ಸಮರ್ಥಿಸುತ್ತದೆ ತನ್ನ ಮನಬಂದಂತೆ ನಡೆಸಿದುದಾದರೆ ಆತನಿಗೆ ವೈಷಮ್ಯ ನೈರ್ಘೃಣ್ಯಾದಿಗಳು ಸಂಭವಿಸುತ್ತವೆ. ಆವರ್ತಿಯುಂಟಾಗುವದಕ್ಕೆ ಭಗವದಪ್ರೀತಿಯುಂಟಾಗಬೇಕು. ಭಗವದಪ್ರೀತಿಯುಂಟಾಗಲು ಮುಕ್ತನು ಆಜ್ಞಾತಿಲಂಘನವನ್ನು ಮಾಡಬೇಕು. ಹಿಂದಿನ ಪಾಪಶೇಷದಿಂದಲೇನಾದರೂ ಭಗವಂತನಿಗೆ ಅಪ್ರೀತಿಯೋ ಎಂದರೆ ಪಾಪವೆಲ್ಲಾ ಕಳೆದುಹೋಗಿರುತ್ತದೆ ಆಗಲು, ಪರಮಪದದಲ್ಲೇ ಈ ಮುಕ್ತನು ಏಕೆ ಆಜ್ಞಾತಿಲಂಘನವನ್ನು ಮಾಡಕೂಡದು ? "ಶ್ರುತಿಸ್ಸ್ಮೃತಿರ್ಮಮೈ ವಾಜ್ಞಾ ಯಸ್ತಾ ಮುಲ್ಲಂಘ್ಯ ವರ್ತತೇ । ಆಜ್ಞಾಚ್ಛೇದೀ ಮಮದ್ರೋಹೀ ಮದ್ಭಕ್ತೋಽಪಿ ನ ವೈಷ್ಣವಃ" ಎಂದು ಹೇಳಿರುವಹಾಗೆ ಆಜ್ಞೋಲ್ಲಂಘನ ವನ್ನು ಏಕೆ ಮಾಡಕೂಡದು ? ಎಂದರೆ, ಈ ಚೇತನನಿಗೆ ಜ್ಞಾನವು ಸಂಕೋಚವನ್ನು ಹೊಂದಿರುವಾಗಷ್ಟೇ ಶಾಸ್ತ್ರದ ಆವಶ್ಯಕತೆಯು ; ಯಾವಾಗ ಜ್ಞಾನವು ವಿಕಾಸವನ್ನು ಹೊಂದಿತೋ, ಆಗ ಉಂಟಾದ ಸರ್ವ

**ಈಶ್ವರಾಭಿಮತತ್ತುಕ್ಕು ವಿಪರೀತಮಾನ ವನುಷ್ಠಾನಮಿಲ್ಲೈ. ಆಗೈಯಾಲ್ ಕೈಙ್ಕರ್ಯ ಪರ್ಯಂತ ಪರಿಪೂರ್ಣ ಬ್ರಹ್ಮಾನುಭವರೂಪಮಾನ ಮೋಕ್ಷಾಖ್ಯ ಪುರುಷಾರ್ಥಮ್ ಮೇಲೆ ಯಾವದಾತ್ಮಭಾವಿಯಾಯಿತ್ತು. ಇವೈ ಎಲ್ಲಾ**

---

ಸಾಕ್ಷಾತ್ಕಾರರೂಪವಾದ ಪ್ರತ್ಯಕ್ಷಜ್ಞಾನದಿಂದ ಪ್ರತಿಕೂಲಾಚರಣೆಯು ಈಷದಪಿ ಇರುವದಿಲ್ಲವು. ಆದುದರಿಂದ ಆಗ ಶಾಸ್ತ್ರಗಳು ಬೇಕಿಲ್ಲವು. ಈತನಿಗೆ ಆಗ ಶಾಸ್ತ್ರ ವಶ್ಯಾಧಿಕಾರವು ಕಳಿಯಿತೆಂದು ಹೇಳಲ್ಪಟ್ಟಿರತ್ತದೆ ಹೀಗೆ ಪರಮಭಕ್ತಿಯಿಂದ ವರ್ತಿಸುವನಾದ-ವರಿಂದ ಆಜ್ಞಾತಿಲಂಘನ ಪ್ರವರ್ತನೆಗೆ ಕಾರಣವೇ ಇಲ್ಲವು. ಏಕೆಂದರೆ ಯಾವಾಗಲೂ ಮುಕ್ತನು ಸರ್ವೇಶ್ವರನ ಪ್ರಸನ್ನತೆಯನ್ನೇ ಎದುರು ನೋಡುವವನಾಗಿ ಆತನಿಗೆ ಸದಾ ಕೈಙ್ಕರ್ಯಗಳನ್ನೆಸಗುವದರಲ್ಲೇ ನಿರತನಾಗಿರುವನನು. ಆದುದರಿಂದ ಸರ್ವೇಶ್ವರನ ಅಭಿಮತವೇ ತನ್ನ ಅಭಿಮತವೆಂದು ಮುಕ್ತನು ವರ್ತಿಸುವನೆಂದು ಮುಂದಿನ ವಾಕ್ಯದಿಂದ ಹೇಳುತ್ತಾರೆ:—**ಅವನುಕಪ್ಪಾಲೇ** - ಶ್ರಿಯಃಪತಿಯು ಪ್ರೀತಿಯನ್ನು ಹೊಂದುವದರಿಂದ, **ತನಕ್ಕುಕಪ್ಪಾಗೈಯಾಲ್** - ಮುಕ್ತನಾದ ತನಗೂ ಪ್ರೀತಿಯುಂಟಾಗುವದರಿಂದ, **ಈಶ್ವರಾಭಿಮತತ್ತುಕ್ಕು** - ಆ ಸರ್ವೇಶ್ವರನ ಇಷ್ಟಕ್ಕೆ, **ವಿಪರೀತಮಾನ** - ವಿರುದ್ಧವಾದ, ವ್ಯತ್ಯಸ್ತವಾದ, **ಅನುಷ್ಠಾನಮಿಲ್ಲೈ** - ಆಚರಣೆಯಿಲ್ಲವು.

ಹೀಗೆ ಸರ್ವ ವಿಧ ಆವೃತ್ತಿ ಶಙ್ಕಾಗಳನ್ನೂ ಪೂರ್ವಪಕ್ಷರೀತ್ಯಾ ಅನುವಾದ ಮಾಡಿ, ಆ ಶಙ್ಕಾಗಳಿಗೆ ಕಾರಣವೇ ಇಲ್ಲವೆಂದು ಸಿದ್ಧಾಂತಿಸಿ ಉಪಪಾದನೆ ಮಾಡಿದುದರಿಂದ ಆ ಪರಿಪೂರ್ಣಬ್ರಹ್ಮಾನುಭವವು ಶಾಶ್ವತವಾದುದೆಂದು ಮುಗಿಸುತ್ತಾರೆ:—**ಆಗೈಯಾಲ್** - ಹೀಗೆ ಮೇಲೆ ಉಪಪಾದಿಸಿದ ರೀತಿಯಲ್ಲಿ ಯಾವ ವಿಧ ಪುನರಾವೃತ್ತಿ ಶಙ್ಕಾವಿಗೂ ಕಾರಣವೇ ಇಲ್ಲದುದರಿಂದ, **ಕೈಙ್ಕರ್ಯಪರ್ಯಂತ**-ಶ್ರಿಯಃಪತಿಯು ಅಭಿಮತಾನುಸಾರ ಎಲ್ಲಾ ಕೈಙ್ಕರ್ಯವನ್ನು ಮಾಡುವ ಪರ್ಯಂತವಾದ, ಪರಿಪೂರ್ಣಬ್ರಹ್ಮಾನುಭವರೂಪವಾದ, **ಮೋಕ್ಷಾಖ್ಯಪುರುಷಾರ್ಥಂ** - ಮೋಕ್ಷವೆಂದು ಹೇಳಿಸಿಕೊಳ್ಳುವ ಪುರುಷಾರ್ಥವು, **ಮೇಲ್** - ಅರ್ಚಿರಾದಿ ಮಾರ್ಗಮೂಲಕ ಪ್ರಾಪ್ಯವನ್ನು ಪರಮಪದದಲ್ಲಿ ಹೊಂದಿದ ನಂತರ, **ಯಾವದಾತ್ಮಭಾವಿಯಾಯಿತ್ತು** - ಆತ್ಮಾ ಹೇಗೆ ನಿತ್ಯವೋ ಶಾಶ್ವತವೋ ಹಾಗೆಯೇ ಶಾಶ್ವತವಾದುದು ಎಂಬ ಭಾವವು ಮುಕ್ತನಿಗೆ ಉಂಟಾಗುವ ಮೋಕ್ಷವೆಂಬ ಪುರುಷಾರ್ಥವು ಎಂಥಾದ್ದೆಂಬುದಕ್ಕೆ ಈ ವಾಕ್ಯದಲ್ಲಿ ಕೈಙ್ಕರ್ಯಪರ್ಯಂತ ಪರಿಪೂರ್ಣ ಬ್ರಹ್ಮಾನುಭವವೆಂದು ಹೇಳಿರುತ್ತಾರೆ. ಆದರೆ ಕೆಲವರು ಭಕ್ತ್ಯುಪಾಯನಿಷ

**ತ್ತೈಯುಮ್ ನಿನೈತ್ತು (೧) "ಅನಾವೃತ್ತಿಶ್ಶಬ್ದಾತ್, ಅನಾವೃತ್ತಿಶ್ಶಬ್ದಾತ್" ಎನ್ರು ಸೂತ್ರಕಾರರು ಮರುಳಿಚ್ಚೆಯ್ದಾರ್.**

---

ನಿಗೆ ಪರಿಪೂರ್ಣಬ್ರಹ್ಮಾನುಭವವೂ, ಪ್ರಪತ್ತಿನಿಷ್ಠನಿಗೆ ಕೈಙ್ಕರ್ಯ ಮಾತ್ರವೂ ಪ್ರಾಪ್ತಿಯಾಗುತ್ತದೆಂದು ಹೇಳುವರು. ಈ ಅಭಿಪ್ರಾಯವು ಸರಿಯಲ್ಲವೆಂದು ತಿಳಿಸುವದಕ್ಕಾಗಿಯೂ ಮೋಕ್ಷದೆಶೆಯಲ್ಲಿ ಎರಡೂ ಪ್ರಾಪ್ತವಾಗುತ್ತದೆಂದು ಹೇಳುವದಕ್ಕಾಗಿ ಕೈಙ್ಕರ್ಯ ಪರ್ಯಂತ ಎಂಬ ಪ್ರಯೋಗವು.

ತಾವು ಮೇಲೆ ಉಪಪಾದಿಸಿದ ಶಙ್ಕೆಗಳಿಗೂ ತನ್ನಿರಸನಗಳಿಗೂ ಶಾಸ್ತ್ರಾಧಾರ ಉಂಟೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ— **ಇವ್ವೈಯೆಲ್ಲಾತ್ತೈಯುಮ್**- ಈ ಶಙ್ಕೆಗಳನ್ನೂ, ಅವುಗಳ ನಿರಸನಗಳನ್ನೂ, **ನಿನೈತ್ತು** - ಮನಸ್ಸಿನಲ್ಲಿಟ್ಟು "ಅನಾವೃತ್ತಿಶ್ಶಬ್ದಾತ್, ಅನಾವೃತ್ತಿಶ್ಶಬ್ದಾತ್" ಎಂಬ ಕೊನೆಯ ಸೂತ್ರದಲ್ಲಿ, **ಸೂತ್ರಕಾರರುಮ್** - ಬಾದರಾಯಣರೂ ವ್ಯಾಸಮಹರ್ಷಿಯೂ, **ಅರುಳಿಚ್ಚೆಯ್ದಾರ್** ಕೃಪೆಯಾ ಉಪದೇಶಿಸಿರುತ್ತಾರೆ. ಶ್ರೀ ಬಾದರಾಯಣರು ಈ ಎಲ್ಲಾ ಶಙ್ಕೆಗಳಿಗೂ ಸಮಾಧಾನವಾಗಿ ಮುಕ್ತನಿಗೆ ಎಂದಿಗೂ **ಅನಾವೃತ್ತಿಃ** - ಆವೃತ್ತಿ ಇಲ್ಲವು, ಪುನಃ ಶರೀರವನ್ನೆತ್ತಿ ಈ ಲೀಲಾವಿಭೂತಿಯಲ್ಲಿ ಜನಿಸುವದಿಲ್ಲವು. ಏಕೆಂದರೆ, **ಶಬ್ದಾತ್** - ಶ್ರುತಿಯಲ್ಲಿ ಹಾಗೆ ಹೇಳಿರುತ್ತದೆ. ಎಲ್ಲಿ ಹಾಗೆ ಹೇಳಿರುತ್ತದೆ ಎಂದರೆ, ಛಾಂದೋಗ್ಯೋಪನಿಷತ್ತಿನ ಉಪಸಂಹಾರ ವಾಕ್ಯವಾದ **"ಸಖಲ್ವೇವಂ ವರ್ತಯನ್ಯಾವದಾಯುಷಂ, ಬ್ರಹ್ಮಲೋಕ ಮಭಿಸಂಪದ್ಯತೇ ನ ಚ ಪುನರಾವರ್ತತೇ ನ ಚ ಪುನರಾವರ್ತತೇ"** ಎಂಬಲ್ಲಿ ಹೇಳಿರುತ್ತದೆ. ಈ ಶಙ್ಕೆಗಳನ್ನೂ, ಅವುಗಳನ್ನು ಖಂಡಿಸಿ ಸಿದ್ಧಾನ್ತವನ್ನೂ, ಶ್ರೀ ಭಾಷ್ಯಕಾರರು ಚೆನ್ನಾಗಿ ತಾವು ಅನುಗ್ರಹಿಸಿದ ಶ್ರೀ ಭಾಷ್ಯದಲ್ಲಿ ಉಪದೇಶಿಸಿರುವಾಗ ಅದನ್ನು ತಿಳಿಸದೆ ಶ್ರೀ ವ್ಯಾಸಸೂತ್ರವನ್ನು ಮಾತ್ರ ತಿಳಿಸಿರುವದಕ್ಕೆ ಕಾರಣವೇನೆಂದು ಪ್ರಶ್ನಿಸಬಹುದು. ವ್ಯಾಸಸೂತ್ರವನ್ನು ಯಾವಾಗ ಉದಾಹರಿಸಿದರೋ, ಆ ವ್ಯಾಸ ಸೂತ್ರಗಳಿಗೆ ಶ್ರೀ ಭಾಷ್ಯವನ್ನು ನಮ್ಮ ಸಿದ್ಧಾನ್ತರೀತ್ಯಾ ಅನುಗ್ರಹಿಸಿರುವವರು ಶ್ರೀ ಯತಿವರ್ಯರಾಗಿ, ಅದು ಎಲ್ಲರಿಗೂ ವೇದ್ಯವಾದ ವಿಷಯವಾದುದರಿಂದ, ಅಂತಹ ವಿಷಯವನ್ನು ಹೇಳುವದು ಅನಾವಶ್ಯಕವಾದುದರಿಂದ ಹೇಳಲಿಲ್ಲವು. ಶ್ರೀ ದೇಶಿಕರವರು ತಾವು ಬರೆದಿರುವದೆಲ್ಲಾ ಶ್ರೀ ಭಾಷ್ಯಕಾರರು ಸಂಕ್ಷೇಪವಾಗಿ

---

(೧) ಶಾ. ಸೂ. ೪. ೪. ೨೨.

ಏರಿ ಎಳಿರ್‌ಪದಮೆಲ್ಲಾ ವುಯಿರ್ಕ್ಕು ಮಿತಮುಕಕ್ಕುವನ್ ।
ನಾರು ತುಳಾಯ್‌ಮುಡಿ ನಾಥನ್ನೈ ನಣ್ಣಿಯಡಿಮ್ಮೈ ಯಿನವನ್ ।
ಕೊರು ಕವರ್‌ನದಕುರುಕ್ಕಳ್ ಕುಳಾಙ್ಗಳ್ ಕುರೈ ಕಳರ್ ಕೀಳ್ ।
ವೂರುದಲಿನ್ರಿ ಮಕಿಳ್‌ನ್ದಿಳುಮ್ ಪೋಗತ್ತುಮುನ್ನುವಮೇ ॥೨೯॥

ಬರೆದುದರ ಉಪಪಾದನವೆಂದೇ ಹೇಳಿಕೊಂಡಿರುತ್ತಾರೆ. ಆದುದರಿಂದ ಶ್ರೀ ಭಾಷ್ಯದ ಉಪಕೃತಿಯನ್ನು ಇಲ್ಲಿ ಸ್ಮರಿಸಲಿಲ್ಲವೆಂದು ಹೇಳಲಾಗುವದಿಲ್ಲವು. ಈ ಪ್ರಕರಣದಲ್ಲಿ ಶ್ರೀ ಭಾಷ್ಯಾಭಿಪ್ರಾಯವೇನೆಂಬುವದಕ್ಕೆ ಹಿಂದೆ ೧೯೨-೩ ನೆಯ ಪುಟಗಳನ್ನು ಪರಾಂಬರಿಸತಕ್ಕದ್ದು. ಅದೂ ಅಲ್ಲದೆ ಶ್ರೀ ವ್ಯಾಸಸೂತ್ರ ದಿಂದುಂಟಾದ ಮಹದುಪದೇಶಕ್ಕೆ ಶ್ರೀ ಭಾಷ್ಯಕಾರರು ಪ್ರಥಮೋಪಕಾರಿಗಳಾದರೂ, ಶ್ರೀ ಭಾಷ್ಯಕಾರರಿಂದಲೇ ಉಪದೇಶಿಸಲ್ಪಟ್ಟ ಭಾಷ್ಯಾರ್ಥಗಳ ಉಪಪಾದನೆಯನ್ನು ಪರಂಪರಯಾ ಒದಗಿಸಿಕೊಟ್ಟ ಶ್ರೀ ಸುದರ್ಶನ ಭಟ್ಟರು, ನಡಾದೂರಮ್ಮಾಳ್, ಶ್ರೀ ವಾದಿ ಹರಿಸಾಂಬುವಾಹರೇ ಮೊದಲಾದ ಪೂರ್ವಾಚಾರ್ಯರುಗಳನ್ನೂ ಸ್ಮರಿಸಿ ದವರಾಗಿ, ಮುಂದಿನ ಅಧಿಕಾರ ಸಂಗ್ರಹರೂಪವಾದ ಗಾಧಾಶ್ಲೋಕದಿಂದ ಪರಿಪೂರ್ಣಬ್ರಹ್ಮಾನುಭವವು—ಗುಣವಿಗ್ರಹ ವಿಭೂತ್ಯಾದಿ ವಿಶಿಷ್ಟನಾದ ಪರಬ್ರ ಹ್ಮನೇ ಪರಮಭೋಗ್ಯವೆಂಬನುಭವವೂ, ಮತ್ತು ಅದರ ಪರೀವಾಹವಾಗಿ ಆತನಿಗೆ ಸರ್ವವಿಧ ಕೈಙ್ಕರ್ಯ ಮಾಡೋಣವೂ, ಮತ್ತು ಅವರಲ್ಲಿ ನಿರತಿಶಯ ಶ್ರದ್ಧೆಯೂ ಎಂದೂ, ಆದಕ್ಕೆ ಎಂದಿಗೂ ಚ್ಯುತಿ ಇಲ್ಲದಿರುವದರಿಂದ ಶಾಶ್ವತವಾದುದೆಂವೂ ಹೇಳುವದರೊಂದಿಗೆ, ಅಲ್ಲಿಯೂ ಕೂಡ ಭಗವತ್ಕೈಙ್ಕರ್ಯವೂ ಇಂತಹ ಆಚಾರ್ಯರ ಕೈಙ್ಕರ್ಯ ಪರ್ಯನ್ತವಾದುದೆಂದು ತಿಳಿಸುತ್ತಾರೆ :—

ಅರ್ಥ - ಎಳಿಲ್‌ಪದಂ - ಸರ್ವಾಭೀಷ್ಟವರ್ಧಕವಾದ ಸ್ಥಾನವು ಎಂದರೆ ಪರಮಪದವನ್ನು, ಏರಿ - ಅರ್ಚಿರಾದಿಗತಿಯ ಮೂಲಕ ಆರೋಹಣಮಾಡಿ, ಹತ್ತಿ, ಎಲ್ಲಾ ಉಯಿರ್ಕ್ಕುಮ್ - ಎಲ್ಲಾ ಚೇತನರಿಗೂ, ಯಿತಮುಕಕ್ಕುವನ್ - ಪರಮಹಿತವನ್ನು ದಯಪಾಲಿಸುವನಾದ, ನಾರು ತುಳಾಯ್ ಮುಡಿ ನಾಥನ್ನೈ - ಸುಗಂಧವುಳ್ಳ ತುಳಸಿಯ ಮಾಲೆಯನ್ನು ಕಿರೀಟದಲ್ಲಿ ಧರಿಸಿರುವ ಸ್ವಾಮಿಯನ್ನು, ನಣ್ಣಿ - ಸಮೀಪಿಸಿ, ಸೇರಿ, ಅಡಿಮೈಯಿಲ್ - ಕೈಙ್ಕರ್ಯದಲ್ಲಿ, ನಮ್‌ಕೂರು ಕವರ್‌ನ್ದ - ನಮಗೆ ಸೇರಿದ ಅಂಶವನ್ನು ಎಂದರೆ ಇಷ್ಟು ದಿನವೂ ಅನುಭವಿಸದೇ ಬಿಟ್ಟು ಹೋದ ಭಾಗವುಂಟಾಗಬೇಕೆಂದಪೇಕ್ಷಿಸಿದ, ಕುರುಕ್ಕಳ್ - ಗುರುಗಳ,

**ಕೆಳಾಙ್ಗಳ್** - ಸಮೂಹಗಳ, **ಕುರ್ರೈಕಳಲ್ ಕೀಳ್ ಕುರ್ರೈ** ಎಂದರೆ ಕಾಲಂದಿಗೆ ಯಿಂದಲೂ ಅದರ ಶಬ್ದದಿಂದಲೂ ಸೇರಿಸಿ ಪಾದಗಳ ಕೆಳಗೆ, **ಮಾರುದಲಿನ್ರಿ** - ವಿಚ್ಛೇದವಿಲ್ಲದಹಾಗೆ ಎಂದರೆ ಎಂದಿಗೂ ಪುನರಾವರ್ತ್ತಿ ಇಲ್ಲದಹಾಗೆ, **ಮಕಿಳಿನ್ದು**- ಪರಿಪೂರ್ಣಬ್ರಹ್ಮಾನುಭವದಿಂದ ನಿರತಿಶಯಾನಂದಯುಕ್ತರಾಗಿ, **ಎಳುಮ್ ಪೋಗತ್ತು** - ಮೇಲೆ ಮೇಲೆ ವೃದ್ಧಿ ಹೊಂದುವ ಕೈಙ್ಕರ್ಯ ಸಾಮ್ರಾಜ್ಯರೂಪವಾದ ಭೋಗದಲ್ಲಿ, **ಮನ್ನುವರ್ನೋ**-ದೃಢವಾಗಿ, ಶಾಶ್ವತವಾಗಿ ಎಂದಿಗೂ ಪುನರಾವೃತ್ತಿ ಯಿಲ್ಲದ ಹಾಗೆ, ಪ್ರತಿಷ್ಠಿತರಾಗುವೆವು

ತಾತ್ಪರ್ಯ—ಪ್ರಾಪ್ಯನಿಗೇನೇ ಪ್ರಾಪಕ ಭಾವವು ಸಲ್ಲತಕ್ಕದ್ದೆಂಬಭಿಪ್ರಾಯ ವನ್ನು ಪ್ರದರ್ಶಿಸುವರಾಗಿ, ಪ್ರಾಪ್ತಿ ಫಲದಲ್ಲಿ ನಿರತಿಶಯಪ್ರಿಯರೂಪವಾದ ಪರಿ ಪೂರ್ಣಬ್ರಹ್ಮಾನುಭವದ ಪರೀವಾಹರೂಪವಾದ ಕೈಙ್ಕರ್ಯವು, ಸ್ವಾಚಾರ್ಯ ಪರ್ಯಂತ ವಾದುದು ಎಂದು ತಿಳಿಸುತ್ತಾರೆ. ಇದು ಶಬರೀವೃತ್ತಾಂತದಿಂದ ಸುವ್ಯಕ್ತವು. ಪರಮ ಭಾಗವತಳಾದ "**ಸಂಶಿತವ್ರತ**" ಳಾದ ತಾಪಸಿಯಾದ ಶಬರಿಯು ಶ್ರೀ ರಾಮನನ್ನು ಕಂಡು ಧನ್ಯಳಾಗಿ "**ಚಕ್ಷುಷಾ ತವ ಸೌಮ್ಯೇನ ಪೂತಾಸ್ಮಿ ರಘು ನಂದನ । ಗಮಿಷ್ಯಾಮ್ಯಕ್ಷಯಾನ್ ಲೋಕಾಂಸ್ತ್ವತ್ಪ್ರಸಾದಾದರಿಂದಮ**" "ಓ ರಘುಕುಲೋತ್ಪನ್ನನೇ ನಿನ್ನ ಕೃಪಾಸೂಚಕವಾಗಿ ತಂಪಾಗಿರುವ ಕಟಾಕ್ಷ ದಿಂದ ದಾಸಳಾದ ನಾನು ಪರಿಶುದ್ಧಳಾದೆನು. ಸರ್ವ ಪಾಪಗಳಿಂದಲೂ ಬಿಡುಗಡೆ ಯನ್ನು ಹೊಂದಿದೆನು, ಇನ್ನು ಪುನರಾವೃತ್ತಿಯಿಲ್ಲದ ದಿವ್ಯ ವೈಕುಂಠವನ್ನು ಹೊಂದುವೆನು." ಎಂದು ಹೇಳಿಕೊಂಡಿರುತ್ತಾಳೆ. ಉಕ್ತಿ ಪ್ರತ್ಯುಕ್ತಿಗಳು ನಡೆದ ನಂತರ ಶ್ರೀರಾಮನನ್ನು ಶಬರಿಯು ಪ್ರಾರ್ಥಿಸುವಳು :—ಅದು ಹೇಗೆಂದರೆ—(೧) "**ತೇಷಾಮಿಚ್ಛಾಮ್ಯಹಂಗಂತುಂ ಸಮೀಪಂ ಭಾವಿತಾ ತ್ಮನಾಂ । ಮುನೀನಾಮಾಶ್ರಮೋ ಯೇಷಾ ಮಹಂ ಚ ಪರಿಚಾರಿಣೀ**" ಇದು ಯಾವ ಮಹರ್ಷಿಯಾದವರ ಆಶ್ರಮವೋ, ಯಾವ ಋಷಿಗೆ ನಾನು ಪರಿಚರ್ಯೆ ಯನ್ನು ಮಾಡುವ ದಾಸಿಯೋ, ಅಂತಹ ಬ್ರಹ್ಮನಿಷ್ಠರಾಗಿ ಜ್ಞಾನಿಗಳಾದ ಮತಂಗ ಮಹರ್ಷಿಗಳಿರುವ ದಿವ್ಯ ವೈಕುಂಠವನ್ನು ಕುರಿತು ಹೋಗಲಪೇಕ್ಷಿಸುವೆನೆಂದು ಕೇಳಿ ಕೊಂಡಿರುತ್ತಾಳೆ. ಇಂತಹ ಅತ್ಯಾಶ್ಚರ್ಯಕರವಾದ ಪ್ರಾರ್ಥನೆಗೆ ಶ್ರೀರಾಮನು ಮೆಚ್ಚಿ, ಯಾವ ಕೋಟಿಸೂರ್ಯ ಪ್ರಭೆಯಿಂದ ವಿರಾಜಿಸುತ್ತಿದ್ದ, ಮತ್ತು "**ಯತ್ರ ತೇ ಸುಕೃತಾತ್ಮನೋ ವಿಹರಂತಿ ಮಹರ್ಷಯಃ**" ಆ ಮತಂಗ ಮಹರ್ಷಿಗಳು ವಿಹರಿಸುತ್ತಿದ್ದ ಪರಮ ಪದವನ್ನು ಆ ಪರಮ ತಾಪಸಿಯು ಹೊಂದಿದಳು ಎಂದು

(೧) ರಾಮಾ. ಅರ. ೭೫. ೨೯.

ಹೇಳಿರುವದರಿಂದ ಮುಕ್ತನಿಗೂ ಕೂಡ ಭಗವತ್ಕೈಂಕರ್ಯವು ಭಾಗವತ ಕೈಂಕರ್ಯ ಪರ್ಯನ್ತವೆಂದು ಈ ಪಾಶುರದಿಂದ ಹೇಳಿ ಮುಕ್ತನಿಗೆ ಪರಿಪೂರ್ಣ ಬ್ರಹ್ಮಾನುಭವವೂ ಉಂಟು, ಅದರ ಪರೀವಾಹವಾಗಿ ಕೈಂಕರ್ಯವೂ ಉಂಟೆಂದು ತಿಳಿಸುತ್ತಾರೆ. "ಭಗವದ್ವಂದನಂ ಸ್ವಾದ್ಯಂ ಗುರುವಂದನ ಪೂರ್ವಕಂ। ಕ್ಷೀರಂ ಶರ್ಕರಯಾಯುಕ್ತಂ ಸ್ವದತೇಹಿ ವಿಶೇಷತಃ" ಹಾಲೇ ಸ್ವತಃ ಬಹು ರುಚಿಕರವಾಗಿದ್ದರೂ ಸಕ್ಕರೆಯಿಂದ ಸೇರಿದರೆ ಹಾಲು ಕೀರೆಂದೆನಿಸಿ ಹೇಗೆ ವಿಶೇಷ ಸ್ವಾದುವಾದುದಾಗುತ್ತದೋ ಹಾಗೆಯೇ ಭಗವತ್ಕೈಂಕರ್ಯವು ಭೋಗ್ಯವು. ಅದು ಭಾಗವತ ಕೈಂಕರ್ಯದಿಂದ ಮಿಳಿತವಾಗಿದ್ದರೆ ತನಗೂ ಸ್ವಾಮಿಗೂ ಸಹ ಇಲ್ಲಿ ಹೇಗೆ ಪರಮ ಭೋಗ್ಯವೋ ಹಾಗೆಯೇ ಅಲ್ಲಿಯೂ ಎಂಬ ಭಾವವು ದೇಹಾವಸಾನಾನಂತರ ಹೀಗೆ ಆಚಾರ್ಯ ಪಾದಮೂಲವೂ ಆಚಾರ್ಯ ಕೈಂಕರ್ಯವೂ ಪರಮಪದದಲ್ಲಿ ಸಿಕ್ಕುವದರಿಂದಲೇ ದೇಹಾವಸಾನವಾಗಿ ಮುಕ್ತಿಯನ್ನು ಹೊಂದಿದರೆಂದು ಹೇಳುವದಕ್ಕೆ ಬದಲಾಗಿ ಆಚಾರ್ಯತಿರುವಡಿಯನ್ನು ಸೇರಿದರೆಂದು ಹೇಳುವ ವಾಡಿಕೆಯುಂಟು. ಇಲ್ಲಿ ಪರಮ ಪದವು ಎಳಿಲ್ ಪದಮ್, ಅತ್ಯಂತ ಉಜ್ವಲವಾದ ಪದವೆಂದು ಹೇಳಿರುತ್ತಾರೆ. ಇದು ಸ್ವಯಂಪ್ರಕಾಶವಾದುದೆಂದು ಹಿಂದೆ ಉಪೋದ್ಘಾತಾಧಿಕಾರದಲ್ಲೂ ತತ್ವತ್ರಯಾಧಿಕಾರದಲ್ಲೂ ಉಪಪಾದಿತವಾಗಿರುತ್ತದೆ ಇವಕ್ಕೆ ಅನೇಕ ಶಾಸ್ತ್ರ ಪ್ರಮಾಣಗಳುಂಟು. ಅವುಗಳಲ್ಲಿ ಒಂದೆರಡನ್ನು ಸೂಚಿಸುವೆವು :—"ಆದಿತ್ಯವರ್ಣಂ ತಮಸಃ ಪರಸ್ತಾತ್", ಹಿರಣ್ಮಯೇ ಪರೇಲೋಕೇ" ಇಲ್ಲಿ ಪರಮಪದವು ಸುವರ್ಣದಹಾಗೆ ಪ್ರಕಾಶಮಾನವಾದುದೆಂದು ಹೇಳಲ್ಪಟ್ಟಿರುತ್ತದೆ ಹಾಗೆಯೇ ಇನ್ನೊಂದು ಕಡೆಯಲ್ಲಿ, "ದೇವಾಶ್ಚ ಯನ್ನ ಪಶ್ಯನ್ತಿ ದಿವ್ಯಂ ತೇಜೋ ಮಯಂ ಪದಂ। ಅತ್ಯರ್ಕಾನಲ ದೀಪ್ತಂ ತತ್ ಸ್ಥಾನಂ ವಿಷ್ಣೋರ್ಮಹಾತ್ಮನಃ" "ಆ ಮಹಾವಿಷ್ಣುವಿನ ಸ್ಥಾಪನವಾದ ಪರಮಪದವು ದಿವ್ಯ ತೇಜೋಮಯವಾದುದು; ಸೂರ್ಯಾಗ್ನಿಗಳ ತೇಜಸ್ಸುಗಳಿಗಿಂತ ಉಜ್ವಲವಾದುದು, ದೇವತೆಗಳು ಕೂಡ ತಮ್ಮ ಎವೆ ಇಲ್ಲದ ನೋಟದಿಂದ ಕಾಣಲಾರರು, ಅವರಿಗೂ ಕೂಡ ದುಶ್ಶಕವಾಗಿ ದುಸ್ತರವಾದುದೆಂದು ಹೇಳಲ್ಪಟ್ಟಿರುತ್ತದೆ. ಮತ್ತು, "ಸ್ವಯೈವ ಪ್ರಭಯಾ ರಾಜನ್ ದುಷ್ಪ್ರೇಕ್ಷಂ ದೇವದಾನವೈಃ" ಎಂಬುವ ಪ್ರಮಾಣವು ನಿತ್ಯ ವಿಭೂತಿಯು ಸ್ವಯಂಪ್ರಕಾಶವಾಗಿ ದೇವದಾನವರಿಂದಲೂ ನೋಡಲಸಾಧ್ಯವಾದುದೆಂದು ಸೂಚಿಸುತ್ತದೆ. ಉಪಾಯಾನುಷ್ಠಾನವನ್ನು ಮಾಡಿಸಿ ದೇಹಾವಸಾನಾನಂತರ ಅರ್ಚಿರಾದಿ ಗತಿಯ ಮೂಲಕ ಇಂತಹ ಪರಮಪದವನ್ನು ಹೊಂದಿಸುವವನು ಅವನೇ; "ಯ ಮೇವೈಷ ವೃಣುತೇ ತೇನಲಭ್ಯಃ" ಎಂಬ ಶ್ರುತಿಯಲ್ಲಿ ಉಪಪಾದಿಸಿರುವ ಹಾಗೆ ಆತನೇ ಪ್ರಾಪಕನೂ, ಆತನೇ ಪ್ರಾಪ್ಯನೂ ಎಂದು ತಿಳಿಸುವದಕ್ಕಾಗಿ,

ಎಲ್ಲಾ ಉಯಿರ್ಕ್ಕುಂ, ಹಿತಮುಕಕ್ಕುಮ್ ಎಂದು ಪ್ರಯೋಗಿಸಿರುತ್ತಾರೆ. ಸಮಸ್ತ ಚೇತನರೂ ಸ್ವಾಮಿಯಿಂದ ಕರ್ಮಾನುಸಾರ ಕೊಡಲ್ಪಟ್ಟ ಕರಣಕಳೇಬರ ಯೋಗದಿಂದ, ಸುಕೃತವನ್ನು ಸಂಪಾದಿಸಿಕೊಂಡು ಉಪಾಯಾನುಷ್ಠಾನವನ್ನು ಮಾಡಬಹುದು. "ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾ ಚ ತೇ । ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಮ್ ಮಮ" ಎಂದು ಹೇಳಿರುವ ಮೇರೆಗೆ ಸಕಲರಿಗೂ ಉಪಾಯಾನುಷ್ಠಾನ ಮೂಲಕ ಮುಕ್ತಿಯನ್ನಿತ್ತು ಕಾಪಾಡುವವನು "ಸರ್ವಸ್ಯ ಶರಣಂ ಸುಹೃತ್" ಸಮಸ್ತರಿಗೂ ಉಪಾಯಭೂತನು ಎಂದೂ ಹಾಗೆಯೇ "ಸಮೋಽಹಂ ಸರ್ವಭೂತೇಷು" ಎಂದೂ ಹೇಳಲ್ಪಟ್ಟಿರುತ್ತದೆ. ಆದರೆ ಕೆಲವರು ನಿತ್ಯಸಂಸಾರಿಗಳಾಗಿಯೇ ಇರುತ್ತಾರಲ್ಲಾ ಅದು ಹೇಗೆ ಎಂದರೆ ಅವರುಗಳು ಕರ್ಮಪ್ರಾಬಲ್ಯದಿಂದ ಉಪಾಯಾನುಷ್ಠಾನಮಾಡಲು ಅಶಕ್ತರುಗಳಾಗಿಯೇ ಆಗುವದರಿಂದ ಎಂದು ಭಾವಿಸತಕ್ಕದ್ದು. ಆದರೆ ಸರ್ವೇಶ್ವರನೇನೋ ಸಮಸ್ತರ ವಿಷಯದಲ್ಲೂ ತನ್ನನ್ನಾಶ್ರಯಿಸಿದರೆ ಸಾಕೆಂದು ಅವಸರ ಪ್ರತೀಕ್ಷೆಯನ್ನು ಮಾಡುತ್ತಲಿರುವನು. ಆದುದರಿಂದಲೇ ಹಿತಮುಕಕ್ಕುಮ್ ಎಂಬ ಪ್ರಯೋಗವು. ಸ್ವಲ್ಪ ವ್ಯಾಜದಿಂದಲೇ ಆತನು ತೃಪ್ತನಾಗಿ ಈತನಿಗೆ ಹಿತವನ್ನುಂಟುಮಾಡುವನು "ಕಥಂ ಚಿದುಪಕಾರೇಣ ಕೃತೇನೈಕೇನ ತುಷ್ಯತಿ" ಎಂಬ, ಮಹರ್ಷಿಯ ಉಕ್ತಿಯುಂಟು. "ಅಣ್ವಪ್ಯುಪಾಹೃತಂ ಭಕ್ತೈಃ ಪ್ರೇಮ್ಣಾ ಭೂರ್ಯೇವ ಮೇ ಭವೇತ್" ಭಕ್ತರಿಂದ ಅಲ್ಪ ಸ್ವಲ್ಪವಾಗಿ ತರಲ್ಪಟ್ಟಿದ್ದೂ ಕೂಡ ತನಗೆ ಪ್ರೀತ್ಯತಿಶಯದಿಂದ ಅನಂತವಾಗುತ್ತದೆಂದು ಶ್ರೀ ಕೃಷ್ಣನು ಪರಮಭಾಗವತನಾದ ಕುಚೇಲನಿಗೆ ಹೇಳಿರುತ್ತಾನೆ.

ಕೊರ್ಕಪರ್ಸ್ಪ - ನಾವೆಲ್ಲರೂ ಲೋಕಪಿತಾವಿಗೆ ಪ್ರಜೆಗಳು, ಆದುದರಿಂದ ನಮಗೆ ಪಿತೃತಕ್ಕ ದಾಯ ಭಾಗವಾದ ಪುರುಷಾರ್ಥವನ್ನು ನಮಗಾಗಿ ಇಟ್ಟಿರುತ್ತಾನೆ ಆ ಅಂಶವು ಯಾವುದೆಂದರೆ ಆತನ ಎಲ್ಲಾ ವಿಭೂತಿಯನ್ನೂ ನಾವು ಅನುಭವಿಸೋಣವು. ಆತನು ಪರಿಪೂರ್ಣ ವಿಭೂತಿ ವಿಶಿಷ್ಟನೆಂದು ತಿಳಿಸುವದಕ್ಕಾಗಿ ನಾರ್ ತುಳಾಯ್‌ಮುಡಿನಾತ ನೆಂದು ಪ್ರಯೋಗಿಸಿರುತ್ತಾರೆ. "ಸರ್ವಗಂಧಸ್ಸರ್ವ ರಸ" ನೆಂಬ ಭಾವವು ನಾರ್‌ತುಳಾಯ್ ಎಂಬುವದರಿಂದ ತೋರಿ ಬರುತ್ತದೆ ಮುಡಿನಾತ ನೆಂಬ ಪ್ರಯೋಗದಿಂದ, ಉಭಯ ವಿಭೂತಿ ನಾಯಕನಾಗಿ ಮಕುಟಧಾರಿಯಾಗಿ ಆತನು ರಾಜಾಧಿರಾಜನಾದ ಸರ್ವಶೇಷಿ ಎಂಬ ಭಿಪ್ರಾಯವು ಸೂಚಿಸಲ್ಪಟ್ಟಿತು. ಆದುದರಿಂದ ಈ ಅನುಭವವು ಪರಿಪೂರ್ಣ ಬ್ರಹ್ಮಾನುಭವವೆಂದು ಹೇಳಿದಂತಾಯಿತು ಇಷ್ಟುಮಾತ್ರವೇ ನಮ್ಮ ದಾಯ ಭಾಗವಲ್ಲವು; ಅಡಿಮೈಯಿಲ್ ಕೂಡ ಎಂದರೆ ಕೈಙ್ಕರ್ಯಸಾಮ್ರಾಜ್ಯದಲ್ಲೂ ಕೂಡ

ನಮ್ಮ ಭಾಗ ಉಂಟೆಂದು ತಿಳಿಸುತ್ತಾರೆ. ನಮಗೆ ಶ್ರೀ ಹರಿಕೃಪಯಾ ಪ್ರಾಪ್ತವಾಗುವ ಮೋಕ್ಷದಲ್ಲಿ ಬರೀ ಅನುಭವಮಾತ್ರವೇ ಅಲ್ಲವು, ಭಗವತ್ಕೈಙ್ಕರ್ಯದಲ್ಲೂ, ನಮಗೆ ಅಂಶವುಂಟೆಂದು ತಿಳಿಸುವುದಕ್ಕಾಗಿ, "ಅಡಿಮೈಯಿಲ್ ನಂಕೂರು ಕವರ್ನ್ದು" ಎಂದು ಪ್ರಯೋಗಿಸಿರುತ್ತಾರೆ.

ಹೀಗೆ ನಮ್ಮ ದಾಯಭಾಗವಾದ ಪರಿಪೂರ್ಣಬ್ರಹ್ಮಾನುಭವ ಕೈಙ್ಕರ್ಯ ಪ್ರಾಪ್ತಿಗಳು ನಮಗೆ ಪ್ರಾಪ್ತವಾಗುವದು "ದೇಶಿಕೋಮೋದಯಾಳುಃ" ಎಂದು ಹೇಳಿರುವ ಹಾಗೆ ನಮ್ಮ ಗುರುಗಳ ಪರಮಕೃಪೌದಾರ್ಯ ಮಾಹಾತ್ಮ್ಯೆಯ ಪ್ರಭಾವವು. ಆದುದರಿಂದ ಅಂತಹ ಕೃಪಾಶಾಲಿಗಳಾದ ಗುರುಗಳು ತಮ್ಮ ಶಿಷ್ಯರಿಗೆ ಇಂತಹ ಪರಮಶ್ರೇಯಸ್ಸು ಉಂಟಾಯಿತೇ, ನಾವು ಅವರುಗಳಿಗಾಗಿ ಮಾಡಿದ ಮಹತ್ತಾದ ಯತ್ನವು ಫಲಿಸಿತೇ, ಎಂದು ಪರಮಾನಂದಭರಿತರಾಗುವಂತವರು ಎಂದು ತಿಳಿಸುವುದಕ್ಕಾಗಿ "ಕವರ್ನ್ದ ಕುರುಕ್ಕಳ್" ಎಂದು ಪ್ರಯೋಗಿಸಿರುತ್ತಾರೆ. ಇಂತಹ ಪರಿಪೂರ್ಣಬ್ರಹ್ಮಾನುಭವದ ಪರೀವಾಹರೂಪವಾದ ಕೈಙ್ಕರ್ಯವನ್ನು ಶ್ರಿಯಃಪತಿಗೆ ಮಾತ್ರವೇ ಅಲ್ಲದೆ, ತಮ್ಮ ಪುರುಷಕಾರದ ಪ್ರಭಾವದಿಂದ ನಮಗೂ ಸಹ ಸ್ಥಿರಪಡಿಸಿದುದರಿಂದ, ಅಂತಹ ಗುರುಗಳ ಪಾದಮೂಲವನ್ನು ಹೊಂದಿ ಅವರಿಗೂ ಸಹ ಕೈಙ್ಕರ್ಯವನ್ನೆಸಗುವ ನಿರತಿಶಯಾನಂದವನ್ನು ಸ್ಥಿರವಾಗಿ ಹೊಂದುವೆವು ಎಂದು ಎಳುಮ್ ಭೋಗತ್ತು ಮನ್ನುವಮೇ ಎಂಬುವುದರಿಂದ ತಿಳಿಸುತ್ತಾರೆ. ಆ ಗುರುಗಳ ಪಾದಮೂಲವೆಂಥಾದ್ದೆಂದರೆ, ಪರೈ ಕಳರ್ ಕೀಳ್-ಮಂಜೀರ (ಕಾಲಂದಿಗೆಯ) ಶಬ್ದವಿಶಿಷ್ಟವಾದುದು. ಬಾಹ್ಯ ಕುದೃಷ್ಟಿಗಳ ಅಪಸಿದ್ಧಾನ್ತಗಳನ್ನೆಲ್ಲಾ ತಮ್ಮ ಸತ್ತರ್ಕದಿಂದ ಗೆದ್ದು, ಅವುಗಳನ್ನೆಲ್ಲಾ ತಮ್ಮ ವಾಮಪಾದದಿಂದ ನೆಲಕ್ಕುರುಳಿಸಿ ಅಂತಹ ವಾದವಾಗುವ ಕಾಲದಲ್ಲಿ ನ್ಯಾಯಾಧಿಪತಿಗಳಾಗಿ ನಿಂತ ರಾಜರುಗಳು ಅಂತವರ ಜಯಸೂಚಕವಾಗಿ ಕಾಲಿಗೆ ಸುವರ್ಣಾಭರಣವನ್ನು ಪಾರಿತೋಷಕವಾಗಿ ಕೊಟ್ಟರೆಂಬಭಿಪ್ರಾಯವನ್ನು ತಿಳಿಸುವ ಹಾಗೆ ಈ ಗುರುಗಳ ಪಾದಾರವಿಂದಗಳು ಗಲ್‌ಗಲ್ ಎಂದು ವಿಮತ ನಿರಸನ ಜಯಧ್ವನಿಯನ್ನೇನಾದರೂ ಅನುಕರಿಸುತ್ತವೋ ಎಂಬಭಿಪ್ರಾಯವನ್ನು ತೋರಿಸಿರುತ್ತಾರೆ. ಹಾಗೆಯೇ ಸಙ್ಕಲ್ಪಸೂರ್ಯೋದಯದಲ್ಲಿ ಉಪಪಾದಿತವಾಗಿರುತ್ತದೆ. ಅಲ್ಲಿ ಶಿಷ್ಯರು (ತಾವೇ) ಕುವಾದಿಗಳನ್ನೆಲ್ಲಾ ವಾದದಲ್ಲಿ ಗೆದ್ದುದರಿಂದ ಗುರುವು (ಯತೀಂದ್ರರು) ರಾಜನೂ ಸಹ ಸಂತುಷ್ಟರಾಗಿ ಕಾಲಂದಿಗೆಯನ್ನು ಪಾರಿತೋಷಿಕವಾಗಿ ದಯಪಾಲಿಸಿರುತ್ತಾರೆಂದು ಈ ಮುಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ.

"ತ್ರಯ್ಯನ್ತಸ್ಥಾಪಕೋಽಯಂ ದೃಢತರ ಮಮುನಾ ತತ್ಕುದೃಷ್ಟಿಷ್ಕ ದಿಷ್ಟ್ಯಾ ।
ದಿಷ್ಟ್ಯೈಷಾದಿಷ್ಟ ಮೇ ತದ್ದಿಶಿದಿಶಿ ಲಡಹೋಡಿಂಡಿಮಸ್ತಾಡನೀಯಃ ।

**ಅವಿಶ್ರಾಂತ ಶ್ರದ್ಧಾ ಶತಕಲಹ ಕಲ್ಲೋಲ (ವಿಷಮಾ) ಕಲುಷಾ ।**
**ಮಮಾವಿರ್ಭೂಯಾಸು ರ್ಮನಸಿ ಮುನಿ ಸಿದ್ಧಾದಿ ಸುಲಭಾಃ ॥**

---

**"ಶುಷ್ಕೋಪನ್ಯಾಸ ಶಿಕ್ಷಾಪಟುಕಟು ರಟದ್ವೈರಿ ವಿದ್ವತ್ಕರೋಟೇ ।**
**ಕುಟ್ಯಾಕ ಕ್ರೀಡ ಮಷ್ಟಾಪದ ಕಟಕ ಮಸೌವಾಮಪಾದೇ ಬಿಭರ್ತು ॥"**
**(ಸಙ್ಕಲ್ಪ ಸೂರ್ಯೋದಯ ೧೧೧.)**

ಇದನ್ನೆಲ್ಲಾ ಮನಸ್ಸಿನಲ್ಲಿಟ್ಟೇ **ಕುರೈಕಳಲ್ ಕೀಳೆ** ಎಂಬುದರಿಂದ ಪರಮ ಪದದಲ್ಲಿ ಭಾಗವತ ಕೈಙ್ಕರ್ಯ ಪರ್ಯನ್ತವಾದ ಭಗವತ್ಕೈಙ್ಕರ್ಯಕ್ಕೆ ವಿಚ್ಛೇದವೆಂದಿಗೂ ಇಲ್ಲವೆಂದು, **ಮಾರುದಲಿನ್ರಿ** ಎಂಬುದರಿಂದ ಉಪದೇಶಿಸಿರುತ್ತಾರೆ. ಆದುದರಿಂದ ಮುಕ್ತನಿಗೆ ಪರಿಪೂರ್ಣ ಬ್ರಹ್ಮಾನುಭವವೂ ಉಂಟು, ಕೈಙ್ಕರ್ಯವೂ ಉಂಟು. ಆ ಕೈಙ್ಕರ್ಯವು ತನ್ನ ಆಚಾರ್ಯಪರ್ಯನ್ತವೂ ತನ್ಮೂಲಕ ಸರ್ವ ಭಾಗವತ ಪರ್ಯನ್ತವಾದುದೆಂದು ತಿಳಿಯತಕ್ಕದ್ದು.

ಈ ಅಧಿಕಾರದಲ್ಲಿ ಮುಕ್ತನಿಗೆ ಪರಮ ಪದದಲ್ಲಿ ಪ್ರಾಪ್ತವಾಗುವ ಪುರುಷಾರ್ಥನಿರ್ಣಯವೆಂಥಾದ್ದೆಂದು ಸ್ಥಾಪಿಸಲ್ಪಟ್ಟ ನಂತರ, ಆದರಲ್ಲಿ ತುಂಬಾ ಶ್ರದ್ಧೆಯೂ ತ್ವರಾತಿಶಯವೂ ಉಂಟಾಗಿ, **ಅಂತಹ** ಪುರುಷಾರ್ಥರೂಪವಾದ ಪರಿಪೂರ್ಣಬ್ರಹ್ಮಾನುಭವವೂ, ಅದರ ಪರೀವಾಹರೂಪವಾದ ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ಸರ್ವವಿಧ ಭಗವತ್ಕೈಙ್ಕರ್ಯಗಳೂ ಕೂಡ ಇಲ್ಲಿ ತಮ್ಮ ಮನಸ್ಸಿನಲ್ಲಿ ಪ್ರತ್ಯಕ್ಷವಾಗಿ ಆವಿರ್ಭವಿಸಲಿ ಎಂದು ಪ್ರಾರ್ಥಿಸುತ್ತಾರೆ.

ಅರ್ಥ—**ಅವಿಶ್ರಾಂತ ಶ್ರದ್ಧಾಶತ ಕಲಹ ಕಲ್ಲೋಲ ಕಲುಷಾಃ**, ಇದು ಮುಂದೆ **ಬ್ರಹ್ಮಾನುಭವ ಪರಿವಾಹಾಃ** ಎಂಬುದರಲ್ಲಿ ತೋರಿಬರುವ ಕೈಙ್ಕರ್ಯ ವಿಶೇಷಗಳಿಗೆ ವಿಶೇಷಣವು. ಆ ಕೈಙ್ಕರ್ಯಗಳು ಎಂಥಾವೆಂದರೆ, **ಅವಿಶ್ರಾಂತ**-ವಿಶ್ರಾಂತಿಯೇ ಇಲ್ಲದಹಾಗೆ, ಇದನ್ನು ಶ್ರದ್ಧಾಶತಕ್ಕಾಗಲಿ, ಕಲಹಕ್ಕಾಗಲಿ ಅನ್ವಯಿಸಬಹುದು, **ಶ್ರದ್ಧಾಶತ-"ಶ್ರದ್ಧಾಸಂಪ್ರತ್ಯಯಸ್ಸ್ಪೃಹಾ"** ಎಂದು ಅಮರವಿರುವದರಿಂದ ತಾವು ಮಾಡುವ ಕೈಙ್ಕರ್ಯವು ಭಕ್ತಿಪುರಸ್ಸರವಾಗಿ ಚನ್ನಾಗಿ ನಡೆಯಬೇಕೆಂಬ ಕುತೂಹಲಕ್ಕೆ ಶ್ರದ್ಧಾ ಎಂದು ಹೆಸರು, ಇಂತಹ ಕೈಙ್ಕರ್ಯವನ್ನು ನಾನು ಮಾಡಬೇಕು, ನಾನು ಮಾಡಬೇಕೆಂಬ ಅನೇಕ ಮುಕ್ತರ ಮೂಲಕ ಉಂಟಾದ ಶ್ರದ್ಧಾಶತಗಳ, ಅಥವಾ ಒಬ್ಬೊಬ್ಬರು **"ಅಹಂ ಸರ್ವಂ ಕರಿಷ್ಯಾಮಿ, ಅಹಂ ಸರ್ವಂ ಕರಿಷ್ಯಾಮಿ"** ಎಂಬ ಕುತೂಹಲವಾಗಲಿ ಆಗಬಹುದು. **ಇಂತಹ** ಶ್ರದ್ಧಾಶತದಿಂದುಂಟಾದ, **ಕಲಹ**-ಪರಸ್ಪರ ಸ್ಪರ್ಧೆಯ, **ಕಲ್ಲೋಲ ಮೇಲೆ**

ಮಧುಕ್ಷೀರನ್ಯಾಯ ಸ್ವಗುಣ ವಿಭವಾ ಸಂಜನ ಕನನ್ ।
ಮಹಾನಂದ ಬ್ರಹ್ಮಾನುಭವ ಪರಿವಾಹಾ ಬಹುವಿಧಾಃ ॥೪೯॥

ಇತಿ ಕವಿತಾರ್ಕಿಕಸಿಂಹಸ್ಯ ಸರ್ವತಂತ್ರಸ್ವತಂತ್ರಸ್ಯ
ಶ್ರೀಮದ್ವೇಙ್ಕಟ ನಾಥಸ್ಯ ಕೃತಿಷು ಶ್ರೀಮದ್ರಹಸ್ಯತ್ರಯಸಾರೇ
ಪರಿಪೂರ್ಣ ಬ್ರಹ್ಮಾನುಭವಾಧಿಕಾರೋ ದ್ವಾವಿಂಶಃ.

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ.

---

ಮೇಲೆನಿರಂತರವಾಗಿ ಉಕ್ಕಿಬರುವ ತರಂಗಗಳಿಂದ, ಕಲುಷಾಃ-ನೀರು ಹೇಗೆ ಚಲನೆಯಿಂದ ಸ್ವಚ್ಛವಲ್ಲದಹಾಗೆ ತೋರುತ್ತದೋ ಹಾಗೆ ವೇಗದಿಂದ ವಿಪರೀತವಾಗಿ ತೋರುವುವುಗಳಾದ, (ಕೈಙ್ಕರ್ಯಗಳು), ವಿಷಮಾಃ-ಎಂಬುದು ಪಾಠಾಂತರವು, ಆಗ, ವ್ಯತ್ಯಸ್ತವಾಗಿ ತೋರುವವುಗಳಾದ ಎಂಬರ್ಥವಾಗುತ್ತದೆ ಇನ್ನೂ ಎಂಥಾವುಗಳೆಂದರೆ, ಮುನಿಸಿದ್ಧಾದಿ ಸುಲಭಾಃ. ಮುನಿ - ಪರಾಶರ, ವ್ಯಾಸ, ಶುಕ ಮೊದಲಾದ ಮುನಿಗಳೇನು, ಸಿದ್ಧ - ನಿತ್ಯರಾದ ಅನಂತ ಗರುಡ ವಿಷ್ವಕ್ಸೇನಾದಿಗಳೇನು ಆದಿ ಶಬ್ದದಿಂದ ನಮ್ಮಾಳ್ವಾರ್ ಮೊದಲಾದ ಆಳ್ವಾರಾಚಾರ್ಯ ಪ್ರಭೃತಿಗಳೇನು ಇವರುಗಳಿಗೆ, ಸುಲಭಾಃ, ಸುಖಲಬ್ಧಾಃ-ಸುಖದಿಂದ ಲಭಿಸುವಂತವುಗಳಾದ, ಮಧುಕ್ಷೀರನ್ಯಾಯ - ಜೇನುತುಪ್ಪವೂ ಹಾಲೂ ಬೆರೆತರೆ ಹೇಗೆ ಬಹು ಭೋಗ್ಯವಾದ ಸಮ್ಮೇಳನ ಉಂಟಾಗುತ್ತದೋ ಹಾಗೆ, ಸ್ವಗುಣ ವಿಭವ - ಪರಮಾತ್ಮನ ಕಲ್ಯಾಣಗುಣಗಳೇನು, ಉಭಯವಿಭೂತಿಯೇನು ಇವುಗಳ, ಆಸಂಜನ - ಸಮ್ಮೇಳನದಿಂದ, ಕನತ್- ದೇದೀಪ್ಯಮಾನನಾಗಿರುವ, ಮಹಾನಂದಬ್ರಹ್ಮ- ಇಷ್ಟೆಂದು ಅಳವಿಡಲು ಸಾಧ್ಯವಿಲ್ಲವೆಂದು ಶ್ರುತ್ಯುಪಪಾದ್ಯವಾದ ಆನಂದಮಯನಾದ ಪರಬ್ರಹ್ಮನ, ಅನುಭವ – ಅನುಭವದ, ಪರಿವಾಹಾಃ – ಪ್ರವಾಹರೂಪವಾದ ಕೈಙ್ಕರ್ಯಗಳು, ಬಹುವಿಧಾಃ - ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ಸರ್ವವಿಧ ಕೈಙ್ಕರ್ಯಗಳಾಗಿ, ಮಮ ಮನಸಿ - ನನ್ನ ಮನಸ್ಸಿನಲ್ಲಿ, ಆವಿರ್ಭೂಯಾಸುಃ - ಆವಿರ್ಭವಿಸಲಿ, ಭಾಸಮಾನವಾದುವಾಗಲಿ, ಪ್ರಾಪ್ಯದಲ್ಲಿ ತ್ವರಾತಿಶಯವನ್ನುಂಟುಮಾಡಲಿ ಎಂಬ ಪ್ರಾರ್ಥನೆಯು. ಸ್ವಗುಣವಿಭವವೆಂಬುದಕ್ಕೆ ಸಾರದೀಪಿಕೆ, ಸಾರವಿವರಣೆ, ಸಾರಸಂಗ್ರಹ ವ್ಯಾಖ್ಯಾತೃಗಳು ಸ್ವಸ್ಯ ಎಂದರೆ ಸ್ವಸ್ವರೂಪಾವಿರ್ಭಾವ ಹೊಂದಿದ ಮುಕ್ತಾತ್ಮನ ಅಪಹತಪಾಪ್ಮತ್ವಾದಿಗುಣಗಳ ಸಂಪತ್ತಿನ ಆಸಂಜನವೆಂದು ಅರ್ಥಮಾಡಿರುತ್ತಾರೆ. ಸಾರಾಸ್ವಾದಿನಿ ಸಾರಪ್ರಕಾಶಿಕಾಯವರುಗಳ ವ್ಯಾಖ್ಯಾನವೇ ಸ್ವಾರಸ್ಯವಾದುದು.

ತಾತ್ಪರ್ಯ— ಈ ಅಧಿಕಾರದಲ್ಲಿ ಪರಿಪೂರ್ಣ ಬ್ರಹ್ಮಾನುಭವರೂಪಪ್ರಾಪ್ತಿಯ ಸ್ವರೂಪವೆಂಥಾದ್ದೆಂದು ಉಪಪಾದಿಸಲ್ಪಟ್ಟಿತು. ಈ ಪರಬ್ರಹ್ಮಾನುಭವವು ಗುಣ ವಿಭವೈಶ್ವರ್ಯಾದಿಗಳಿಂದ ಯುಕ್ತವಾದುದಾಗಿ ಪರಿಪೂರ್ಣನಾದ ಪರಬ್ರಹ್ಮನ ಅನುಭವನೆಂದೂ ಹೇಳಲ್ಪಟ್ಟಿತು ಅದು ಎಲ್ಲರಿಗೂ ಸಮನೆಂದೂ ಸಮರ್ಥಿಸಲ್ಪಟ್ಟಿತು ಅನಂತರ ಈ ಪರಿಪೂರ್ಣ ಬ್ರಹ್ಮಾನುಭವದ ಪರೀವಾಹವಾಗಿ ಸರ್ವವಿಧ ಕೈಙ್ಕರ್ಯಗಳ ಪ್ರಾಪ್ತಿಯೂ ಸಹ ಉಂಟಾಗುತ್ತದೆಂದು ಹೇಳಲ್ಪಟ್ಟಿತು. ಈ ಅಭಿಪ್ರಾಯಗಳನ್ನೆಲ್ಲಾ ಈ ಶ್ಲೋಕದಿಂದ ಸಙ್ಗ್ರಹಿಸುವರಾಗಿ ಇಂತಹ ಅಮೋಘರೂಪ ಪ್ರಾಪ್ತಿಯು ಮುಂದೆ ಲಭಿಸತಕ್ಕದಾದುದರಿಂದ ತತ್ಪ್ರಾಪ್ತಿಯಲ್ಲಿ ತ್ವರಾತಿಶಯವು ತಮ್ಮ ಮನಸ್ಸಿನಲ್ಲಿ ಜನಿಸಬೇಕಾಗಿ ಪ್ರಾರ್ಥಿಸುತ್ತಾರೆ.

ಈ ಪರಿಪೂರ್ಣಾನುಭವದಲ್ಲಿ ತಮಗೆ ಮುಖ್ಯವಾದಂಶವು ಮೂಲಮಂತ್ರದಲ್ಲೂ ದ್ವಯದಲ್ಲೂ ಇರುವ ನಾರಾಯಣಾಯ ಎಂಬ ಪದದ ವ್ಯಕ್ತ ಚತುರ್ಥಿಯಿಂದ ವ್ಯಕ್ತವಾಗುವ ಪರಮ ಪುರುಷನಿಗೆ ತಾವು ಮಾಡುವ ಕೈಙ್ಕರ್ಯಗಳು. ಇವು ಬಹುವಿಧಾಃ-ನಾನಾವಿಧವಾದುವೆಂದು ಹೇಳುತ್ತಾರೆ. ಛತ್ರವನ್ನು ಸಮರ್ಪಿಸುವದು, ವಾಲವ್ಯಜನವನ್ನು ಬೀಸುವದು, ಚಾಮರವನ್ನು ಹಾಕುವದು, ಸಾಮಗಾನದಿಂದ ಸ್ತೋತ್ರಮಾಡುವದು ಇತ್ಯಾದಿ ಸರ್ವವಿಧ ಕೈಙ್ಕರ್ಯಗಳು ಇಂತಹ ಕೈಙ್ಕರ್ಯಗಳನ್ನೆಲ್ಲಾ ಮಾಡಬೇಕೆಂಬ ಶ್ರದ್ಧೆಯೂ ತ್ವರೆಯೂ ನನ್ನ ಮನಸ್ಸಿನಲ್ಲಿ ಆವಿರ್ಭವಿಸಲೆಂದು ಪ್ರಾರ್ಥಿಸುತ್ತಾರೆ. ಈ ಕೈಙ್ಕರ್ಯಗಳೆಂತವೆಂದರೆ ಮೂರು ವಿಶೇಷಣಗಳಿಂದ ಪ್ರಶಂಸಿಸಿ ಹೇಳುತ್ತಾರೆ:—(೧) ಈ ಕೈಙ್ಕರ್ಯಗಳನ್ನು ಚೆನ್ನಾಗಿ ಮಾಡಬೇಕೆಂಬ ಅನವರತ ಕುತೂಹಲವು ಸರ್ವಮುಕ್ತರಿಗೂ ಉಂಟಾಗತಕ್ಕದ್ದು. ಒಂದು ಕೈಙ್ಕರ್ಯವನ್ನೆಸಗುವ ಕಾಲದಲ್ಲಿ ಇನ್ನೊಂದು ಕೈಙ್ಕರ್ಯವು ಮಹೋಪಕಾರಿಯಾದ ಪುರುಷೋತ್ತಮನಿಗೆ ಉಚಿತವೆಂದು ತೋರಬಹುದು. ಅಥವಾ ಅನೇಕರು ಅಂತಹ ಕೈಙ್ಕರ್ಯಗಳನ್ನು ಮಾಡಬೇಕೆಂಬ ಕುತೂಹಲವುಂಟಾಗಬಹುದು; ಆದುದರಿಂದ ಶ್ರದ್ಧಾಶತ ವೆಂದು ಹೇಳಲ್ಪಟ್ಟಿತು ಇಂತಹ ಶ್ರದ್ಧೆಯೂ, ಉತ್ಸಾಹವೂ, ಅದರಿಂದುಂಟಾದ ಸಡಗರವೂ ಆ ಪರಮಪದದಲ್ಲಿ ತೋರಿಬರುವದರಿಂದ ಅದನ್ನು ಕಲಹ ಶಬ್ದದಿಂದ ಇಲ್ಲಿ ವ್ಯಕ್ತಪಡಿಸಿರುತ್ತಾರೆ. ಅಥವಾ ಒಬ್ಬರಿಗಿಂತ ಒಬ್ಬರು ಉತ್ಕೃಷ್ಟವಾಗಿ ಕೈಙ್ಕರ್ಯ ನಡೆಸಬೇಕೆಂಬ ಸ್ಪರ್ಧಾರೂಪ ಕಲಹವೆಂದಾದರೂ ಆಗಬಹುದು. ಇಂತಹ ಕಲಹಗಳು ಗುಣರೂಪವಾದವೇ ವಿನಾ ದೋಷರೂಪವಾದವುಗಳಲ್ಲವು ಇಲ್ಲಿ ಈರ್ಷ್ಯಾಸೂಯೆಯಿಂದುಂಟಾಗುವ ಕಲಹವು ಇಲ್ಲವು. ಎಲ್ಲರೂ ಸರ್ವಜ್ಞರಾದುದರಿಂದ ಈರ್ಷ್ಯಾಸೂಯೆಗೆ ಬೇಕಾದ ಅಜ್ಞಾನವು ಅಲ್ಲಿಲ್ಲವು. ಇವುಗಳ ವಿಜೃಂಭಣೆಯೆಲ್ಲಾ ಈ ಲೋಕದಲ್ಲೇ ವಿನಾ ಪರಮ

ಪದದಲ್ಲಿಲ್ಲವು. ಈ ಸಡಗರಗಳೆಲ್ಲಾ ತರಂಗತರಂಗ ರೂಪದಲ್ಲಿ ಉಂಟಾಗಬಹು ದಾದುದರಿಂದ ಕಲ್ಲೋಲ ಶಬ್ದಪ್ರಯೋಗವು. ಇಂತಹ ಸಡಗರಪ್ರವಾಹದಿಂದ ವಿಷಮವಾದವುಗಳು, ವ್ಯತ್ಯಸ್ತವಾದವುಗಳೆಂದು ಹೇಳಿರುತ್ತಾರೆ. ಅಥವಾ ಒಂದು ಕೈಙ್ಕರ್ಯಕ್ಕಿಂತ ಇನ್ನೊಂದು ಕೈಙ್ಕರ್ಯ ವುಚಿತವೆಂದೂ ಉತ್ಕೃಷ್ಟವೆಂದೂ ತೋರ ಬಹುದಾಗಿ, ಇಂತಹ ಕಾಲುಷ್ಯಯುಕ್ತವಾದುವೆಂದು ತಿಳಿಸಿರುತ್ತಾರೆ. ಅಥವಾ ಆ ಕಾಲುಷ್ಯವೆಂಥಾದ್ದೆಂದರೆ ಈ ಕೈಙ್ಕರ್ಯಗಳಿಗೆ ನಾನು ಮುಂದೆ, ನಾನು ಮುಂದೆ ಎಂಬ ಕುತೂಹಲದಿಂದಾದರೂ ಉಂಟಾಗಬಹುದು ಎಂಬ ತಾತ್ಪರ್ಯವು.

(೨) ಮುನಿಸಿದ್ಧಾದಿ ಸುಲಭಾಃ ಎಂಬ ಎರಡನೆಯ ವಿಶೇಷಣದಿಂದ ಇವು ಯಾರಿಗೆ ಸುಲಭವಾಗಿ ಉಂಟಾಗುತ್ತದೆ, ಯಾರಿಗೆ ಸುಖಲಭ್ಯಾಃ ಸುಖ ವಾಗಿ ಕ್ಲೇಶವಿಲ್ಲದೆ ಉಂಟಾಗುತ್ತವೆ, ಎಂದರೆ, ಮುನಿಸಿದ್ಧಾದಿಗಳಿಗೆ ಎಂದು ಹೇಳು ತ್ತಾರೆ ಸನಕಾದಿ ಮುನಿಗಳಿಗೂ, ಅನಂತ ಗರುಡ ವಿಷ್ವಕ್ಸೇನಾದಿ ನಿತ್ಯರಿಗೂ, ಆದಿ ಶಬ್ದದಿಂದ ಪರಮಭಾಗವತೋತ್ತಮರಾಗಿ ಪ್ರಪನ್ನರಾಗಿ ಮುಕ್ತಿ ಹೊಂದಿ ದವರಿಗೂ ಇವು ಸುಲಭವು ಇತರ ಸಾಧಾರಣ ಜನಗಳಿಗೆ ಸುಲಭಸಾಧ್ಯವಲ್ಲ ವೆಂಬ ಭಾವವು. "ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ। ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ" ಎಂದು ಹೇಳಿರುವ ಹಾಗೆ ಅಂತಹ ಕೈಙ್ಕರ್ಯಗಳ ಪ್ರಾಪ್ತಿಯನ್ನು ಹೊಂದಿದವರು ಅತಿ ವಿರಳರೆಂಬ ಭಾವವು. ಇಂತಹ ಮುನಿಸಿದ್ಧಾದಿಗಳಿಗುಂಟಾದ ಪರಮನಿಶ್ರೇಯಸವಾದ ಭಗವ ತ್ಕೈಙ್ಕರ್ಯವನ್ನು ಮಾಡುವದರಲ್ಲಿ ತ್ವರಾತಿಶಯವೂ ಶ್ರದ್ಧೆಯೂ ನನ್ನ ಮನಸ್ಸಿನಲ್ಲಿ ಸ್ಥಿರವಾಗಿರಲಿ ಎಂದು ಪ್ರಾರ್ಥಿಸುತ್ತಾರೆ

(೩) ಇಲ್ಲಿ ನಮಗೆ ಪ್ರಾಪ್ತವಾಗುವ ಕೈಙ್ಕರ್ಯಗಳು ಉಪಾಧಿಯುಕ್ತವಾಗಿ ಅಷ್ಟು ಆನಂದಯುಕ್ತವಾದವಲ್ಲವು, ಆದರೆ ಕೆಲವು ಪ್ರಪನ್ನರು ಬಹು ಶ್ರದ್ಧೆ ಯಿಂದ ಇಲ್ಲೂ ಭಗವದ್ಭಾಗವತ ಕೈಙ್ಕರ್ಯಗಳನ್ನೆಸಗುವದನ್ನು ಕಂಡಿಲ್ಲವೇ ? ಅಂತಹ ಕೈಙ್ಕರ್ಯಗಳೇ ನಮಗೆ ಪ್ರಾಪ್ತವಾಗುವಂತವು, ಎಂದರೆ ಇವುಗಳಲ್ಲೂ ಪರಿಮಿತಿ ಇರುವದರಿಂದ ಅಂಥಾವಲ್ಲವೆಂದೂ ಅಲ್ಲಿ ಪ್ರಾಪ್ತವಾಗುವ ಕೈಙ್ಕರ್ಯಗಳು ನಿರತಿಶಯವಾದುದೆಂದೂ ಪರಿಪೂರ್ಣಬ್ರಹ್ಮಾನಂದಕ್ಕೆ ಸಮವಾದ ಆನಂದ ದಿಂದುಂಟಾದ ಪರೀವಾಹರೂಪವಾದುವು ಎಂದುಪದೇಶಿಸುತ್ತಾರೆ. ಅಧಿಕಾರಾದಿ ಶ್ಲೋಕದಲ್ಲಿ "ವಿಚಿತ್ರ ವಿಭೂತಿಕಂ ಪರಮಂ ಸಾಮ್ಯಂ ಭಜತಿ" ಹೀಗೆ ಪರಿ ಪೂರ್ಣಬ್ರಹ್ಮಾನುಭವವನ್ನು ಹೊಂದಿ ಪರಬ್ರಹ್ಮನೊಂದಿಗೆ ಸಮವಾದ ಆನಂದ ವನ್ನು ಹೊಂದುವನೆಂದು ಹೇಳಿದುದನ್ನೇ ಈ ಮೂರನೆಯ ವಿಶೇಷಣದಿಂದ ಉಪ ಪಾದಿಸಿ ಹೇಳುತ್ತಾರೆ. ಪರಿಪೂರ್ಣಬ್ರಹ್ಮಾನುಭವೆಂಬುವದನ್ನು ಮುಖ್ಯವಾಗಿ

ಈ ನಿಗಮನ ಸಙ್ಗ್ರಹಶ್ಲೋಕದಿಂದಲೂ ತಿಳಿಸುತ್ತಾರೆ. ಈ ಪರಬ್ರಹ್ಮಾನುಭವ ವೆಂಥಾದ್ದೆಂದರೆ:—**ಸ್ವಗುಣ ವಿಭವಾ ಸಂಜನ ಕೇನಸ್ಮಹಾನಂದರೂಪವಾ** ದುದು ಎಂದು ತಿಳಿಸುತ್ತಾರೆ. ತನ್ನ ಕಲ್ಯಾಣಗುಣ ಸಮೂಹವೇನು, ಉಭಯ ವಿಭೂತಿಯಿಂದ ಯುಕ್ತನಾಗಿರುವದೇನು, ಲೀಲಾವಿಭೂತಿಯ ಸೃಷ್ಟಿಸ್ಥಿತಿ ನಿಯಮ ನಾದಿಗಳೇನು, ನಿತ್ಯವಿಭೂತಿಯ ಸ್ಥಿತಿನಿಯಮನಾದಿಗಳೇನು, ಇಂತಹ ಸ್ವರೂಪ ರೂಪಗುಣವಿಭವೈಶ್ವರ್ಯಾದಿ ಸಕಲವಿಶೇಷಣಗಳಿಂದ ಯುಕ್ತನಾಗಿ ಕೋಟಿಸೂರ್ಯ ಪ್ರಕಾಶದಂತೆ ಜಾಜ್ವಲ್ಯಮಾನನಾಗಿ, **"ತಸ್ಯಭಾಸಾ ಸರ್ವಮಿದಂ ವಿಭಾತಿ"** ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಕಂಗೊಳಿಸುತ್ತಿರುವ **ಆನಂದಮಯನೆಂದು** ಶ್ರುತಿಯಲ್ಲಿ ಉಪಪಾದಿತನಾದ ಪರಬ್ರಹ್ಮನೆಂದು ಹೇಳಿರುತ್ತಾರೆ ಈ ಆನಂದವು ಮಹಾನಂದವೆಂದು ಹೇಳಲ್ಪಟ್ಟಿರುತ್ತದೆ ಏಕೆಂದರೆ, ಶ್ರುತಿಯು ಅದರ ಮೀಮಾಂಸಾ ಸಾಧ್ಯವೇ ಎಂದು ಯೋಚಿಸಿ ಹೇಳಲು ಹೊರಟು ಮನುಷ್ಯಾನಂದ ದಿಂದ ಬ್ರಹ್ಮಾನಂದವರೆಗೂ ಒಂದಕ್ಕಿಂತ ಒಂದು ನೂರರಷ್ಟು ಎಂದು ಹೇಳುತ್ತಾ ಹೋಗಿ ಕಡೆಗೂ ಪರಬ್ರಹ್ಮಾನಂದವಿಂಥಾದ್ದೆಂದು ಹೇಳಲು ಸಾಧ್ಯವಿಲ್ಲದೆ ಹೋಗಿ, **ಯತೋವಾಚೋ ನಿವರ್ತಂತೇ ಅಪ್ರಾಪ್ಯ ಮನಸಾಸಹ,** ವಾಕ್ಕು ಇಷ್ಟೆಂದು ಹೇಳಲಾರದು, ಮನಸ್ಸು ಇಷ್ಟೆಂದು ಊಹಿಸಲಾರದೆಂದು ಹೇಳಿ ಶ್ರುತಿಯು ವಿರಾಮ ಹೊಂದಿತೆಂದು ಹೇಳಲ್ಪಟ್ಟಿರುತ್ತದೆ. ಈ ಕಾರಣದಿಂದ ಮಹಿಮಾನಂದ ವೆಂಬ ಪ್ರಯೋಗವು. ಇಂತಹ ಆನಂದಸ್ವರೂಪನೂ ಆನಂದಗುಣಕನೂ ಆದ ಪರಬ್ರಹ್ಮನ ಅನುಭವವೆಂಬ ಭಾವವು. ಹೀಗೆ ಸ್ವಕೀಯವಾದ ಸ್ವರೂಪ ರೂಪಗುಣ ವಿಭವೈಶ್ವರ್ಯಾದಿ ವಿಶೇಷಣಗಳಿಂದ ಪರಿಪೂರ್ಣನಾದ ಪರಬ್ರಹ್ಮನ ಅನುಭವವು ಮುಕ್ತನಿಗೆ ಉಂಟಾಗುತ್ತದೆ. ಈ ಅನುಭವದ ಪರಿವಾಹರೂಪಗ ಳಾದವು ಕೈಂಕರ್ಯಗಳೆಂದು ಹೇಳಲ್ಪಟ್ಟವು ಆದರೆ ಈ ಪರಿಪೂರ್ಣನಾದ ಪರ ಬ್ರಹ್ಮನ ವಿಷಯದಲ್ಲಿ, ಕಲ್ಯಾಣಗುಣಗಣವೇ ಮೊದಲಾದ ವಿಶೇಷಣಗಳಿಂದ ಪರ ಬ್ರಹ್ಮನಿಗೆ ಉತ್ಕರ್ಷವೇ ಅಥವಾ ಪರಬ್ರಹ್ಮನಿಂದ ಅವುಗಳಿಗೆ ಉತ್ಕರ್ಷವೇ ಎಂಬ ಚರ್ಚೆಯಲ್ಲಿ ಎರಡೂ ಉತ್ಕೃಷ್ಟವಾದುದರಿಂದ ಎರಡರ ಆಸಂಜನವು ಸಮ್ಮೇಳನವು ಸರ್ವೋತ್ಕೃಷ್ಟತೆಗೆ ಕಾರಣವೆಂಬ ಭಾವವು. ಈ ಅಭಿಪ್ರಾಯ ವನ್ನು ವಿಶದೀಕರಿಸುವದಕ್ಕಾಗಿ ಮಧುಕ್ಷೀರನ್ಯಾಯ ದೃಷ್ಟಾಂತವನ್ನು ಕೊಟ್ಟಿರು ತ್ತಾರೆ. ಮಧುವೂ ಮಧುರವಾಗಿರುತ್ತದೆ, ಕ್ಷೀರವೂ ಮಧುರವಾಗಿರುತ್ತದೆ, ಇವೆರಡೂ ಬೆರತರೆ ಹೇಗೆ ಸರ್ವೋತ್ಕೃಷ್ಟ ರುಚಿಯು ಉಂಟಾಗಿ ಕ್ಷೀರ, ಮಧು ಇವುಗಳಿಗಿಂತಲೂ ಶ್ರೇಷ್ಠವಾದ ಭೋಗ್ಯವಸ್ತುವೆನಿಸುತ್ತದೋ ಹಾಗೆಯೇ ಕಲ್ಯಾಣಗುಣವಿಶೇಷಣಾದಿಗಳಿಂದ ಯುಕ್ತನಾದವನೇ ಪ್ರಾಪ್ಯನೆಂದೆಣಿಸಿ ಪರಮ

ಭೋಗ್ಯನಾಗುವನು ಎಂಬ ಭಾವವು. ಶರಣಾಗತನಿಗೆ ಆಶ್ರಯೋಪಯುಕ್ತವಾದ ಗುಣಗಳಿರುವದರಿಂದಲೇ ಆತನು ಆಶ್ರಯಿಸಲ್ಪಡುವನು ಇಲ್ಲದಿದ್ದರೆ ಯಾರೂ ಪರಬ್ರಹ್ಮನನ್ನು ಕಣ್ಣೆತ್ತಿನೋಡರು. ಈ ಮಧುಕ್ಷೀರ ದೃಷ್ಟಾಂತದಹಾಗೆ ಇನ್ನೂ ಇತರೆ ದೃಷ್ಟಾಂತಗಳನ್ನೂ ಮಹಾ ಜ್ಞಾನಿಗಳು ಕೊಟ್ಟಿರುತ್ತಾರೆ :—ಪುಷ್ಪ ಮತ್ತು ಪರಿಮಳ; ಪುಷ್ಪವೇ ರಮಣೀಯವಾಗಿ ಉತ್ಕೃಷ್ಟವಾದುದು ಅದರೊಂದಿಗೆ ದಿವ್ಯ ಪರಿಮಳವೂ ಸೇರಿದರೆ ಸರ್ವೋತ್ಕೃಷ್ಟವಾಗಿ ಪರಮಭೋಗ್ಯವಾದುದು ಹಾಗೆಯೇ ರತ್ನವು ಉತ್ಕೃಷ್ಟವಾದುದು, ಅದಕ್ಕೆ ಒಳ್ಳೇ ದೀಪ್ತಿಯು ಸೇರಿದರೆ ಇನ್ನೂ ಉತ್ಕೃಷ್ಟತೆಯನ್ನು ಹೊಂದಿ ಮಹಾರ್ಘವಾದುದಾಗುತ್ತದೆ. (ದಾಸನು ಬರೆದಿರುವ ಶ್ರೀಸ್ತುತಿಯ ೩೮ ನೆಯ ಪುಟ ನೋಡಿ.) ಬ್ರಾಹ್ಮಣನು ಶಮದಮಾದಿ ಗುಣಗಳಿಂದ ಉತ್ಕೃಷ್ಟತೆಯನ್ನು ಹೊಂದಿರುತ್ತಾನೆ ; ಕರ್ಮನಿಷ್ಠೆ ಜ್ಞಾನನಿಷ್ಠೆಗಳಿಂದ ಸೇರಿ ಮಹಾ ಬ್ರಹ್ಮಜ್ಞಾನಿಯಾದರೆ ಇನ್ನೂ ಉತ್ಕೃಷ್ಟತೆಯನ್ನು ಹೊಂದುವನಾಗುತ್ತಾನೆ. ಸರ್ವಲಾವಣ್ಯಯುಕ್ತಳಾದ ಸ್ತ್ರೀಗೆ ಮಹಾ ಪಾತಿವ್ರತ್ಯಾದಿ ಅಮೋಘಗುಣಗಳು ಸೇರಿದರೆ ಇನ್ನೂ ಸರ್ವೋತ್ಕೃಷ್ಟಳಾಗಿ ರಂಜಿಸುವಳು. ಹೀಗೆ ಧರ್ಮಧರ್ಮಿಗಳಿಗೆ ಪರಸ್ಪರ ಉತ್ಕರ್ಷತೆಯೂ, ಅವುಗಳ ಸಮ್ಮೇಳನದಿಂದ ಉತ್ಕರ್ಷಾಧಿಕ್ಯವೂ ಉಂಟೆಂದು ಹೇಳುವದಕ್ಕಾಗಿ ಶ್ರೀ ದೇಶಿಕರವರು ಅಸಂಜನಿಕ ಶಬ್ದವನ್ನು ಪ್ರಯೋಗಿಸಿರುತ್ತಾರೆ. ಹೀಗೆ ಹೇಯ ಗಂಧವು ಸ್ವಲ್ಪವೂ ಇಲ್ಲದೆ ಜ್ಞಾನ ಬಲೈಶ್ವರ್ಯ ವೀರ್ಯ ಶಕ್ತಿ ತೇಜಸ್ಸೇ ಮೊದಲಾದ ಕಲ್ಯಾಣಗುಣಗಳಿಗೆ ಆಕರನಾಗಿರುವ, ಅಪಾರಕಾರುಣ್ಯ ಸೌಶೀಲ್ಯವಾತ್ಸಲ್ಯೌದಾರ್ಯ ಮಹೋದಧಿಯಾಗಿ, ಅನಾಲೋಚಿತ ವಿಶೇಷಾಶೇಷಲೋಕಶರಣ್ಯನಾಗಿ, ಪ್ರಣತಾರ್ತಿಹರನಾಗಿ, ಆಶ್ರಿತವಾತ್ಸಲ್ಯೈಕ ಜಲಧಿಯಾಗಿ ಮತ್ತು ವಿಚಿತ್ರಾನಂತ ಭೋಗ್ಯಭೋಗೋಪಕರಣಭೋಗಸ್ಥಾನ ಪರಿಪೂರ್ಣನಾಗಿ ಸಮಸ್ತ ಜಗತ್ತುಗಳ ಉದಯವಿಭವ ಲಯಗಳನ್ನೆಲ್ಲಾ ಲೀಲೆಯಾಗಿ ಇರುವವನು ಪರಬ್ರಹ್ಮನು. ಆತನು ಇಂತಹ ಸರ್ವೋತ್ಕೃಷ್ಟವಿಶೇಷಣಗಳಿಂದ ಕೂಡಿದವನ ; ಮತ್ತು ಆತನ ಸ್ವರೂಪವೂ ಸಹ ಸರ್ವೋತ್ಕೃಷ್ಟವಾದುದು. ಆತನು ಜ್ಞಾನ ಸ್ವರೂಪನು, ಜ್ಞಾನ ಗುಣಕನು, ಆನಂದಸ್ವರೂಪನು, ಆನಂದಗುಣಕನು. ಹೀಗಿರುವಾಗ ಅದ್ವೈತಿಗಳು ಸ್ವರೂಪವನ್ನು ಮಾತ್ರ ಇಟ್ಟುಕೊಂಡು, ಪರಬ್ರಹ್ಮನಿಗೆ ಗುಣಗಳನ್ನು ಮಾತ್ರ ಪರಮ ನಿಷ್ಕರುಣೆಯಿಂದ ತೆಗೆದು ಬಿಸಾಡಿರುತ್ತಾರೆ. ಹೀಗೆ ತೆಗೆದುಹಾಕಿದರೆ, ಮಧುವಿಲ್ಲದ ಕ್ಷೀರದಹಾಗೂ, ಕಾಂತಿ ಇಲ್ಲದ ರತ್ನದ ಹಾಗೂ, ಪರಿಮಳವಿಲ್ಲದ ಪಾಶ್ಚಾತ್ಯರ ಪುಷ್ಪಗಳ ಹಾಗೂ, ಕರ್ಮನಿಷ್ಠೆ ಜ್ಞಾನನಿಷ್ಠೆಗಳಿಲ್ಲದ ಬ್ರಾಹ್ಮಣನಹಾಗೂ ಪಾತಿವ್ರತ್ಯಾದಿ ಮಹಾಗುಣಗಳಿಲ್ಲದ ಸ್ತ್ರೀಯ ಹಾಗೂ

ಪರಮಾತ್ಮನು ಕಲ್ಯಾಣಗುಣಗಳಿಲ್ಲದೆ ಹೆಚ್ಚಾಗಿ ಶೋಭಿಸುವದಿಲ್ಲವು. ಆಶ್ರಯೋಪಯುಕ್ತ ಗುಣಗಳಿಲ್ಲದ ಬಳಿಕ ಅಂತಹ ನಿರ್ಗುಣಬ್ರಹ್ಮನು ಅನುಗ್ರಹಿಸಲು ಯೋಗ್ಯನಾಗನು. ಆದರೆ ಶಾಸ್ತ್ರಗಳಲ್ಲಿ ಆತನು ನಿರ್ಗುಣನೆಂದು ಹೇಳಿದೆಯಲ್ಲಾ ಎಂದರೆ ಪ್ರಾಕೃತವಾದ ಅಥವಾ ಪ್ರಾಕೃತತುಲ್ಯವಾದ ಗುಣಗಳಿಲ್ಲವೆಂದೂ ಅಪ್ರಾಕೃತಗುಣಗಳುಳ್ಳವನೆಂದೂ ಅಭಿಪ್ರಾಯವು ಹೀಗೆ ಪರಿಪೂರ್ಣನಾಗಿ ಆನಂದಸ್ವರೂಪನಾಗಿ ಆನಂದಗುಣಕನಾಗಿರುವದರಿಂದಲೇ ನಮ್ಮನ್ನೂ "ಆನಂದಯಾತಿ" ಆನಂದಗೊಳಿಸುವನು ಎಂದೂ, ತನಗೆ ಸಮಾನವಾದ ಆನಂದವನ್ನುಂಟುಮಾಡುವನೆಂದೂ ಶ್ರುತಿಗಳಲ್ಲಿ ಹೇಳಲ್ಪಟ್ಟಿವೆ.

ಈ ವಿಶೇಷಣಗಳಲ್ಲಿ ಸ್ವಗುಣವಿಭವಾಸಂಜನ ಎಂಬಲ್ಲಿ ಸ್ವ ಶಬ್ದಕ್ಕೆ ಸಾರಾಸ್ವಾದಿನಿ, ಸಾರಪ್ರಕಾಶಿಕಾ, ಸಾರ ವಿವರಿಣೀ ವ್ಯಾಖ್ಯಾತೃಗಳು ಪರಬ್ರಹ್ಮಪರವಾಗಿ ಅರ್ಥವನ್ನು ಬರೆದಿರುತ್ತಾರೆ. ಇವುಗಳನ್ನನುಸರಿಸಿಯೇ ದಾಸನು ಉಪಪಾದನೆಯನ್ನು ಮಾಡಿರುತ್ತೇನೆ. ಆದರೆ ಸಾರದೀಪಿಕಾ, ಸಾರಸಂಗ್ರಹ ವ್ಯಾಖ್ಯಾತೃಗಳು ಸ್ವ ಶಬ್ದಕ್ಕೆ ಜೀವಪರವಾಗಿ ಅರ್ಥ ಮಾಡಿರುತ್ತಾರೆ. ಆಗ ಪರಮಾತ್ಮನ ಮಹಾನಂದಕ್ಕೆ ಮುಕ್ತನಾದ ಜೀವಾತ್ಮನ ಗುಣಗಳಿಂದ ಆವಿರ್ಭವಿಸಿದ ಅಪಹತ ಪಾಪ್ಮತ್ವಾದಿಗುಣಾಷ್ಟಕಗಳೊಂದಿಗೆ ಸಮ್ಮೇಳನವು ಹೇಳಲ್ಪಟ್ಟಿತು; ಈ ಸಮ್ಮೇಳನವು ಮಧುಕ್ಷೀರನ್ಯಾಯರೂಪವಾದುದು, ಮಧುವು ಕ್ಷೀರಕ್ಕೆ ತನ್ನಲ್ಲಿರುವ ಸರ್ವಗುಣಗಳನ್ನೂ ಕೊಡುತ್ತದೆ, ಹಾಗೆಯೇ ಪರಬ್ರಹ್ಮನೂ ಸಹ ಆ ಮುಕ್ತನಿಗೆ ಸಮಾನ ಭೋಗವನ್ನುಂಟುಮಾಡುವನೆಂಬ ಭಾವವು ತೋರಿಬರುತ್ತದೆ. ಆದರೆ ಅಧಿಕಾರವು ಪರಿಪೂರ್ಣಬ್ರಹ್ಮಾನುಭವಾಧಿಕಾರವಾಗಿ, ಇಲ್ಲಿ ಪರಿಪೂರ್ಣ ಬ್ರಹ್ಮಾನುಭವವೂ, ಅದರ ಪರೀವಾಹವಾಗಿ ಕೈಙ್ಕರ್ಯವೂ ಎರಡೂ ಮುಕ್ತನಿಗುಂಟಾಗುತ್ತವೆ ಎಂದೂ ಹೇಳುವದು ಇಲ್ಲಿ ಪ್ರಕೃತವಾದುದರಿಂದ ಮೊದಲಿನ ಅಭಿಪ್ರಾಯವೇ ಶ್ಲಾಘ್ಯತರವಾಗಿ ತೋರುತ್ತದೆ.

ಎಂಬಲ್ಲಿಗೆ

ಶ್ರೀಮದ್ರಹಸ್ಯತ್ರಯಸಾರದ

೨೨ನೆಯದಾದ ಪರಿಪೂರ್ಣಬ್ರಹ್ಮಾನುಭವಾಧಿಕಾರಕ್ಕೆ

ತಿರುನಾರಾಯಣಪುರಂ ವಿಜಯರಾಘವ ಶರ್ಮನ

ಆಚಾರ್ಯಹೃದಯಾನ್ವೇಷಿಣೀ

ಎಂಬ ಕನ್ನಡ ಅರ್ಥ ತಾತ್ಪರ್ಯಗಳು ಸಮಾಪ್ತವಾದವು.

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ

**ಸಂದೃಷ್ಟಸ್ಸಾರವಾಗ್ವಿತ್ಸ್ವಪರ ನಿಶಿತಧೀ ಸ್ಸಂಗ ಜಿನ್ನೈಕ ಸಂಸ್ಥ**
**ಸ್ಸ್ವಪ್ರೋಪಾಯೋತಿ ಖಿನ್ನ ಸ್ಸಪರಿಕರ ಭರನ್ಯಾಸ ನಿಷ್ಪನ್ನಕೃತ್ಯಃ**

**ಅವತಾರಿಕೆ.** ಈ ಇಪ್ಪತ್ತೆರಡು ಅಧಿಕಾರಗಳಿಂದಲೂ ಎಂದರೆ ಪ್ರಧಾನ ಪ್ರತಿತನ್ತ್ರಾಧಿಕಾರ ಮೊದಲುಗೊಂಡು ಈ ಪರಿಪೂರ್ಣಬ್ರಹ್ಮಾನುಭವಾಧಿಕಾರಾಂತ್ಯದವರೆಗೂ ತತ್ವಹಿತ ಪುರುಷಾರ್ಥಗಳು ಯಾವುವು ? ಎಂದು ಉಪದೇಶಿಸಿ ಇವೆಲ್ಲಾ ಶ್ರೀಮದ್ರಹಸ್ಯತ್ರಯದಲ್ಲಿ ಅಡಗಿವೆ ಎಂದು ತೋರಿಸಿದುದನ್ನೆಲ್ಲಾ ಒಂದು ಶ್ಲೋಕದಿಂದ ಸರ್ವರೂ ಕ್ರಮವಾಗಿ ಅನುಸಂಧಾನಮಾಡಲಿ ಎಂಬಾಶಯದಿಂದ ಸಂಗ್ರಹಿಸಿ ಹೇಳುತ್ತಾರೆ,

**ಅರ್ಥವು—ಏಕಃ ಅಚ್ಯುತಂ ನಿತ್ಯಂ ಅನುಭವತಿ** ಎಂಬುವು ಇಲ್ಲಿ ಕರ್ತೃಕ್ರಿಯಾಪದಗಳು. ಏಕಃ ಎಂದರೆ **ಕಶ್ಚಿದೇಕಃ** ಎಲ್ಲೋ ಒಬ್ಬ ಮುಕ್ತನಾಗುವನು, **ಅಚ್ಯುತಂ**-ಯಾವನಿಂದ ಚ್ಯುತವಾದುದು ಇಲ್ಲವೋ ಅಂತಹ ಪರಿ**ಪೂರ್ಣ**ಬ್ರಹ್ಮಾನುಭವವನ್ನು ಕೊಡುವ ಅಥವಾ ಯಾವುದೂ ಚ್ಯುತವಲ್ಲದೆ ಅವಾಪ್ತ ಸಮಸ್ತ ಕಾಮನಾದ ಸರ್ವೇಶ್ವರನನ್ನು, **ನಿತ್ಯಂ** - ಸದಾ, **ಎಂದರೆ** ಪುನರಾವರ್ತಿ ಇಲ್ಲದಹಾಗೆ, **ಅನುಭವತಿ** – ಅನುಭವಿಸುವನು ಎಂಬರ್ಥವು. ಆ ಮುಕ್ತನು ಎಂತವನೆಂದರೆ ಹೇಳುತ್ತಾರೆ:—**ಸಂದೃಷ್ಟಃ** – **ಬದ್ಧ** ದೆಶೆಯಲ್ಲಿ ಪ್ರಥಮತಃ ಗುರುಕಟಾಕ್ಷದಿಂದ ಈಕ್ಷಿಸಲ್ಪಟ್ಟವನಾದ, ಇದರಿಂದ ಉಪೋದ್ಘಾತಾಧಿಕಾರಾರ್ಥವು ಹೇಳಲ್ಪಟ್ಟಿತು, **ಸಾರವಾಗ್ವಿತ್** - ಶಾಸ್ತ್ರಗಳಲ್ಲೆಲ್ಲಾ ಸಾರತಮವಾದುದು ರಹಸ್ಯತ್ರಯಾರ್ಥಗಳೆಂದು ತಿಳಿದ ಸಾರಜ್ಞನಾಗಿ ಇದರಿಂದ ಸಾರನಿಷ್ಕರ್ಷಾರ್ಥವು ಸೂಚಿಸಲ್ಪಟ್ಟಿತು, **ಸ್ವಪರ ನಿಶಿತಧೀಃ** - **ಸ್ವಶ್ಚ ಸ್ವಶ್ಚ ಸ್ವೌ** ಎಂಬ ವ್ಯುತ್ಪತ್ತಿಯಿಂದ ಜೀವಾತ್ಮನಾದ ತಾನೂ ತನಗೆ ಭೋಗ್ಯಭೂತವಾದ ಅಚೇತನವೂ ಎರಡೂ ಸ್ವಶಬ್ದದಿಂದ ಹೇಳಲ್ಪಟ್ಟಿತು. ಹೀಗೆ ಚಿದಚಿತ್ತುಗಳ ಮತ್ತು **ಪರ**-ಪರಮಾತ್ಮನ ವಿಷಯವಾದ, **ನಿಶಿತಧೀಃ**-ನಿಷ್ಕೃಷ್ಟವಾದ ಯಥಾರ್ಥವಾದ ಜ್ಞಾನವುಳ್ಳವನಾದ, ಇದರಿಂದ ಚಿದಚಿತ್ತುಗಳು ಸರ್ವೇಶ್ವರನಿಗೆ ಶರೀರವೆಂದು ಹೇಳಿರುವ ಪ್ರಧಾನ ಪ್ರತಿತಂತ್ರಾಧಿಕಾರ, ಅರ್ಥಪಂಚಕಾಧಿಕಾರ, **ತತ್ವತ್ರ**ಯಾಧಿಕಾರ, ಪರದೇವತಾ ಪಾರಮಾರ್ಥ್ಯಾಧಿಕಾರಗಳ ಅರ್ಥವೂ ಹೀಗೆ ನಾಲ್ಕು ಅಧಿಕಾರಗಳ ಅರ್ಥಗಳೂ ಸಂಗ್ರಹಿಸಲ್ಪಟ್ಟವು. **ಸಂಗಜಿತ್** - ಐಹಿಕ ವಿಷಯಭೋಗರೂಪ ಐಶ್ವರ್ಯ, ಸ್ವರ್ಗಾದಿ ಲೋಕಗಳ ಉಪಭೋಗ, ಕೈವಲ್ಯ ಮೊದಲಾದವುಗಳಲ್ಲಿ ಅಭಿಲಾಷೆಯನ್ನು ಜಯಿಸಿದವನಾಗಿ, ಮಮತೆಯನ್ನು ತ್ಯಜಿಸಿದವನಾದ, ಇದರಿಂದ ಮುಮುಕ್ಷುತ್ವಾಧಿಕಾರಾರ್ಥವು ಉಪದೇಶಿಸಲ್ಪಟ್ಟಿತು, **ನೈಕ**

ಸ್ವಾವಸ್ಥಾರ್ಹಾಂ ಸಪರ್ಯಾವಿಧಿ ಮಿಹ ನಿಯತಂ ವ್ಯಾಗಸಂಕ್ವಾಪಿಬಿಭ್ರ।
ನ್ನಿರ್ಮುಕ್ತಸ್ಥೂಲ ಸೂಕ್ಷ್ಮ ಪ್ರಕೃತಿರನುಭವತ್ಯಚ್ಯುತಂ ನಿತ್ಯಮೇಕಃ॥

ಇತಿ ಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರಸ್ವತಂತ್ರಸ್ಯ
ಶ್ರೀಮದ್ವೇಙ್ಕಟ ನಾಥಸ್ಯ ವೇದಾಂತಾಚಾರ್ಯಸ್ಯ ಕೃತಿಷು
ಶ್ರೀಮದ್ರಹಸ್ಯತ್ರಯಸಾರೇ
ಅರ್ಥಾನುಶಾಸನ ಭಾಗಃ ಪ್ರಥಮಃ
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ.

---

ಸಂಸ್ಥಃ, ನೈಕ-ಒಂದಲ್ಲದೆ ಇರುವ ಎಂದರೆ ಭಕ್ತಿ ಪ್ರಪತ್ತಿ ಎಂಬ ಎರಡು ವಿಧ ಉಪಾಯಗಳ ಸಂಸ್ಥಃ-ಅಧಿಕಾರಿಗಳ ಜ್ಞಾನವುಳ್ಳವನಾದ, ಇದರಿಂದ ಅಧಿಕಾರ ವಿಭಾಗಾಧಿಕಾರಾರ್ಥವು ವ್ಯಕ್ತವು. ಸ್ಪಷ್ಟೋಪಾಯಃ – ಎರಡು ವಿಧ ಉಪಾಯ ಗಳ ಸ್ಪಷ್ಟವಾದ ಎಂದರೆ ನಿರ್ಣೀತವಾದ ಉಪಾಯಜ್ಞಾನವುಳ್ಳವನಾದ, ಇಲ್ಲಿ ಉಪಾಯ ವಿಭಾಗಾಧಿಕಾರಾರ್ಥವು ಸ್ಮರಿಸಲ್ಪಟ್ಟಿತು, ಅತಿಖಿನ್ನಃ-ತನ್ನ ಅಕಿಂಚ ನತ್ವ ಅನನ್ಯಗತಿತ್ವಾವಸ್ಥೆಗಳಿಂದ ಅತಿ ದುಃಖಿತನಾದ, ಇಲ್ಲಿ ಪ್ರಪತ್ತಿಯೋಗ್ಯಾಧಿ ಕಾರ್ಥವು ನಿರೂಪಿಸಲ್ಪಟ್ಟಿತು. ಸಪರಿಕರ ಭರನ್ಯಾಸ ನಿಷ್ಪನ್ನಕೃತ್ಯಃ ಪರಿಕರಗ ಳಿಂದ ಸೇರಿದ ಸಾಙ್ಗ ಭರನ್ಯಾಸದಿಂದ ಕೃತಕೃತ್ಯನಾಗಿ, ಇದರಿಂದ ಪರಿಕರವಿಭಾ ಗಾಧಿಕಾರ, ಸಾಙ್ಗಪ್ರಪದನಾಧಿಕಾರ, ಕೃತಕೃತ್ಯಾಧಿಕಾರ ಇವುಗಳರ್ಥಗಳು ಜ್ಞಾಪಿ ಸಲ್ಪಟ್ಟವು, ಸ್ವಾವಸ್ಥಾರ್ಹಂ, ಇದೂ ಸಪರ್ಯಾವಿಧಿಂ, ಇಹನಿಯತಂ, ವ್ಯಾಗಸಂ, ಇವುಗಳಿಗೆಲ್ಲಾ ಬಿಭ್ರತ್ ಎಂಬುವದರೊಂದಿಗೆ ಅನ್ವಯವು; ಸ್ವಾವ ಸ್ಥಾರ್ಹಂ - ತನ್ನ ಈಗ ಪ್ರಾಪ್ತನಾದ ಮಹತ್ತಾದ ಅವಸ್ಥೆಗೆ ಯೋಗ್ಯವಾದು ದನ್ನು ಅದು ಯಾವುದೆಂದರೆ ಸ್ವಸಿದ್ಧಾಭಿಜ್ಞಾನವನ್ನು, ಸಪರ್ಯಾವಿಧಿಂ-ಕೈಂಕರ್ಯ ವಿಧಿಯನ್ನು, ಇದರಿಂದ ಉತ್ತರಕೃತ್ಯಾಧಿಕಾರವೂ ಮತ್ತು ಪುರುಷಾರ್ಥ ಕಾಷ್ಠಾಧಿ ಕಾರವೂ ಸಹ ಪ್ರದರ್ಶಿಸಲ್ಪಟ್ಟವು, ಇಹ ನಿಯತಂ - ಈ ಲೋಕದಲ್ಲೇ ಶಾಸ್ತ್ರ ಗಳಲ್ಲಿ ನಿರ್ಣಯಿಸಲ್ಪಟ್ಟಿರುವ ಹಾಗೆ, ಶಾಸ್ತ್ರೀಯ ನಿಯಮನಾಧಿಕಾರಾರ್ಥವು ಬೋಧಿಸಲ್ಪಟ್ಟಿತು, ವ್ಯಾಗಸಂ - ಪಾಪಗಳೊಂದೂ ಇಲ್ಲದಹಾಗೆ, ಇದರಿಂದ ಅಪರಾಧಪರಿಹಾರಾಧಿಕಾರಾರ್ಥವು ಶಿಕ್ಷಿತವಾಯಿತು ; ಕ್ವಾಪಿ - ಯಾವುದಾದರೂ ಒಂದು ಸ್ಥಾನವಿಶೇಷದಲ್ಲಿ, ಸ್ಥಾನವಿಶೇಷಾಧಿಕಾರಾಭಿಪ್ರಾಯವು ವ್ಯವಸ್ಥಿತವಾ ಯಿತು ; ಬಿಭ್ರತ್ - ಧರಿಸುವವನಾಗಿ, ನಿರ್ಮುಕ್ತಸ್ಥೂಲ ಸೂಕ್ಷ್ಮ ಪ್ರಕೃತಿಃ- ಬಿಡಲ್ಪಟ್ಟ ಸ್ಥೂಲವಾದ ಪ್ರಕೃತಿ ಶರೀರ ಸಂಬಂಧವನ್ನೂ ಮತ್ತು ಸೂಕ್ಷ್ಮ

ಶರೀರ ಸಂಬಂಧವನ್ನೂ ಉಳ್ಳವನಾಗಿ ; ಇದರಿಂದ ನಿರ್ಯಾಣಗತಿಚಿಂತನಾಧಿಕಾರ ಗಳ ತಾತ್ಪರ್ಯವು ಸ್ಪಷ್ಟಮಾಡಲ್ಪಟ್ಟಿತು, ಇಂತಹ ಪ್ರಪನ್ನನು ಯಾವನೋ ಒಬ್ಬನು, (ಇಂತವನು ದೊರಕುವದು ದುರ್ಲಭವೆಂಬುದು ತಿಳಿಸಲ್ಪಟ್ಟಿತು.) **ಅನುಭವತ್ಯಚ್ಯುತಂ ನಿತ್ಯಂ** - ಪರಿಪೂರ್ಣಬ್ರಹ್ಮನನ್ನು ಪುನರಾವರ್ತಿ ಭಯ ವಿಲ್ಲದೆ ಅನುಭವಿಸುವನು ಎಂಬುದರಿಂದ ಪರಿಪೂರ್ಣಬ್ರಹ್ಮಾನುಭವಾಧಿಕಾರವು ಉಪದೇಶಿಸಲ್ಪಟ್ಟಿತು.

**ತಾತ್ಪರ್ಯ**—ಈ ಪರಿಪೂರ್ಣ ಬ್ರಹ್ಮಾನುಭವಾಧಿಕಾರದ ನಿಗಮನದಿಂದ ಶ್ರೀಮದ್ರಹಸ್ಯತ್ರಯಸಾರದ ಅರ್ಥಾನುಶಾಸನವೆಂಬ ಪ್ರಥಮ ಭಾಗವು ಪೂರೈ ಸಿತು. ಈ ಇಪ್ಪತ್ತೆರಡು ಅಧಿಕಾರಗಳಿಂದ ಶ್ರೀಮದ್ರಹಸ್ಯತ್ರಯದಲ್ಲಿ ತೋರಿಬರುವ ತತ್ವಹಿತಪುರುಷಾರ್ಥಗಳ ಸ್ವರೂಪವೇನೆಂಬುವನ್ನೂ ವಿಶದವಾಗಿ ಉಪದೇಶಿಸಿರು ವದರಿಂದ ಇದಕ್ಕೆ ಅರ್ಥಾನುಶಾಸನವೆಂಬ ಹೆಸರು. ಇದು ಶ್ರೀಮದ್ರಹಸ್ಯತ್ರಯ ಸಾರದ ಪ್ರಥಮ ಭಾಗವು. ಅರ್ಥಾನುಶಾಸನ ವೆಂದರೆ ರಹಸ್ಯತ್ರಯಾರ್ಥಗಳ ಶಿಕ್ಷಣವು, ಉಪದೇಶವು. ತತ್ವವೇನೆಂಬುದನ್ನು ಮೊದಲಿನ ಆರು ಅಧಿಕಾರಗಳಿಂ ದಲೂ, ಹಿತವೇನೆಂಬುದನ್ನು ಅನಂತರ ಹನ್ನೆರಡು ಅಧಿಕಾರಗಳಿಂದಲೂ, ಪುರುಷಾ ರ್ಥವನ್ನು ಅನಂತರ ಇನ್ನು ಮೂರು ಅಧಿಕಾರಗಳಿಂದಲೂ ಉಪದೇಶಿಸಿರುತ್ತಾರೆ.

ಈ ಶ್ಲೋಕದಿಂದ ಈ ೨೨ ಅಧಿಕಾರಗಳ ಅರ್ಥಗಳನ್ನು ಜ್ಞಾಪಕಕ್ಕೆ ತಂದು ಕೊಂಡು ಅನುಸಂಧಾನಕ್ಕೆ ಸಹಕಾರಿಯಾಗುವ ಹಾಗೆ ಅನುಗ್ರಹಿಸಿರುತ್ತಾರೆ. ಹೀಗೆ ಪ್ರಪನ್ನನಾಗಿ ಮುಕ್ತಿಯನ್ನು ಹೊಂದುವರು ಅತಿ ವಿರಳರಾಗಿ ಎಲ್ಲಿಯೋ ಒಬ್ಬೊಬ್ಬರೆಂದು ತಿಳಿಸುವದಕ್ಕಾಗಿ **ಏಕಃ** ಎಂಬ **ಪ್ರಯೋಗವು**. **"ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿಸಿದ್ಧಯೇ"** ಎಂಬ ಗೀತಾಶ್ಲೋಕ **ತಾತ್ಪರ್ಯವು** (೭-೩) ಇಲ್ಲಿ ಸೂಚಿಸಲ್ಪಟ್ಟಿತು. ಅದೇನು ಅಷ್ಟು ದುರ್ಲಭ ವೆಂದರೆ ತತ್ವಜ್ಞಾನ ಬೇಕು, ಉಪಾಯಾನುಷ್ಠಾನ ಮಾಡಬೇಕು. ಇದ ಕ್ಕೆಲ್ಲಾ ಮೂಲಕಾರಣ ಚೇತನನ ಸುಕೃತಮೂಲಕ ಉಂಟಾದ ಸಿದ್ಧೋಪಾಯ ನಾದ ಸರ್ವೇಶ್ವರನ ಕೃಪಾಪ್ರಭಾವವೆಂದು ಹೇಳುವದಕ್ಕಾಗಿ **ಸಂದೃಷ್ಟಃ** ಎಂದು ಹೇಳಿರುತ್ತಾರೆ. ಆಗ **ಶ್ರೀಹರಿಯು** ಜನನಕಾಲದಲ್ಲಿ ತನ್ನ ಕೃಪಾಕಟಾಕ್ಷದಿಂದ ನೋಡುವವನಾಗಿ **"ಜಾಯಮಾನಂಹಿ ಪುರುಷಂ ಯಂಪಶ್ಯೇನ್ಮಧುಸೂಧನಃ। ಸಾತ್ವಿಕಸ್ಸತುವಿಜ್ಞೇಯಸ್ಸವೈ ಮೋಕ್ಷಾರ್ಥಚಿಂತಕಃ॥"** ಎಂದು ಹೇಳಿರುವ ಹಾಗೆ ಸಾತ್ವಿಕ ಸ್ವಭಾವವುಳ್ಳವನಾಗಿ, ಸಾತ್ವಿಕರೊಂದಿಗೆ ಸಂಭಾಷಣೆಯನ್ನು ಹೊಂದಿ ಮೋಕ್ಷಾರ್ಥಚಿಂತಕನಾಗಿ ಆಗ ಸದ್ಗುರುವಿನಿಂದಲೂ ಕೂಡ ಸಂದೃಷ್ಟ ನಾಗಿ ಮೋಕ್ಷಾರ್ಥಚಿಂತೆಯುಳ್ಳವನಾಗುವನು, ಅಂತಹ ಸದ್ಗುರುವಿನ ಕೃಪಾ

ಕಟಾಕ್ಷದಿಂದ ಶಾಸ್ತ್ರಗಳಲ್ಲಿ ಸಾರತಮವಾದುದು ಶ್ರೀಮದ್ರಹಸ್ಯತ್ರಯವೆಂಬುದನ್ನು ಅರಿತು ಸಾರವಾಗ್ನಿ ಕ್ತಾಗುವನು.

ಈ ಸಾರತಮವಾದ ರಹಸ್ಯತ್ರಯಗಳು ಉಪದೇಶಿಸುವ ಅರ್ಥಗಳನ್ನು ಚೆನ್ನಾಗಿ ಗ್ರಹಿಸಲು ಸ್ವಲ್ಪಮಟ್ಟಿಗೆ ಜ್ಞಾನ ಬೇಕು. ಸೃಷ್ಟಿಯಲ್ಲಿ ಮನುಷ್ಯನು ಸರ್ವೋತ್ಕೃಷ್ಟನಾದ ಪ್ರಾಣಿಯು, ಕರಣ ಕಳೇಬರಯೋಗ ಇತರ ಜಂತುಗಳ ಹಾಗೆಯೇ ಇದ್ದರೂ, ಇವನಿಗೆ ಕೊಟ್ಟಿರುವ ಜ್ಞಾನ ವಿವೇಕಗಳು ಅಮೋಘ ವಾದವು. ಇವನಿಗೋಸ್ಕರವಾಗಿಯೇ ಸರ್ವೇಶ್ವರನು ಶಾಸ್ತ್ರಗಳನ್ನೂ ಶಾಸ್ತ್ರೋಪ ದೇಶಿಕರನ್ನೂ ದಯಪಾಲಿಸಿರುತ್ತಾನೆ. ಆದುದರಿಂದ ಈತನು ಸ್ವಲ್ಪಮಟ್ಟಿ ಗಾದರೂ ಶಾಸ್ತ್ರಜ್ಞಾನವನ್ನು ಹೊಂದಬೇಕು. ಆ ಶಾಸ್ತ್ರಜ್ಞಾನವು ಎಷ್ಟು ಮಟ್ಟಿಗೆ ಬೇಕು ಎಂದರೆ, ನಮಗೆ ಮುಖ್ಯ ಪ್ರಮಾಣವಾದ ಶ್ರುತಿಗಳಿಗೆಲ್ಲಾ ಸಾಮಂಜಸ್ಯ ವನ್ನುಂಟುಮಾಡುವ ಪ್ರಧಾನಪ್ರತಿತಂತ್ರವು ಯಾವುದೆಂಬುದನ್ನು ತಿಳಿದು ಕೊಳ್ಳಬೇಕು. ಇದನ್ನು ಇತರರು ತಿಳಿಯದೆಯೂ ಅಙ್ಗೀಕರಿಸದೆಯೂ ಇರುವದ ರಿಂದ ಅವರುಗಳ ಸಿದ್ಧಾನ್ತದಲ್ಲಿ ಶ್ರುತಿವಾಕ್ಯಗಳಿಗೆ ಪರಸ್ಪರ ವಿರೋಧವು ತೋರಿ ಬರುತ್ತದೆ. ಸರ್ವವೂ ಸರ್ವೇಶ್ವರನಿಗೆ ಶರೀರವು, ಆತನು ನಮ್ಮಗಳಿಗೆಲ್ಲಾ ಆತ್ಮಾ ವೆಂದು ಶ್ರುತಿಯಲ್ಲೇ ಹೇಳಿರುವದನ್ನು ನಾವು ಮುಖ್ಯವಾಗಿ ಮನಸ್ಸಿನಲ್ಲಿ ಇಟ್ಟರೆ, ಶ್ರುತಿಗಳಿಗೆ ಪರಸ್ಪರವಾಗಿಯೂ ಅವುಗಳಿಗೂ ಸ್ಮೃತಿಗಳಿಗೂ ಸಾತ್ವಿಕ ಪುರಾಣೇತಿ ಹಾಸಗಳಿಗೂ ಏನೊಂದೂ ವಿರೋಧವಿಲ್ಲದೆ ಸರ್ವಸಾಮಂಜಸ್ಯವು ಏರ್ಪಟ್ಟು ತನಗೆ ಪರಮಾತ್ಮನು ಆಧಾರವು, ನಿಯಾಮಕನು, ಶೇಷಿಯು ಎಂಬ ಯಥಾರ್ಥಜ್ಞಾನವು ಉಂಟಾಗುತ್ತದೆ ಶಾಸ್ತ್ರಜ್ಞಾನವು ಮುಖ್ಯವಾಗಿ ನಮಗೆ ಏತಕ್ಕೆ ಆವಶ್ಯಕವೆಂದರೆ ನಮ್ಮ ಅಜ್ಞಾನ, ಅನ್ಯಥಾ ಜ್ಞಾನ ವಿಪರೀತಜ್ಞಾನಗಳಿಂದುಂಟಾಗುವ ಭ್ರಾಂತಿಗಳು ತೊಲಗಲು ಆವಶ್ಯಕವು. ಇಂತಹ ಭ್ರಾಂತಿಗಳೆಲ್ಲಾ ತೊಲಗುವದಕ್ಕಾಗಿ ಶಾಸ್ತ್ರಗಳೆಲ್ಲಾ ತಿಳಿಸುವದು ಮುಖ್ಯವಾಗಿ ಏನೆಂದು ಗ್ರಹಿಸತಕ್ಕದ್ದು; ಅವು ಐದು ವಿಷಯಗಳಾದ ಅರ್ಥ ಪಂಚಕಗಳನ್ನು ಮುಖ್ಯವಾಗಿ ತಿಳಿಸುತ್ತವೆ. ತನಗೆ ಈಗಿರುವ ಬಂಧವು ಕಳೆಯಲು ತಾನು ಯಾರನ್ನು ಆಶ್ರಯಿಸತಕ್ಕದ್ದು, ಅಂತವನ ಸ್ವರೂಪ ವೆಂತಾದ್ದು, ಪ್ರಾಪ್ತವಾದ ತನ್ನ ಸ್ವರೂಪವೆಂತಾದ್ದು, ಆತನನ್ನು ಹೊಂದುವ ಉಪಾಯಗಳು ಯಾವುವು, ಅದರಿಂದುಂಟಾಗುವ ಫಲಸ್ವರೂಪವೆಂತಾದ್ದು, ಅಂತಹ ಪ್ರಾಪ್ತಿಗೆ ವಿರೋಧಿಗಳು ಯಾವುವು ಎಂಬುದನ್ನು ಗ್ರಹಿಸತಕ್ಕದ್ದು. ಇಷ್ಟುಮಾತ್ರವೇ ಅಲ್ಲವು, ಇಂತಹ ಭ್ರಾಂತಿಗಳು ತೊಲಗುವದಕ್ಕೆ ತನ್ನೊಂದಿಗೆ ಯಾವಾಗಲೂ ಅನುವರ್ತಿಸಿಕೊಂಡಿರುವ ಅಚಿತ್ತೇನು, ಪರಮಾತ್ಮನೇನು, ಹೀಗೆ ಮೂರು ತತ್ವಗಳ, ಸ್ವರೂಪ, ಸ್ವಭಾವ, ಪ್ರವೃತ್ತಿಗಳ ಜ್ಞಾನವು ಚನ್ನಾಗಿರ

ತಕ್ಕದ್ದು. ಇವುಗಳ ವಿಷಯದಲ್ಲಿ ಅನೇಕ ಅಪಸಿದ್ಧಾಂತಗಳುಂಟು. ಅವುಗಳೆಲ್ಲಾ, ಶ್ರುತಿವಾಕ್ಯಗಳನ್ನು ದೂರೀಕರಿಸಿ ಅಥವಾ ಅವುಗಳಿಗೆ ಸರಿಯಾದ ಸಾಮಂಜಸ್ಯವನ್ನು ಕಲ್ಪಿಸದೆ, ಶ್ರುತಿಗಳಿಗೆ ಪರಸ್ಪರ ವಿರೋಧವನ್ನುಂಟುಮಾಡಿ ಬಾಧ್ಯಬಾಧಕಗಳನ್ನು ಕಲ್ಪಿಸುತ್ತವೆ. ಆದುದರಿಂದ ಅವುಗಳಿಗೆ ಮನಗೊಟ್ಟರೆ ಪುನಃ ಭ್ರಾಂತಿಗೆ ಮೂಲವಾಗುತ್ತದೇ ವಿನಾ ಭ್ರಾಂತಿಯು ತೊಲಗುವದಿಲ್ಲವು. ಆದುದರಿಂದ ಮುಮುಕ್ಷುವು ಸ್ವಪರ ನಿಶಿತಧೀ ಯುಳ್ಳವನಾಗಬೇಕೆಂದು ತಿಳಿಸಿರುತ್ತಾರೆ ಈ ಚೇತನನು ಅನಾತ್ಮಸಂಸರ್ಗದಿಂದ ಭ್ರಾಂತನಾಗಿ, ತಾನೇ ಕರ್ತಾ ಭೋಕ್ತಾವೆಂದು ಭಾವಿಸಿ, ತನಗಿಂತ ಬೇರೆ ಪರಮಾತ್ಮನಿಲ್ಲವೆಂದು ಭ್ರಮಿಸುವನು. ತನಗೆ ಪರಮಾತ್ಮನ ದಾಸ್ಯವು ನಿಯತವೆಂದು ತಿಳಿದು, ತನ್ನ ಕರ್ತೃತ್ವ ಭೋಕ್ತೃತ್ವವೆಲ್ಲಾ ಪರಾಯತ್ತವಾದುದರಿಂದ ತಾನೂ ಸಂಪೂರ್ಣವಾಗಿ ಅಸ್ವತಂತ್ರನೆಂದು ತಿಳಿದು, ತಾನು ಮಾಡುವ ಕಾರ್ಯವೆಲ್ಲಾ ಧರ್ಮಪ್ರತಿಷ್ಠಿತವಾದುದಾಗಿ ಅವುಗಳನ್ನೆಲ್ಲಾ ಸ್ವಾಮಿಯಲ್ಲಿ ಸಮರ್ಪಿಸಿ, ಆತನ ಪ್ರೀತ್ಯನುಗ್ರಹಗಳಿಗೆ ಪಾತ್ರನಾಗಬೇಕು ಮುಮುಕ್ಷುವು ಮುಖ್ಯವಾಗಿ ಆರಾಧಿಸತಕ್ಕ ಪರದೇವತೆಯು ಶ್ರುತಿಸ್ಮೃತೀತಿಹಾಸಾದಿಗಳಲ್ಲಿ ಯಾವ ಹೆಸರಿನಿಂದ ಬೋಧಿತವಾಗಿದೆ ಎಂದು ತಿಳಿಯತಕ್ಕದ್ದು ಏಕೆಂದರೆ ಮೋಕ್ಷಪ್ರದತ್ವವು ಆತನಿಗೆ ಮಾತ್ರವೇ ವಿನಾ ಮಿಕ್ಕ ಇತರ ದೇವತೆಗಳಾದ ಚತುರ್ಮುಖರುದ್ರೇಂದ್ರಾದಿಗಳಿಗೆ ಯಾರಿಗೂ ಇರುವದಿಲ್ಲವು ಆ ಪರತತ್ತ್ವವು ಈ ಮೇಲೆ ಹೇಳಿದ ಶಾಸ್ತ್ರಗಳಲ್ಲೆಲ್ಲಾ ಶ್ರೀಮನ್ನಾರಾಯಣನೆಂದೇ ಉದ್ಘೋಷಿಸಲ್ಪಟ್ಟಿರುತ್ತದೆ

ಹೀಗೆ ಪರತತ್ತ್ವಸ್ವರೂಪವನ್ನು ಯಥಾರ್ಥವಾಗಿ ತಿಳಿದವನಾಗಿ ತನಗೆ ಹಿತವಾದುದು ಯಾವುದೆಂದು ತಿಳಿದವನಾಗಿ ಉಪಾಯಾನುಷ್ಠಾನವನ್ನು ಮಾಡತಕ್ಕದ್ದು. ಇಂತಹ ಮುಮುಕ್ಷುವಿಗೆ "ಪರಮಾತ್ಮನಿ ಯೋ ರಕ್ತೋ ವಿರಕ್ತೋ ಽಪರಮಾತ್ಮನಿ" ಎಂದು ಹೇಳಿರುವ ಹಾಗೆ ವಿರಕ್ತಿಭಾವವು ಬೇಕು ಐಹಿಕದಲ್ಲಿ ಜಿಹಾಸೆಯು ಆವಶ್ಯಕವು. ಐಹಿಕಭೋಗಗಳೂ ಸ್ವರ್ಗಾದಿ ಸುಖಗಳೂ ಕೂಡ ಅಸ್ಥಿರಮಾತ್ರವಲ್ಲದೆ "ಸುಖಸ್ಯಾನಂತರಂ ದುಃಖಂ" ಎಂದು ಹೇಳಿರುವ ಹಾಗೆ ಪರ್ಯವಸಾನದಲ್ಲಿ ದುಃಖಪ್ರದಗಳು ಆದುದರಿಂದ ಇಂತಹ ಸುಖಗಳೂ ಕೈವಲ್ಯವೂ ಸಹ ಏತೇವೈ ನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ ಎಂದು ಹೇಳಿರುವ ಹಾಗೆ ನರಕತುಲ್ಯಗಳೆಂಬ ಭಾವನೆಯಿರತಕ್ಕದ್ದು. ಇಂತಹ ವಿರಕ್ತಿಭಾವವು ಆವಶ್ಯಕವೆಂದು ತಿಳಿಸುವದಕ್ಕಾಗಿ ಸಂಗಜಿತ್ ಎಂದು ಮುಮುಕ್ಷುತ್ವಾಧಿಕಾರಾರ್ಥವನ್ನು ತಿಳಿಸಿರುತ್ತಾರೆ. ಹೀಗೆ ಮೋಕ್ಷಾರ್ಥಿಯು ಪ್ರಪನ್ನನಾಗಬೇಕಾದರೆ ಭಕ್ತಿಮಾರ್ಗಾವಲಂಬಿಯಾಗಿಯಾಗಲಿ, ಅಥವಾ ಭರನ್ಯಾಸಾನುಷ್ಠಾತಾವಾಗಿ

ಯಾಗಲಿ ಆಗಬೇಕು. ತನಗೆ ಯಾವುದು ಯೋಗ್ಯವೆಂದು ತಿಳಿದು, ಮೂವತ್ತೆರಡು ರೂಪವಾದ ಭಕ್ತಿಮಾರ್ಗದಲ್ಲಿ ಒಂದನ್ನಾಗಲಿ, ಅಥವಾ ಸ್ವನಿಷ್ಠೆ, ಉಕ್ತಿನಿಷ್ಠೆ ಆಚಾರ್ಯನಿಷ್ಠೆ ಎಂಬ ಪ್ರಭೇದಗಳಲ್ಲಿ ಒಂದಾದ ಭರನ್ಯಾಸವನ್ನಾಗಲಿ ಅವಲಂಬಿಸತಕ್ಕದ್ದು. ಇಂತಹ ಪ್ರಪನ್ನಾಧಿಕಾರಿಯಾಗದೇ ಈತನಿಗೆ ಮೋಕ್ಷವಿಲ್ಲದುದರಿಂದ ಈ ಎರಡು ವಿಧ ಉಪಾಯಗಳನ್ನು ಚನ್ನಾಗಿ ತಿಳಿದು, ಅವುಗಳಲ್ಲಿ ತನಗೆ ಯಾವುವಕ್ಕೆ ಯೋಗ್ಯತೆಯೋ ಅದನ್ನು ಅವಲಂಬಿಸಬೇಕಾಗುತ್ತದೆಯಾದುದರಿಂದ ನೈಕಸಂಸ್ಥಃ ಎಂದು ಅಧಿಕಾರಿ ವಿಭಾಗಾರ್ಥವನ್ನು ಗ್ರಹಿಸಿದವನಾಗಿ ಅನಂತರ ಈ ಎರಡು ವಿಧ ಉಪಾಯಗಳಿಗೂ ಇರುವ ವೈಲಕ್ಷಣ್ಯವನ್ನು ತಿಳಿಯತಕ್ಕದ್ದು. ಇವಕ್ಕಾಗಿ ಸ್ಪಷ್ಟೋಪಾಯ ವೆಂದು ಉಪಾಯ ವಿಭಾಗಾಧಿಕಾರಾರ್ಥವು ಹೇಳಲ್ಪಟ್ಟಿತು. ಅನಂತರ ಮುಮುಕ್ಷುತ್ವಾಧಿಕಾರದಲ್ಲಿ ಹೇಳಿರುವ ಹದಿನೈದು ವಿಧರಾದ ಅಶಕ್ತರಲ್ಲಿ ತಾನೊಬ್ಬನಾಗಿ ತೋರಿ ಅರ್ಥಿತ್ವ ಸಾಮರ್ಥ್ಯಗಳು ಇರುವರೆಲ್ಲರಿಗೂ ಈ ಭರನ್ಯಾಸವು ಉಪಾಯವೆಂದು ಹೇಳಿರುವದರಿಂದ, ಅನನ್ಯಗತಿಕನಾಗಿಯೂ ಅಕಿಂಚನನಾಗಿಯೂ ಇರುವದರಿಂದ ಪ್ರಪತ್ತಿಗೆ ಯೋಗ್ಯತೆಯುಂಟೆಂದು ಭಾವಿಸತಕ್ಕದ್ದೆಂದು, "ಅತಿ ಖಿನ್ನಃ" ಎಂಬುದರ ಮೂಲಕ ಪ್ರಪತ್ತಿಯೋಗ್ಯಾಧಿಕಾರದ ಸಾರಾಂಶವು ವ್ಯಕ್ತಗೊಳಿಸಲ್ಪಟ್ಟಿತು. ಇಂತಹ ಉತ್ತಮವಾದ ಉಪಾಯಕ್ಕೆ ಪರಿಕರಗಳು (ಅಂಗಗಳು) ಆನುಕೂಲ್ಯ ಸಂಕಲ್ಪಾದಿ ಐದು ಅಂಗಗಳೆಂದು ತಿಳಿದವನಾಗಿ, (ಪರಿಕರವಿಭಾಗಾಧಿಕಾರದ ಅರ್ಥವು) ಅನಂತರ ಅಂಗಿಯಾವುದೆಂಬುದನ್ನು ನಿಷ್ಕರ್ಷಿಸಿ ತಿಳಿದು, ಭರನ್ಯಾಸಾನುಷ್ಠಾನವನ್ನು ಮಾಡತಕ್ಕದ್ದು. (ಇದು ಸಾಂಗಪ್ರಪದನಾಧಿಕಾರದ ಅರ್ಥವು). ಹಾಗೆ ಭರನ್ಯಾಸವನ್ನು ಅನುಷ್ಠಿಸಿದವನು ಭರನ್ಯಾಸ ನಿಷ್ಪನ್ನಕೃತ್ಯಃ, ನಿರ್ಭರನಾಗಿ ನಿರ್ಭಯನಾಗಿ ನಿಸ್ಸಂಶಯನಾಗಿ ಹೃಷ್ಟಮನಸ್ಕನಾಗಿ ಕೃತಕೃತ್ಯನಾಗುವನೆಂದು ಹೇಳಲ್ಪಟ್ಟಿತು. ಅಂತಹ ಪ್ರಪನ್ನನಿಗೆ ಸ್ವರೂಪೋಪಾಯ ಪುರುಷಾರ್ಥಗಳಲ್ಲೂ ಸ್ವನಿಷ್ಠಾಭಿಜ್ಞಾನವಿರಬೇಕೆಂದು ಹೇಳುವದಕ್ಕಾಗಿ ಸ್ವಾವಸ್ಥಾಹಾರಂ ಎಂಬ ಪ್ರಯೋಗವು ಇಂತಹ ಸ್ವನಿಷ್ಠಾಭಿಜ್ಞಾನವುಳ್ಳ ಪ್ರಪನ್ನನು ಕೃತಕೃತ್ಯನಾದರೂ ಈತನು ಮಾಡತಕ್ಕ ಕೆಲವು ಇತಿಕರ್ತವ್ಯಗಳುಂಟೆಂದೂ, ಅವುಗಳಲ್ಲಿ ಪ್ರಥಮತಃ ಆಜ್ಞಾಕೈಂಕರ್ಯಗಳಾದ ನಿತ್ಯನೈಮಿತ್ತಿಕ ಕರ್ಮಗಳನ್ನು ಭಗವತ್ಪ್ರೀತ್ಯರ್ಥವಾಗಿಯೂ, ಅನುಜ್ಞಾಕೈಂಕರ್ಯಗಳನ್ನು ಭಗವನ್ಮುಖೋಲ್ಲಾಸಕ್ಕಾಗಿಯೂ ಮಾಡುತ್ತಾ, ಜ್ಞಾನಿಗಳ ಮೂಲಕ ಶಾಸ್ತ್ರಾಭ್ಯಾಸವನ್ನು ಮಾಡುತ್ತಾ, ತಿಳಿಯದಿರುವವರಿಗೆ ಉಪದೇಶಿಸುತ್ತಾ ಕಾಲಯಾಪನೆಯನ್ನು ಮಾಡಬೇಕೆಂದೂ, ಈ ಕೈಂಕರ್ಯಗಳ ಪರಾಕಾಷ್ಠೆಯು ಭಾಗವತಶೇಷತ್ವಾನುಸಂಧಾನಪೂರ್ವಕವೆಸ

ಗುವ ಭಾಗವತ ಕೈಂಕರ್ಯವೆಂದೂ ಹೇಳಿ ಇದನ್ನು ತಿಳಿಸುವದಕ್ಕಾಗಿ ಸಪರ್ಯಾ ವಿಧಿಂ ಎಂದು ಪ್ರಯೋಗಿಸಿರುತ್ತಾರೆ. ಈ ಭಗವದ್ಭಾಗವತ ಕೈಂಕರ್ಯಗಳನ್ನು ತನ್ನ ಇಷ್ಟಬಂದಂತೆ ನಡೆಸತಕ್ಕದ್ದಲ್ಲವೆಂದೂ ಶಾಸ್ತ್ರೀಯನಿಯಮಾನುಸಾರವೇ ಅನುಷ್ಠಿಸತಕ್ಕದ್ದೆಂಬುದನ್ನೂ ಇಹ ನಿಯತಃ ಎಂಬ ಪದಗಳ ಮೂಲಕ ತಿಳಿಸಿರುತ್ತಾರೆ. ಇಂತಹ ಪ್ರಪನ್ನನಿಗೆ ದೇಹಾವಸಾನದಲ್ಲಿ ಮುಕ್ತಿಯು ಸಿದ್ಧವಾದರೆ ಆತನ ಪುಣ್ಯಪಾಪಗಳ ಪರಿಹಾರ ಹೇಗೆ ಎಂಬ ಸಂದೇಹದಲ್ಲಿ ಪ್ರಾರಬ್ಧಮಾತ್ರವೇ ಈತನು ಅನುಭವಿಸತಕ್ಕದ್ದೆಂದೂ, ಪೂರ್ವಾಘಗಳೂ, ಪ್ರಮಾದದಿಂದುಂಟಾಗುವ ಉತ್ತರಾಘಗಳೂ ಸಹ ಈತನನುಷ್ಠಿಸಿದ ಉಪಾಯದ ಮಾಹಾತ್ಮ್ಯೆಯಿಂದಲೇ ಕಳೆದುಹೋಗುತ್ತವೆಂದೂ ಹೇಳಿ, ಭರನ್ಯಾಸಾನಂತರ ಈತನು ಎಂದಿಗೂ ಬುದ್ಧಿ ಪೂರ್ವಕವಾಗಿ ಅಪರಾಧವನ್ನು ಮಾಡುವದಿಲ್ಲವೆಂದೂ, ಒಂದುವೇಳೆ ಬುದ್ಧಿ ಪೂರ್ವಕವಾಗಿ ಮಾಡಿದರೆ, ಪರಿತಾಪಮೂಲಕವಾಗಿ ಪ್ರಾಯಶ್ಚಿತ್ತ ಶರಣಾಗತಿ ಯನ್ನು ಮಾಡಿಕೊಂಡರೆ ಆ ಅಪರಾಧವು ನಶಿಸಿಹೋಗುವುದೆಂದೂ, ಹಾಗೆ ಒಂದು ವೇಳೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ, ಅಲ್ಪಶಿಕ್ಷೆಯಿಂದ ದಂಡಿಸಿ, ಹೀಗೆ ಸರ್ವಾಪರಾಧಗಳು ನಿವೃತ್ತಿಸಿ ಹೋಗುವಹಾಗೆ ಭರಸ್ವೀಕಾರ ಮಾಡಿದ ಕರುಣಾ ಸಾಗರನು ಮಾಡುವನೆಂದೂ ಹೇಳುವುದಕ್ಕಾಗಿ ವ್ಯಾಗಸಂ ಎಂದು ಪ್ರಯೋಗಿಸಿ ರುತ್ತಾರೆ. ಇದರಿಂದ ಭರನ್ಯಾಸವನ್ನು ಅನುಷ್ಠಿಸಿದ ಪ್ರಪನ್ನನಿಗೆ ಉಪಾಯ ವೆಂದಿಗೂ ವಿಫಲವಾಗದೆಂದು ತಿಳಿಸುವದಕ್ಕಾಗಿಯೂ ವ್ಯಾಗಸಂ ಎಂಬ ಪ್ರಯೋಗವು. ಇಂತಹ ಸ್ವನಿಷ್ಠೆಯುಳ್ಳರಿತ ಪ್ರಪನ್ನನು ಶಾಸ್ತ್ರೀಯ ನಿಯಮಾನುಸಾರ ವಾಗಿ ಭಗವದ್ಭಾಗವತ ಕೈಂಕರ್ಯಗಳನ್ನೆಸಗುತ್ತಾ ದೇಹಾವಸಾನದವರೆಗೂ ಇರತಕ್ಕ ಸ್ಥಳವು, ತನ್ನ ಈಗಿನ ಮಹತ್ತಾದ ದೆಶೆಗೆ ಉಚಿತವಾದ ಸ್ಥಳಗಳಾದ ಶ್ರೀರಂಗಾದಿ ದಿವ್ಯದೇಶಗಳಾಗಲಿ ಅಥವಾ ಭಾಗವತ ಮಂಡಲಿಯಿರುವ ಸ್ಥಳಗಳಾಗಲಿ ಆಗಬಹುದೆಂದು ಹೇಳಿ ಅವರುಗಳ ಮಧ್ಯೆ ಇರಬೇಕಾದುದು ಆವಶ್ಯಕವೆಂದು ಕ್ವಾಪಿ ಎಂಬ ಶಬ್ದದಿಂದ ಜ್ಞಾಪಿಸಿರುತ್ತಾರೆ.

ಕೊನೆಗೆ ಇಂತಹ ಮಹತ್ತಾದ ಉಪಾಯವನ್ನವಲಂಬಿಸಿ ಪ್ರಪನ್ನನೆನಿಸಿದವನಿಗೆ ದೇಹಾವಸಾನದಲ್ಲಿ ಈತನು ಹೇಗೆ ದಿವ್ಯ ವೈಕುಂಠವನ್ನು ಸೇರುವನು ಎಂಬುದನ್ನು ಜ್ಞಾಪಕಕ್ಕೆ ತರುವದಕ್ಕಾಗಿ ನಿರ್ಮುಕ್ತಸ್ಥೂಲಸೂಕ್ಷ್ಮಪ್ರಕೃತಿಃ ಎಂದು ನಿರ್ಯಾಣಾಧಿಕಾರಾರ್ಥವನ್ನು ಹೇಳಿರುತ್ತಾರೆ. ಮೊದಲು ದೇಹಾವಸಾನದಲ್ಲಿ ಸ್ಥೂಲ ಶರೀರದ ವಿಯೋಗವೂ, ಅನಂತರ ಅರ್ಚಿರಾದಿಗತಿಯಲ್ಲಿ ವಿರಜಾವಗಾಹನೆ ಯಿಂದ ಸೂಕ್ಷ್ಮಶರೀರವಿಯೋಗವೂ ಉಂಟಾಗುತ್ತದೆಂಬುದನ್ನು ಇದರಿಂದ ತಿಳಿಸುತ್ತಾರೆ. ಪ್ರಪನ್ನನಿಗೆ ಉತ್ಕ್ರಾಂತಿಯು ಉಂಟಾಗುವಾಗ ಸೂಕ್ಷ್ಮರೂಪದಲ್ಲಿ

ಇಂದ್ರಿಯಗಳೆಲ್ಲಾ ಮನಸ್ಸಿನಲ್ಲೂ, ಅವೆಲ್ಲವೂ ಪ್ರಾಣದಲ್ಲೂ, ಅನಂತರ ಜೀವಾತ್ಮನಲ್ಲೂ, ಹೀಗೆ ಭೂತಸೂಕ್ಷ್ಮದೊಂದಿಗೆ ಪರಮಾತ್ಮನಲ್ಲಿ ಈತನು ಸೇರುವನು ; ಅಲ್ಲಿಂದ ಆತನ ಕೃಪೆಯಿಂದ ಸುಷುಮ್ನಾ ನಾಡಿಯ ಮೂಲಕ ಅರ್ಚಿರಾದಿ ಗತಿಯನ್ನು ಹೊಂದುವನು ; ಮೋಕ್ಷವಲ್ಲದೆ ಫಲಾಂತರಾಪೇಕ್ಷೆಯುಳ್ಳವನಾದರೆ ಮಿಕ್ಕ ಹೃದಯದ ನೂರು ನಾಡಿಗಳ ಮೂಲಕ ಹೊರಟು ಧೂಮಾದಿ ಇತರ ಮಾರ್ಗಗಳ ಮೂಲಕ ಹೋಗಿ ತನ್ನ ಕರ್ಮಗಳಿಗೆ ಯೋಗ್ಯವಾದ ಫಲವನ್ನು ಹೊಂದುವನು. ಪ್ರಪನ್ನನಾದರೋ ಮೇಲೆ ಹೇಳಿದ ಅರ್ಚಿರಾದಿ ಗತಿಯನ್ನು ಹೊಂದಿದವನಾಗಿ, ಅರ್ಚಿಸ್, ಎಂದರೆ ಅಗ್ನಿ, ಅಹಸ್, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ ಎಂಬ ಆತಿವಾಹಿಕರುಗಳಿಂದ ಸತ್ಕರಿಸಲ್ಪಟ್ಟವನಾಗಿ ಅವರುಗಳಿಂದ ಮಾರ್ಗತೋರಿಸಲ್ಪಟ್ಟವನಾಗಿಮುಂದಕ್ಕೆ ತೆರಳುವನು ಸಂವತ್ಸರ ದೇವತೆಯಾದ ನಂತರ ವಾಯು (ದೇವಲೋಕವೆಂದು ಅಪರನಾಮಧೇಯವು) ದೇವತೆಯೂ ಅಲ್ಲಿಂದ ರಥಚಕ್ರದಹಾಗಿರುವ ಒಂದು ರಂಧ್ರದ ಮೂಲಕ ಆದಿತ್ಯನನ್ನು ಸೇರುವನು ; ಅಲ್ಲಿಂದ ಚಂದ್ರನನ್ನು ಸೇರಿದುಂದುಭಿ ರಂಧ್ರದಹಾಗಿರುವ ಮಾರ್ಗಮೂಲಕ ಹೋಗಿ ವೈದ್ಯುತನನ್ನು ಸೇರುವನು. ಇವನಿಗೆ ಅಮಾನವನೆಂಬದಾಗಿಯೂ ಹೆಸರು. ಈತನೇ ಈ ಪ್ರಪನ್ನನನ್ನು ವರುಣ, ಇಂದ್ರ, ಚತುರ್ಮುಖ ಬ್ರಹ್ಮರಿಂದ ಸತ್ಕರಿಸಲ್ಪಟ್ಟ ನಂತರ ಪರಮಪದಕ್ಕೆ ಕರೆದುಕೊಂಡು ಹೋಗಿ ಸರ್ವೇಶ್ವರನಮುಂದೆ ನಿಲ್ಲಿಸುವವನು ದಿವ್ಯ ವೈಕುಂಠಲೋಕದ ಎಲ್ಲೆಯಲ್ಲಿ ವಿರಜೆ ಎಂಬ ಅಮೃತನದಿಯುಂಟು. "ವೈಕುಂಠಸೀಮ್ನಿ ವಿರಜಾಂ ಸ್ಯಂದಮಾನಾಂ ಮಹಾನದೀಂ" ಎಂಬ ಪ್ರಮಾಣದಿಂದ ಇದನ್ನು ಗ್ರಹಿಸಬಹುದು. "ಗತ್ವಾ ಯೋ ವಿರಜಾಂ ವಿಮುಂಚತಿ ತನುಂ ಸೂಕ್ಷ್ಮಾಂ" ಎಂದು ಹೇಳಲ್ಪಟ್ಟಿರುವದರಿಂದ ಇಲ್ಲಿ ಆತನ ಸೂಕ್ಷ್ಮ ಶರೀರವು ಬಿಟ್ಟು ತೊಲಗುತ್ತದೆ. ಇವೆಲ್ಲಾ ಅಭಿಪ್ರಾಯಗಳಿಗೂ ಸಂಗ್ರಾಹಕವಾಗಿ "ನಿರ್ಮುಕ್ತಸ್ಥೂಲ ಸೂಕ್ಷ್ಮ ಪ್ರಕೃತಿಃ" ಎಂದು ಪ್ರಯೋಗಿಸಿರುತ್ತಾರೆ. (ಗತಿಚಿಂತನಾಧಿಕಾರಾರ್ಥವು.)

ಹೀಗೆ ವಿರಜಾವಗಾಹನದಿಂದ ಸರ್ವಹೇಯ ಸಂಬಂಧವನ್ನೂ ಕಳೆದುಕೊಂಡವನಾಗಿ, ಜೊತೆಯಲ್ಲಿದ್ದ ಅಮಾನವನೆಂಬ ನಿತ್ಯಸೂರಿಯ ಕರಸ್ಪರ್ಶವನ್ನು ಹೊಂದಿ ದಿವ್ಯಮಂಗಳ ವಿಗ್ರಹಯುಕ್ತನಾಗಿ, ಕೋಟಿಸೂರ್ಯಪ್ರಕಾಶವುಳ್ಳದ್ದಾಗಿ, ತೇಜೋಮಯವಾಗಿ ಶುದ್ಧ ಸತ್ವವಾಗಿರುವ ದಿವ್ಯವೈಕುಂಠಲೋಕವನ್ನು ಹೊಂದುವನು. ಉಪನಿಷತ್ತುಗಳಲ್ಲೂ ಭಗವಚ್ಛಾಸ್ತ್ರ ಸಂಹಿತೆಗಳಲ್ಲೂ ಹಾಗೆಯೇ ಶ್ರೀಯತಿವರ್ಯರ ವೈಕುಂಠಗದ್ಯದಲ್ಲೂ ಹೇಳಿರುವ ಮೇರಿಗೆ, ಮಾರ್ಗದಲ್ಲಿ ಅರ

ವೆಂದೂ, ಅರಣ್ಯವೆಂದೂ, ಹೆಸರುಳ್ಳ ಅಮೃತಮಯವಾದ ಸಮುದ್ರಗಳನ್ನೂ ದಿವ್ಯೋದ್ಯಾನಮಣಿಪರ್ವತ ಪ್ರದೀತಟಾಕಗಳನ್ನೂ ಐರಮ್ಮದೀಯ ವೆಂಬ ಅಮೃತ ಸರಸ್ಸನ್ನೂ ದಾಟಿ ಅಲ್ಲಿಂದ ಮುಂದಕ್ಕೆ ಬಹು ಮನೋಹರನಾಗಿ ಸೂರಿಸೇವ್ಯ ವಾದ ಸೋಮಸವನವೆಂಬ ಅಶ್ವತ್ಥವನ್ನೂ ಸೇರುವನು. ಅಲ್ಲಿಂದ ಮುಂದೆ ಐನೂರು ದಿವ್ಯಾಪ್ಸರಸ್ಸುಗಳು ನೂರುನೂರಾದ ಗುಂಪಿನಲ್ಲಿರುವವರಾಗಿ ಈ ಹೊಸ ಮುಕ್ತನನ್ನು ಬ್ರಹ್ಮಾಲಂಕಾರ ಮೂಲಕ ಅಲಂಕರಿಸುವರು. ಅಲ್ಲಿಂದ ಮುಂದಕ್ಕೆ ಗೋಪುರ ಬಾಗಲನ್ನು ದಾಟಿ, ಹಿರಣ್ಮಯವಾದ ದಿವ್ಯ ವಿಮಾನವನ್ನು ಸೇರಿ, ಅಲ್ಲಿ ಚಂಡಾದಿ ದ್ವಾರಪಾಲಕರಿಂದ ಸತ್ಕೃತನಾಗಿ ಮಂಟಪವನ್ನು ಪ್ರವೇಶಿಸಿ, ಸಭೆಯ ನಿತ್ಯಸೂರಿಗಳ ಅರುಳಪ್ಪಾಡು ಮೂಲಕವಾಗಿ ಶ್ರಿಯಃಪತಿಗೆ ಅಭಿಮುಖ ನಾಗಿ ನಿಂತು ಲಕ್ಷ್ಮೀನಾರಾಯಣರಿಬ್ಬರಿಗೂ ಸಾಷ್ಟಾಂಗವೆರಗುವನು ಅಲ್ಲಿ ಲಕ್ಷ್ಮಿಯೂ ನಾರಾಯಣನೂ ಹೇಗೆ ಸೇವೆಯನ್ನೀಯುವರೆಂಬುದನ್ನು ಶ್ರೀ ವೈಕುಂಠ ಗದ್ಯದ ಮೂಲಕ ಗ್ರಹಿಸಬಹುದು ಶ್ರೀ ಆಳವಂದಾರ್ರವರು ಅನುಗ್ರಹಿ ಸಿರುವ ಸ್ತೋತ್ರರತ್ನದಲ್ಲೂ ಕಾಣಬಹುದು. ಪಂಚಾಯುಧ ಮೊದಲಾದ ದಿವ್ಯಾ ಯುಧ ದಿವ್ಯಾಭರಣ ಪೀತಾಂಬರ ವನಮಾಲಾದಿಗಳಿಂದಲೂ ಅಲಂಕೃತನಾಗಿ ನಿತ್ಯ ಮುಕ್ತರುಗಳಿಂದ ಸೇವಿತನಾಗಿ ಲಕ್ಷ್ಮಿಯಿಂದಲೂ ಭೂಮಿ ನೀಳಾದೇವಿಗಳಿಂದಲೂ ಸೇವಿತನಾಗಿ, ಸಾಮಗಾನದಿಂದ ಸ್ತುತಿಸಲ್ಪಟ್ಟವನಾಗಿ, ಶೇಷ ಪರ್ಯಂಕದಲ್ಲಿದ್ದು ಕೊಂಡು, ಸಕಲ ವಿಭೂತಿಗಳನ್ನೂ ಧರಿಸಿದವನೆಂದು ತಿಳಿಸುವದಕ್ಕಾಗಿ ಆಯಾ ಅಭಿಮಾನ ದೇವತೆಗಳನ್ನೆಲ್ಲಾ ಆ ಶ್ರಿಯಃಪತಿಯ ಅವಯವಗಳಲ್ಲಿ ಸರ್ವ ತತ್ವಗಳ ಮೂಲಕ ಪರಿಪೂರ್ಣನನ್ನಾಗಿ ಕಾಣುವನು. ಶ್ರಿಯಃಪತಿಯು ತನಗೆ ಮಾಡಿದ ಮಹೋಪಕಾರಕ್ಕಾಗಿಯೂ, ತನ್ನ ಆಚಾರ್ಯರುಗಳನ್ನು ಕೂಡ ಆ ಸಭೆಯಲ್ಲೇ ಕಂಡು ಅವರುಗಳು ಪುರುಷಕಾರರೂಪದಲ್ಲಿ ಮಾಡಿದ ಮಹೋಪಕಾರಕ್ಕೂ ಸಹ, ಕೃತಜ್ಞತಾಭಾವದಿಂದ ಆನಂದಸಾಗರದಲ್ಲಿ ಮಗ್ನನಾದಂತೆ ತಿಳಿಯುವನು. ಈತನು ಶ್ರಿಯಃಪತಿಯ ಚರಣಾರವಿಂದವನ್ನೇ ಉಪಾಯವಾಗಿ ವರಿಸಿದವನಾದುದರಿಂದ ಲೋಕಜನಕ ಜನನಿಗಳಾದ ಇಬ್ಬರೂ ಈತನನ್ನೆತ್ತಿ ತಮ್ಮ ಪಾದಗಳಲ್ಲಿಟ್ಟವರಾಗಿ, ಅಸದೃಶವಾದ ಪರಮಾನುರಾಗದಿಂದ ತಮಗೆ ಸಮಾನವಾದ ಭೋಗವನ್ನು ಏರ್ಪ ಡಿಸಿದವರಾಗಿ, ಹೀಗೆ ಪರಿಪೂರ್ಣಬ್ರಹ್ಮಾನುಭವದಆನಂದವನ್ನೂ, ತಮಗೆ ಕೈಂಕರ್ಯ ಮಾಡುವ ಸಾಮ್ರಾಜ್ಯವನ್ನೂ ಒದಗಿಸಿ ಕೊಟ್ಟು ತಮ್ಮ ಶರಣಾಗತ ಪರಿಪಾಲನಾ ರೂಪಸುಸಙ್ಕಲ್ಪವನ್ನು ಕಾಪಾಡಿಕೊಂಡು "ಕೃತಕೃತ್ಯಸ್ತದಾರಾವೋವಿಜ್ವರಃ ಪ್ರಮುಮೋದಹ" ಎಂದು ಹೇಳಿರುವಹಾಗೆ ಶ್ರಿಯಃಪತಿಯೂ ವಿಷ್ಣುಪತ್ನಿಯೂ ಪರಮಾನಂದ ಭರಿತರಾಗುವರು. ಹೀಗೆ ಈ ಚೇತನನು ಪರಿಪೂರ್ಣ ಬ್ರಹ್ಮಾನು

ಭವವನ್ನು ಹೊಂದುವನು ಎಂಬುದನ್ನು ಜ್ಞಾಪಕಕ್ಕೆ ಕೊಡುವದಕ್ಕಾಗಿ, **ಅನುಭವತ್ಯಚ್ಯುತಂ** ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ ಅಚ್ಯುತನ ಅನುಭವಪ್ರಾಪ್ತಿಯು ಭಗವತ್ಕೈಂಕರ್ಯಪ್ರಾಪ್ತಿಗೂ ಉಪಲಕ್ಷಣವು. **ನಿತ್ಯಮನುಭವತಿ** ಎಂದು ಹೇಳಿರುವದರಿಂದ ಈ ಅನುಭವದಿಂದ ಪುನರಾವರ್ತಿ ಎಂದು **ಪುನಃ** ಸಂಸಾರ ಬಂಧವು ಇಲ್ಲವೆಂದು ಹೇಳಲ್ಪಟ್ಟಿತು. ಇದು ಪರಿಪೂರ್ಣಬ್ರಹ್ಮಾನುಭವಾಧಿಕಾರಾರ್ಥವು. ಇಂತಹ ಅತ್ಯರ್ಥಪ್ರಿಯನಾದ ಜ್ಞಾನಿಯನ್ನು ಸರ್ವೇಶ್ವರನೇ ಎಂದಿಗೂ ಪರಮಪದದಿಂದ ಈ ಲೋಕಕ್ಕೆ ಹೋಗುವಹಾಗೆ ಕಳುಹಿಸಿಬಿಡುವದಿಲ್ಲವು; ಆದರೆ ವೈದಿಕ ಪುತ್ರರನ್ನು ಶ್ರೀ ಕೃಷ್ಣನು ತಂದು ಬ್ರಾಹ್ಮಣನಿಗೆ ಕೊಟ್ಟು ಅರ್ಜುನನ ಸಂಕಲ್ಪಕ್ಕೆ ವಿಘಾತ ಬಂದಹಾಗೆ ಮಾಡಲಿಲ್ಲವೇ ? ಎಂದರೆ ಆ ಪುತ್ರರುಗಳಿಗೆ ಅರ್ಚಿರಾದಿ ಗತಿಯ ಮೂಲಕ ಈ ಪರಮಪದಪ್ರಾಪ್ತಿಯುಂಟಾಗಿರಲಿಲ್ಲವೆಂದು ತಿಳಿಯತಕ್ಕದ್ದಾಗಿರುತ್ತದೆ. ಆ ಪುತ್ರರುಗಳಿಗೆ ಉಂಟಾದುದು ಮೋಕ್ಷಪ್ರಾಪ್ತಿಯಲ್ಲವು ಅರ್ಜುನನ ಅಹಂಕಾರ ಶಮನಾರ್ಥವಾಗಿ ಮಾಡಿದ ಕೌತುಕವೆಂದು ಭಾವಿಸತಕ್ಕದ್ದಾಗಿರುತ್ತದೆ. ಮತ್ತು ಇಂತಹ ನಿರತಿಶಯವಾದ ಆನಂದದಲ್ಲಿರುವ ಮುಕ್ತನು, ತಾನೇ ಪುನಃ ಇಲ್ಲಿನ ಬಂಧರೂಪವಾದ ದೆಸೆಯನ್ನು ಅಪೇಕ್ಷಿಸುವದಿಲ್ಲವು. ಈ ಅಭಿಪ್ರಾಯವನ್ನು ಜ್ಞಾಪಕಕ್ಕೆ ತರುವದಕ್ಕಾಗಿ **ನಿತ್ಯಂ**-ಸದಾ, ಅನುಭವಿಸುವನೆಂದು ಹೇಳಲ್ಪಟ್ಟಿತು.

ಆದುದರಿಂದ ಮುಕ್ತನು ಆವರ್ತಿಸುವದಿಲ್ಲವು ಎಂದು ಹೇಳಿದುದರ ಮುಖ್ಯಾಭಿಪ್ರಾಯವೇನೆಂದರೆ ಅವನಿಗೆ ಸಂಸಾರಬಂಧವಿಲ್ಲವೆಂಬ ಅಭಿಪ್ರಾಯ ಮಾತ್ರವೇ ವಿನಾ ಆತನಿಗೇನೆ ಅಪೇಕ್ಷೆಯುಂಟಾದರೆ, ಅಪೇಕ್ಷಿತ ಲೋಕಗಳಲ್ಲಿ ಸಂಚಾರ ಮಾಡುವ ಶಕ್ತಿಯುಂಟೆಂದು ಶ್ರುತಿಯೇ ಹೇಳುತ್ತದೆ, ಹೇಗೆಂದರೆ:—

“**ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ**” (ಛಾಂ. ೭. ೨೫. ೨) “**ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್**” (ತೈ. ಭೃಗು ೧೦ ೫) ಹೀಗೆ ನಿತ್ಯರೂ ಮುಕ್ತರೂ ಸಹ ತಾವಾಗಿಯೇ ಈಶ್ವರಾಜ್ಞೆ ಮೂಲಕ ಆಳ್ವಾರ್ ಆಚಾರ್ಯರೂಪದಿಂದ ಅವತರಿಸಬಹುದು ಆದ ಪ್ರಯುಕ್ತ ಅಂತವರ ವಿಷಯದಲ್ಲಿ ಕೇವಲ ಮಾನುಷಶರೀರವನ್ನಾಶ್ರಯಿಸಿದವರೆಂಬ ಭಾವನೆಯುಳ್ಳವನು ನರಕಭಾಗಿಯಾಗುವನೆಂದು ಹೇಳಲ್ಪಟ್ಟಿರುತ್ತದೆ.

ಹೀಗೆ ಮೇಲೆ ಹೇಳಿದ ತತ್ವಜ್ಞಾನವನ್ನು ಹೊಂದಿದವನಾಗಿ ಉಪಾಯಾನುಷ್ಠಾನವನ್ನು ಮಾಡಿ ಉತ್ತರಕೃತ್ಯಗಳನ್ನು ಶಾಸ್ತ್ರ ನಿಯಮಾನುಸಾರ ನಡೆಸಿ ದೇಹತ್ಯಾಗಮಾಡಿ ಪರಮಾತ್ಮನನ್ನು ಸೇರುವದು ದುರ್ಲಭವೆಂಬುದರಲ್ಲೇನೂ ಸಂದೇಹವಿಲ್ಲವು. ಆದುದರಿಂದಲೇ **ನಿತ್ಯಮೇಕಃ** ಎಂದು ಮುಗಿಸಿರುತ್ತಾರೆ.

**ಅನುಭವತಿ** ಎಂದು ಹೇಳಿರುವದರಿಂದ ಶೇಷತ್ವವೇ ಅಸಾಧಾರಣ ಧರ್ಮವಾದ ಈ ಮುಕ್ತನಿಗೆ ತನ್ನ ಸ್ವಾಮಿಗೆ ಕೈಙ್ಕರ್ಯವನ್ನೆಸಗುವದೂ ಅನುಭವದಲ್ಲೇ ಸೇರಿದುದರಿಂದ ತನ್ನ ಶೇಷಿಗೆ ನಿತ್ಯಸೇವೆಯನ್ನೆಸಗುವ ಕೈಙ್ಕರ್ಯ ಸಾಮ್ರಾಜ್ಯ ಪದವಿಯನ್ನೂ ಅನುಭವಿಸುವನೆಂಬ ಭಾವವೂ ದ್ಯೋತಿತವು.

ಎಂಬಲ್ಲಿಗೆ

ಶ್ರೀಮದ್ರಹಸ್ಯತ್ರಯಸಾರದ

ಪ್ರಥಮಭಾಗವಾದ **ಅರ್ಥಾನುಶಾಸನಭಾಗಕ್ಕೆ**

**ತಿರುನಾರಾಯಣಪುರಂ ವಿಜಯರಾಘವ ಶರ್ಮನ**

**ಆಚಾರ್ಯಹೃದಯಾನ್ವೇಷಿಣೀ**

ಎಂಬ ಕನ್ನಡ ಅರ್ಥ ತಾತ್ಪರ್ಯಗಳು **ಸಮಾಪ್ತವಾದವು**

**ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ**

